# ಶ್ರೀ ವಿದ್ಯಾರಣ್ಯರು

ಓ. ಎನ್. ಲಿಂಗಣ್ಣಯ್ಯ, ಬಿ.ಎ., (ಆನರ್ಸ್.)

# ಶ್ರೀ ವಿದ್ಯಾರಣ್ಯರು

ಪ್ರಸ್ತಾವನೆ:

**ಶ್ರೀಮಾನ್ ಆಲೂರು ವೆಂಕಟರಾಯರು,** ಬಿ.ಎ., ಎಲ್‌ಎಲ್.ಬಿ.,

ಅವರಿಂದ

ಮುನ್ನುಡಿ:

**ಶ್ರೀಮಾನ್ ದೇವುಡು ನರಸಿಂಹಶಾಸ್ತ್ರೀ,** ಎಂ.ಎ.,

ಅವರಿಂದ

ಗ್ರಂಥಕರ್ತ:

**ಶ್ರೀಮಾನ್ ಓ. ಎನ್. ಲಿಂಗಣ್ಣಯ್ಯ,** ಬಿ.ಎ. (ಆನರ್ಸ್)

ಪ್ರಕಾಶಕರು:

**ಎಸ್. ಎಸ್. ಎನ್. ಬುಕ್ ಡಿಪೋ**

**ಸಿಟಿ ಮಾರ್ಕೆಟ್, ಬೆಂಗಳೂರು ಸಿಟಿ**

೧೯೪೬

೧-೮-೦]　　　　[ಒಂದೂವರೆ ರೂಪಾಯಿ

# ಪ್ರಸ್ತಾವನೆ

ಶ್ರೀಮಾನ್ ಓ. ಎನ್ ಲಿಂಗಣ್ಣಯ್ಯನವರು ಬರೆದಿರುವ "ಶ್ರೀ ವಿದ್ಯಾರಣ್ಯರು" ಎಂಬ ಈ ಪುಸ್ತಕವನ್ನು ಆಮೂಲಾಗ್ರವಾಗಿ ಓದಿ ನೋಡಿದೆನು.

ಇದು ಕರ್ನಾಟಕಸಿಂಹಾಸನಸ್ಥಾಪನಾಚಾರ್ಯರಾದ ಶ್ರೀ ವಿದ್ಯಾರಣ್ಯರ ಜೀವನಸಾರವನ್ನು ಕರ್ನಾಟಕದ ಉಜ್ವಲವಾದ ಅಭಿಮಾನದಿಂದ ಊಹಿಸಿ ಬರೆದ ಚಾರಿತ್ರಿಕ ಕಥೆ. ಕೇವಲ ಐತಿಹಾಸಿಕ ಸಂಗತಿಗಳನ್ನು ಸಾಣಿಗೆಯಲ್ಲಿ ಚಾಳಿಸಿ ತೆಗೆದು ಇದು ಬರೆಯಲ್ಪಟ್ಟಿರದಿದ್ದರೂ ಸತ್ಯದ ತಿರುಳನ್ನು ಬಿಟ್ಟಿಲ್ಲ. ಇಂದಿನ ವಿಚಾರಗಳನ್ನು ಹಿಂದಿನಕಾಲದಲ್ಲಿ ಹೊಯ್ದಿದ್ದರೂ ಆಗಿನ ಸಮಾಜಸ್ಥಿತಿಯನ್ನು ಇದ್ದಕ್ಕಿದ್ದಂತೆ ರೂಪಿಸಿದೆ. ಜಾತಿ, ಮತ, ಪಂಥ ಇವುಗಳ ಒಣ ಅಥವಾ ಒಳ ದುರಭಿಮಾನಕ್ಕೆ ಒಳಗಾಗದೆ, ಅವುಗಳನ್ನು ಮೀರಿದ ಮೇಲಂತಸ್ತಿನಲ್ಲಿ ನಿಂತು ಇದು ಬರೆಯಲ್ಪಟ್ಟಿರುವುದರಿಂದಲೂ, ದೇಶಾಭಿಮಾನವು ಇದರಲ್ಲಿ ತುಂಬಿ ತುಳುಕುತ್ತಿರುವುದರಿಂದಲೂ ಈಗಿನ ತರುಣರಿಗೆ ಅತ್ಯಂತ ಸ್ಫೂರ್ತಿದಾಯಕವಾಗಿದೆ. ವಿಚಾರಗಳಲ್ಲಿ ಗಾಂಭೀರ್ಯವಿದೆ; ಬರಹದಲ್ಲಿ ತೇಜವಿದೆ. ಕೇವಲ ಪಂಪರನ್ನರನ್ನೋದಿ ಸಾಹಿತಿಗಳಾಗಲು ಹವಣಿಸುವವರ ಕೃತ್ರಿಮತೆ ಇದರಲ್ಲಿ ಇಲ್ಲ. ಗ್ರಂಥಕರ್ತರ ಲೇಖನ ಶಕ್ತಿ ಸ್ಫುಟವಾಗಿ ಕಾಣುತ್ತಿದೆ. ಅವರ ಅಭಿಮಾನ ಉಕ್ಕಿ ಹರಿಯುತ್ತಿದೆ.

ಕನ್ನಡದಲ್ಲಿ ಐತಿಹಾಸಿಕ ಸಾಧನಗಳ ಸಂಗ್ರಹವೇ ಇನ್ನೂ ಸಾಕಷ್ಟು ಆಗಿಲ್ಲ; ಸಂಶೋಧನವಂತೂ ಒತ್ತಟ್ಟಿಗೇ ಉಳಿಯಿತು. ಸಾಹಿತಿಗಳಿಗೆ ಸಾಧನ ಸಿದ್ಧತೆ ಮಾಡಿಕೊಡುವ ಕೆಲಸ ಸಂಶೋಧಕರದು. ಕನ್ನಡಿಗರಲ್ಲಿ ಐತಿಹಾಸಿಕಭಾವನೆಯು ಮತ್ತು ಅಭಿರುಚಿಯು ಅಭಾವವಿದೆ. ಸಾಧನ ಸಂಗ್ರಹವು ಆನಂದದಾಯಕವಾದ ಕಲೆಯೆಂಬುದನ್ನು ಅನೇಕರು ಅರಿಯರು.

ಸಂಶೋಧನವು ಉಪಯುಕ್ತವಾದ ಶಾಸ್ತ್ರವು ; ಗಹನವಾದ ತತ್ವಜ್ಞಾನವು. ತಿಥಿ ತಾರೀಖುಗಳ ಮಾಲೆಯು ಇತಿಹಾಸವಲ್ಲ ; ಅವು ಕೇವಲ ಹೆಗ್ಗುರುತು ಗಳು. ನಿಜವಾದ ಇತಿಹಾಸವನ್ನು ನಾವು ಕಣ್ಣೊಳಗೆ ಅಂಜನ ಹಾಕಿ ಕೊಂಡು ಹುಡುಕಬೇಕಾಗುತ್ತದೆ. ಅದರೊಳಗಿನ ಪದಾರ್ಥಗಳನ್ನು "ಕ್ಷ" ಕಿರಣ ಗಳಿಂದ ಕಾಣಬೇಕಾಗುತ್ತದೆ. ಇತಿಹಾಸಸಂಶೋಧಕರು ಮೋಹಂಜೋ ದಾರೋಪಟ್ಟಣವನ್ನು ಹುಡುಕಿ ತೆಗೆದರಷ್ಟೇ; ಹಾಗೆಯೇ ಸ್ವತಃ ಇತಿಹಾಸ ವೆಂಬುದೆಲ್ಲವೂ ಕೂಡ ಒಂದು ದೊಡ್ಡ ಮೋಹಂಜೋದಾರೋ ಪಟ್ಟಣ ವಾಗಿದೆ. ಅದರೊಳಗಿನ ಸತ್ಯವನ್ನು ಕಂಡು ಹಿಡಿಯುವುದಕ್ಕೂ ಒಳ್ಳೇ ನಿಷ್ಣಾತರಾದ ಸಂಶೋಧಕರೇ ಬೇಕಾಗುತ್ತಾರೆ. ಹೀಗೆ ಇದು ಕಠಿನ ವಿಷಯವಾಗಿರುವುದರಿಂದ, ತರುಣರಿಗೆ ಇತ್ತ ಲಕ್ಷ್ಯ ಕಡಿಮೆ. ಅವರಿಗೆ ಪರಿ ಶ್ರಮ ಮಾಡಲಿಕ್ಕೆ ಬೇಡ ; ತಪಶ್ಚರ್ಯ ಮಾಡಲಿಕ್ಕೆ ಬೇಡ. ಕೈಯಲ್ಲಿ ಲೆಕ್ಕ ಣಿಕೆಯನ್ನು ಹಿಡಿದ ಕೂಡಲೆ, ಅನಾಯಾಸವಾಗಿ ಮನಸ್ಸಿಗೆ ಬಂದಂತೆ ಸರ ಸರನೆ ನೂರಾರು ಪುಟಗಳನ್ನು ಗೀಚಿ ತೆಗೆದು "ಸಾಹಿತಿ"ಗಳಾಗಲಿಕ್ಕೆ ಬರ್ರ ವಂತಿರಲು ಇಷ್ಟೆಲ್ಲ ದೀರ್ಘಸಾಹಸಮಾಡುವುದು ಯಾರಿಗೆ ಬೇಕು ? ಇತಿ ಹಾಸವು ಸದ್ಯದ ಜೀವನದ ಸಮಸ್ಯೆಗಳನ್ನು ಬಿಡಿಸುವುದಕ್ಕೆ ಮಹತ್ವದ ಸಾಧನವಾಗಿದೆಂಬುದು ನಮ್ಮ ತರುಣರಿಗೆ ಗೊತ್ತಾದರೆ ಮತ್ತು ಅದು ನಮ್ಮ ಮುಂದಿನ ಭವಿತವ್ಯತೆಯನ್ನು ಹೇಗೆ ಮಾರ್ಪಾಟು ಮಾಡಬಹುದೆಂಬುದು ಅವ ರಿಗೆ ತಿಳಿದರೆ ಮಾತ್ರ ಅವರು ಇತ್ತ ಲಕ್ಷ್ಯ ಹಾಕಿಯಾರು.

ಆ ದೃಷ್ಟಿಯಿಂದ ಶ್ರೀ ವಿದ್ಯಾರಣ್ಯರ ಚರಿತೆಗೆ ಬಹಳ ಮಹತ್ವವಿದೆ. ಇತಿಹಾಸದಲ್ಲಿ ಮುಖ್ಯ ಎರಡು ಭಾಗಗಳು. (೧) ರಾಜಕೀಯ ಇತಿಹಾಸವು (೨) ಸಾಂಸ್ಕೃತಿಕ ಇತಿಹಾಸವು. ರಾಜಕೀಯ ಇತಿಹಾಸವು ಹಿನ್ನೆಲೆ ಮಾತ್ರ. ನಿಜವಾದ ಇತಿಹಾಸವೆಂದರ ಸಾಂಸ್ಕೃತಿಕ ಇತಿಹಾಸವೇ. ಶ್ರೀ ವಿದ್ಯಾರಣ್ಯರ ಚರಿತೆಯು ಇವೆರಡೂ ದೃಷ್ಟಿಯಿಂದ ಬೋಧಪ್ರದವಾಗಿದೆ. ಶ್ರೀ ವಿದ್ಯಾರಣ್ಯರು ಒಬ್ಬ ವ್ಯಕ್ತಿಗಳಲ್ಲ, ಆಕಾಲದ ಪ್ರತಿನಿಧಿಗಳು ; ಪ್ರತಿನಿಧಿ ಗಳು ಮಾತ್ರವೇ ಅಲ್ಲ, ಮಧ್ಯಯುಗದ ಮುಖಂಡರು. ಅವರು ತಮ್ಮ ಕಾಲದಲ್ಲಿ ಉದ್ಭವಿಸಿದ ಅನೇಕ ತರಹದ ಸಮಸ್ಯೆಗಳ ಸಮನ್ವಯವನ್ನು ಮಾಡಿ ತೋರಿಸಿರುವರು. ಅವು ಯಾವುವು ಎಂಬುದನ್ನು ಹೇಳುವ ಮುಂಚೆ

ಮಧ್ಯ ಯುಗಕ್ಕಿಂತ ಹಿಂದೆ ಹಿಂದುಸ್ಥಾನದ ಸ್ಥಿತಿ ಹೇಗಿತ್ತೆಂಬುದನ್ನು ನಾವು ತಿಳಿಯುವ. ಮಧ್ಯಯುಗಕ್ಕಿಂತ ಮುಂಚೆಯೇ ಹಿಂದುಸ್ಥಾನವು ಸಾಂಸ್ಕೃತಿಕ ಅಖಂಡತ್ವವನ್ನು ಪಡೆದಿತ್ತು. ಆ ಸಂಸ್ಕೃತಿಯ ಮೂಲ ಉಗಮವು ಶ್ರುತಿ–ಸ್ಮೃತಿ – ಪುರಾಣಗಳಲ್ಲಿ ಇದೆ. ಅಲ್ಲಿಂದ ಹೊರಟ ಪ್ರವಾಹವು ನಡುನಡುವೆ ಅನೇಕ ವಿಘ್ನಗಳುಂಟಾಗಿದ್ದರೂ ಅವೆಲ್ಲವನ್ನೂ ಜೀರ್ಣಿಸಿಕೊಂಡು ತನ್ನ ವೈಶಿಷ್ಟ್ಯವನ್ನು ಕಾದುಕೊಂಡಿತ್ತು. ಬೌದ್ಧ–ಜೈನ ಮತಗಳು ಬಂದು ವೇದಗಳ ವಿರುದ್ಧವಾಗಿತ್ತಲ್ಲದೆ, ಈ ಸಂಸ್ಕೃತಿಯ ವಿರುದ್ಧವಾಗಿ ಇದ್ದಿಲ್ಲ. ಅಂತೇ ನಮ್ಮ ಹಿಂದುಸ್ಥಾನವು ಸಂಸ್ಕೃತಿಯ ವಿಷಯದಲ್ಲಿ ಅಖಂಡತ್ವವನ್ನು ಸಂಪಾದಿಸಿಕೊಂಡಿತ್ತೆಂದು ಅನ್ನುತ್ತೇವೆ. ಆಸೇತುಹಿಮಾಚಲದವರೆಗಿನ ಸಂಸ್ಕೃತಿಯು ಒಂದೇ ಸಂಸ್ಕೃತಿಯು ಎಂದು ಬೊಟ್ಟುಮಾಡಿ ತೋರಿಸಲಿಕ್ಕೆ ಬರುವಷ್ಟು ಅದು ವಿಶಾಲತ್ವವನ್ನೂ ವೈಶಿಷ್ಟ್ಯವನ್ನೂ ಪಡೆದಿತ್ತು.

ಆ ಸಂಸ್ಕೃತಿಯ ಸ್ಥೂಲಸ್ವರೂಪವನ್ನು ಸಂಕ್ಷೇಪವಾಗಿ ಹೀಗೆ ಬಣ್ಣಿಸಬಹುದು. ಮಾನವರನ್ನು ಅವರವರ ಗುಣಕರ್ಮಗಳಿಗನುಸಾರವಾಗಿ ವಿಭಾಗಮಾಡಲು ನಾಲ್ಕು ಸ್ಥೂಲರಾಶಿಗಳಾಗುತ್ತವೆ. ಅವು ಯಾವುವೆಂದರೆ—(೧) ಸಾಂಸ್ಕೃತಿಕರು, (೨) ಸಂರಕ್ಷಕರು, (೩) ಸಾಂಪತ್ತಿಕರು, (೪) ಸೇವಕರು. ಈ ರಾಶಿಗಳು ಜಗತ್ತಿನಲ್ಲಿ ಎಂದಿಗೂ ಇದ್ದವುಗಳೇ, ಮುಂದೆಯೂ, ಉಳಿಯತಕ್ಕವುಗಳೇ. ಈ ರಾಶಿಗಳನ್ನು ಜನ್ಮದಿಂದ ನಿಶ್ಚಯಿಸಿ ಪರಂಪರೆಯನ್ನು ಕಾಯ್ದುಕೊಂಡು ಬಂದಿರುವುದೂ ಈ ನಾಲ್ಕೂ ವರ್ಗಗಳಲ್ಲಿ ಸಮತೋಲನವನ್ನಿಡಲು ಪ್ರಯತ್ನಿಸಿರುವುದೂ ಮಾತ್ರ ಈ ದೇಶದ ವೈಶಿಷ್ಟ್ಯವು (೧) ಅವರವರ ಯೋಗ್ಯತೆ (ಅಧಿಕಾರ) (೨) ಆನುವಂಶಿಕ ಸಂಸ್ಕಾರ (೩) ಷೋಡಶ ಸಂಸ್ಕಾರ (೪) ಆಶ್ರಮ ಪದ್ಧತಿ ಇವುಗಳ ಮೂಲಕ ವರ್ಣಾಶ್ರಮ ವ್ಯವಸ್ಥೆಯು–ಈಗ ಅದು ಎಷ್ಟೇ ನಿರ್ಜೀವಸ್ಥಿತಿಯಲ್ಲಿದ್ದರೂ ಇನ್ನೂ ಉಳಿದಿದೆ. ನಮ್ಮ ಸಮಾಜರಥವು (೧) ಜನ್ಮ, (೨) ದೀಕ್ಷೆ ಇವೆರಡು ಚಕ್ರಗಳಮೇಲೆ ಸಾಗಿದೆ. ಹಿಂದುಸ್ಥಾನದಲ್ಲಿ ಹುಟ್ಟಿದ ಯಾವ ಧರ್ಮವೂ ಜನ್ಮವನ್ನು ಪೂರಾ ಅಲ್ಲಗಳೆದಿರುವುದಿಲ್ಲ. ಜೈನ–ವೀರಶೈವ ಮುಂತಾದ ಧರ್ಮಗಳ ಚಾತುರ್ವರ್ಣ್ಯಕ್ಕೂ ಜನ್ಮಕ್ಕೂ ತೀರ ವಿರುದ್ಧವಾಗಿರುತ್ತವೆಂದು ಅನೇಕರ

ತರ್ಕ. ನಮಗೆ ಹಾಗೆ ತೋರುವುದಿಲ್ಲ. ನಾಲ್ಕು ವರ್ಣಗಳಲ್ಲಿ ಏಕಸೂತ್ರವನ್ನು ಪೋಣಿಸಲಿಕ್ಕೂ ಜನ್ಮದ ಬದಲು ದೀಕ್ಷೆಯನ್ನು ಹಿಡಿಯಲಿಕ್ಕೂ ಆ ಮತಗಳು ಯತ್ನಿಸಿದವು. ಆದರೆ ಜನ್ಮವನ್ನು ಪೂರಾ ಧಿಕ್ಕರಿಸಲಿಲ್ಲ. ಪರಂಪರಾಗಿ ಜನ್ಮವನ್ನೇ ಅವಲಂಬಿಸಿದವು ದೀಕ್ಷೆಯ ಮೂಲಕ ಹೊರಗಿನವರನ್ನು ಒಳಗೆ ಸೇರಿಸಿಕೊಳ್ಳುವ ಪದ್ಧತಿಯೂ ನಮ್ಮಲ್ಲಿ ಇತ್ತು. ಸಾರಾಂಶ ಚಾತುರ್ವರ್ಣ್ಯ ವ್ಯವಸ್ಥೆಯು ನಮ್ಮ ಧರ್ಮದ ಜೀವಾಳವು. ಚಾತುರ್ವರ್ಣ್ಯ ವ್ಯವಸ್ಥೆಯಲ್ಲಿ ಅನುಲೋಮ-ಪ್ರತಿಲೋಮ ವಿವಾಹದ ಪ್ರಯೋಗಗಳು ಆದವು. ಆದರೂ ಆ ವ್ಯವಸ್ಥೆಯು ಅಚ್ಚಳಿಯದ ಉಳಿಯಿತು.

ಇದಾಯಿತು ಮಧ್ಯಯುಗದ ಅಂದರೆ ವಿದ್ಯಾರಣ್ಯರ ಕಾಲದ ಪೂರ್ವದ ಸ್ಥಿತಿ. ಇನ್ನು ವಿದ್ಯಾರಣ್ಯರು ಯಾವ ಹೊಸ ಸಮಸ್ಯೆಗಳನ್ನು ಎದುರಿಸಬೇಕಾಯಿತೆಂಬುದನ್ನು ನೋಡುವ. ಮುಸಲ್ಮಾನರು ಈ ದೇಶದಲ್ಲಿ ಕಾಲಿಟ್ಟೊಡನೆ ಎರಡು ದೊಡ್ಡ ಸಮಸ್ಯೆಗಳು ಉದ್ಭವಿಸಿದವು. (೧) ರಾಜಕೀಯ (೨) ಸಾಂಸ್ಕೃತಿಕ. ಸಾಂಸ್ಕೃತಿಕ ವಿಷಯದಲ್ಲಿ ಹಿಂದೂಸ್ಥಾನವು ಪೃಥಕ್ ಆಗಿದ್ದರೂ ಅಖಂಡವಾಗಿಯೂ ಆಗಿದ್ದಂತೆ ರಾಜಕೀಯ ವಿಷಯದಲ್ಲಿ ಆಗಿದ್ದಿಲ್ಲ. ಇದರಿಂದ ಪರಕೀಯರ ಪ್ರಬಲವಾದ ಆಘಾತಕ್ಕೆ ಉತ್ತರಹಿಂದೂಸ್ಥಾನವು ಬಲು ಬೇಗನೆ ತುತ್ತಾಯಿತು. ಈಗ ರಾಜಕೀಯ ಅಖಂಡತ್ವವು ಇನ್ನು ವರೆಗೂ ದೊಡ್ಡ ಸಮಸ್ಯೆಯಾಗಿಯೇ ಉಳಿದಿದೆ. ವಿಜಯನಗರ ಸಾಮ್ರಾಜ್ಯವು ಆ ಅಖಂಡತ್ವವನ್ನು ಪಡೆಯಲು ಯತ್ನಿಸಿತು. ಆದಕ್ಕೆ ಅದು ಪೂರ್ಣವಾಗಿ ಸಾಧ್ಯವಾಗಲಿಲ್ಲ. ಆದರೆ ಸಾಂಸ್ಕೃತಿಕ ವಿಷಯದಲ್ಲಿ ಮಾತ್ರ ಅದು ಪರಕೀಯ ಸಂಸ್ಕೃತಿಯನ್ನು ಚೆನ್ನಾಗಿ ಎದುರಿಸಿ, ತನ್ನ ಅಖಂಡತ್ವವನ್ನು ಕಾಯ್ದುಕೊಂಡಿತು. ಹಿಂದೂಸ್ಥಾನದಲ್ಲಿ ಪರಕೀಯರ ಈ ಎರಡು ವಿಧವಾದ ದಾಳಿಗಳನ್ನು ಹಿಮ್ಮೆಟ್ಟಿಸಿದ ಮೊಟ್ಟಮೊದಲಿನ ಶ್ರೇಯವು ವಿಜಯನಗರ ಸಾಮ್ರಾಜ್ಯಕ್ಕೆ; ಅದನ್ನು ಕಟ್ಟಿದ ಶ್ರೀ ವಿದ್ಯಾರಣ್ಯರ ಬುದ್ಧಿಚಾತುರ್ಯಕ್ಕೆ. ಅದನ್ನು ಅವರು ಹೇಗೆ ಸಾಧಿಸಿದರೆಂಬುದರ ಮರ್ಮವನ್ನು ತಿಳಿದುಕೊಳ್ಳುವುದೆಂದರೇನೇ ಶ್ರೀ ವಿದ್ಯಾರಣ್ಯರ ಚರಿತೆಯನ್ನರಿಯುವುದು. ಇದನ್ನು ಶ್ರೀಮಾನ್ ಲಿಂಗಣ್ಣಯ್ಯನವರು ಬಹಳ ಜಾಣ್ಮೆಯಿಂದ ಸಾಧಿಸಿದ್ದಾರೆ.

ನಾವು ಮೇಲೆ ಹೇಳಿದಂತೆ, ಹಿಂದುಸ್ಥಾನವು ಸಾಂಸ್ಕೃತಿಕ ವಿಷಯದಲ್ಲಿ ಅಖಂಡವಾಗಿತ್ತು, ದೃಢವಾಗಿತ್ತು. ಹಿಂದೂಸಮಾಜದಲ್ಲಿ ಸ್ಥಿತ್ಯಂತರಗಳು ಆಗುತ್ತಿದ್ದಿಲ್ಲವೆಂತಿಲ್ಲ. ಆದರೂ ಎಲ್ಲರೂ ಆ ಸಂಸ್ಕೃತಿಯ ಮೂಲ ಸ್ವರೂಪಕ್ಕೆ ಶರಣಾಗತರಾಗಿಯೇ ನಡೆಯುತ್ತಿದ್ದರು. ಆದಕಾರಣವೇ ಆಗ ಬ್ರಾಹ್ಮಣ—ಬ್ರಾಹ್ಮಣೇತರ ವಾದ, ಸ್ಪೃಶ್ಯಾಸ್ಪೃಶ್ಯಪ್ರಶ್ನೆ, ದೇವಾಲಯ ಪ್ರವೇಶ ಪ್ರಶ್ನೆ ಮುಂತಾದವುಗಳು ಇದ್ದಿಲ್ಲ. ಆದಕಾರಣ ಈ ವಿಷಯದಲ್ಲಿ ಶ್ರೀ ವಿದ್ಯಾರಣ್ಯರ ಕಾರ್ಯವು ಸುಲಭಸಾಗಿತ್ತು. ರಾಜಕೀಯ ವಿಷಯದಲ್ಲಿ ಗೊಂದಲವಿತ್ತು. ಚಿಕ್ಕಪುಟ್ಟ ರಾಜರು ಪರಸ್ಪರಗೆ ಬಡಿದಾಡಿ ನಿರ್ವೀರ್ಯರಾಗಿದ್ದರು ಅವರೆಲ್ಲರನ್ನು ಒಟ್ಟುಗೂಡಿಸಿದುದೇ ಅವರು ಮಾಡಿದ ಮೊದಲನೆ ಮಹತ್ವದ ಕಾರ್ಯ. ಬ್ರಹ್ಮಕ್ಷತ್ರ ಇವುಗಳ ಮಧುರ ಮಿಲನವೇ ದೇಶದ ಅಭ್ಯುದಯಕ್ಕೆ ಕಾರಣವೆಂದು ಭಾಗವತವು (೩-೨೨-೩) ಹೇಳಿದೆ. ಆ ಮಧುರ ಮಿಲನವನ್ನು ಒದಗಿಸಿ ಕೊಂಡವರು ಶ್ರೀ ವಿದ್ಯಾರಣ್ಯರು. ಬ್ರಾಹ್ಮಣ ಸ್ಥಾನದವರು—ಅವರು ಬ್ರಾಹ್ಮಣರು, ಹಾಲಿ, ಜಂಗಮರೇ ಇರಲಿ, ಸಾಧುಸಂತರೇ ಇರಲಿ. ರಾಷ್ಟ್ರಕಾರ್ಯದ ಪ್ರತ್ಯಕ್ಷ ಮೇಲಿಂದ ಅಲಿಪ್ತರಾಗಿರಬೇಕೆಂಬ ತತ್ತ್ವವನ್ನು ವಿಜಯನಗರ ಸಾಮ್ರಾಜ್ಯವು ಕಲಿಸಿದೆ. ವಿಜಯನಗರ ಸಾಮ್ರಾಜ್ಯವು ಅತ್ಯಂತವಾಗಿ ಘನತೆಗೇರಿದ ಕಾಲದಲ್ಲಿ ಶ್ರೀ ವ್ಯಾಸರಾಯ ಸ್ವಾಮಿಗಳು ಸತತವಾಗಿ ಆರು ಅರಸರಿಗೆ ರಾಜಗುರುಗಳಾಗಿದ್ದರೂ ಅವರು ಲೌಕಿಕ ವೈಭವದ ಮೋಹಕ್ಕೆ ಎಂದಿಗೂ ಬಲಿಬೀಳಲಿಲ್ಲ. ವಿಜಯನಗರ ಸಾಮ್ರಾಜ್ಯವು ನಮಗೆ ಕಲಿಸಿದ ಎರಡನೆಯ ಪಾಠವು ಇದು. ಅದು ಕಲಿಸಿದ ಮೂರನೆಯ ಪಾಠವೆಂದರೆ ಶಾಂತಿಮಯ ಕ್ರಾಂತಿ. ವಿಜಯನಗರ ಸಾಮ್ರಾಜ್ಯವನ್ನು ಕಟ್ಟುವಾಗ ಯಾವುದೊಂದೂ ಭಯಂಕರ ಘೋರವಾದ ಯುದ್ಧವಾಗಲಿಲ್ಲ. ದೂರ, ದಿಲ್ಲಿಯಲ್ಲಿದ್ದ ಮೊಗಲರು ನಮ್ಮನ್ನು ಎಂದೂ ಆಳುವುದು ಶಕ್ಯವಿಲ್ಲವೆಂಬ ತತ್ತ್ವವನ್ನು ವಿಜಯನಗರವು ಅರಿತಿತ್ತು. ಸಮಾಜದಲ್ಲಿಯೂ ಅನೇಕ ಸ್ಥಿತ್ಯಂತರಗಳಾಗುವುದು ಸ್ವಾಭಾವಿಕವು. ಆದರೆ ಅವೆಲ್ಲವೂ ಶಾಂತಿಮಯ ಕ್ರಾಂತಿಗಳೇ. ಶಂಕರ ಮಧ್ವ ಮುಂತಾದವರು ತಮ್ಮ ಮತಗಳ ಪ್ರಸಾರಕ್ಕೆ ಯಾವ ಸರಕಾರದ ಅಥವಾ ಕಾಯದೆಯ ಬೆಂಬಲವನ್ನೂ ಬಯಸಲಿಲ್ಲ. ವೀರಶೈವ ಧರ್ಮಸ್ಥಾಪನವಾಗುವಾಗ ಶ್ರೀ ಬಸವೇಶ್ವರರು ರಾಜಕಾರಣದ ಬೆಂಬಲ

ವನ್ನು ಪಡೆದರೋ ಹೇಗೆ ಎಂಬುದು ಸಂದೇಹಾಸ್ಪದ ವಿಷಯವಾಗಿದೆ. ಹಾಗೆ ಅವರು ಪಡೆಯಲಿಲ್ಲವೆಂದು ಊಹಿಸಲಿಕ್ಕೆ ಅವರು ಕಲ್ಯಾಣಬಿಟ್ಟು ಹೋಗುವ ಪ್ರಸಂಗ ಒದಗಿದುದು ಆಧಾರವಾಗಿದೆ. ಇರಲಿ, ಇಲ್ಲಿ ನಮಗೆ ಮುಖ್ಯವಾಗಿ ಹೇಳಬೇಕಾದುದೇನೆಂದರೆ–ಮತಸ್ಥಾಪನೆಗಾಗಲಿ, ಸಮಾಜದ ಸ್ಥಿತ್ಯಂತರಗಳಿಗಾಗಲಿ, ಯಾರೂ ಪ್ರತ್ಯಕ್ಷವಾಗಿಯಾಗಲಿ ಅಪ್ರತ್ಯಕ್ಷವಾಗಿಯಾಗಲಿ ಸರಕಾರದ ಸಹಾಯವನ್ನು ತೆಗೆದುಕೊಳ್ಳಕೂಡದೆಂಬ ತತ್ವವನ್ನು ಆ ಸಾಮ್ರಾಜ್ಯವು ಪಾಲಿಸಿತು. ಬೇಲೂರಿನ ಚನ್ನಕೇಶವ ದೇವಾಲಯದಲ್ಲಿ ಯಾವ ಪುಣ್ಯಾತ್ಮನು "ಯಂ ಶೈವಾ ಸಮುಪಾಸತೇ" ಎಂಬ ಆ ಶ್ಲೋಕವನ್ನು ಕೆತ್ತಿರುವನೋ ಏನೋ, ನಿಜವಾಗಿ ಅದು ಸರ್ವಜನರೊಳಗೆ ಸಮಭಾವವನ್ನಿಡುವುದಕ್ಕೆ ಅತ್ಯಂತ ಮಾರ್ಗದರ್ಶಿಯಾದ ಶ್ಲೋಕವು. ಇಂದು ಇದರಂತೆ ನಮ್ಮ ಜನರು ನಡೆದುಕೊಂಡರೆ ಅನೇಕ [illegible] ಜಗಳಗಳು ಮಾಯವಾಗುವವು. ಆ ಪರಮತಸಹಿಷ್ಣುತೆಯ ಧೋರಣವನ್ನು ಅನುಸರಿಸಿದುದರಿಂದಲೇ ವಿಜಯನಗರ ಸಾಮ್ರಾಜ್ಯವು ಮುಸಲ್ಮಾನರಿಗೂ ಎಡೆಕೊಟ್ಟಿತು. ಶ್ರೀ ವ್ಯಾಸರಾಯರ ಧರ್ಮಜಾಗ್ರತಿಯ ಚಳವಳಿಯು ಇಡೀ ಹಿಂದುಸ್ಥಾನವನ್ನು ವ್ಯಾಪಿಸಿದುದು ಕಂಡುಬರುತ್ತದೆ. ಅವರ ಕಾಲದಲ್ಲಿ ಪ್ರಸಿದ್ಧಿಗೆ ಬಂದ ದಾಸವರ್ಗದವರು ಈ ಧರ್ಮಜಾಗ್ರತಿಯ ಆಂದೋಲನವನ್ನು ಇಡೀ ಹಿಂದುಸ್ಥಾನದ ತುಂಬ ಹಬ್ಬಿಸಲಿಕ್ಕೆ ಕಾರಣರಾದರು. ಮಹಾರಾಷ್ಟ್ರದಲ್ಲಿ ಸಾಧುಸಂತರು, ಬಂಗಾಲದಲ್ಲಿ ಚೈತನ್ಯಪಂಥದವರು ಇವರೇ ಮುಂತಾದವರ ಮೂಲಕ ದಾಸರ ಆ ಚಳವಳಿಯು ಇಡೀ ಹಿಂದುಸ್ಥಾನದ ಚಳವಳಿಯಾಯಿತು. ವಿಜಯನಗರ ಸಾಮ್ರಾಜ್ಯದ ಪರರಾಷ್ಟ್ರ ಧೋರಣವೂ (Foreign Policy) ಅನುಕರಣೀಯವಾಗಿದೆ. ಮುಸಲ್ಮಾನರನ್ನು ಆಗಿನ ಕಾಲದ ಶತ್ರುಗಳೆಂದು ತಿಳಿದರೂ ಮುಸಲ್ಮಾನರು ಕೇವಲ ಮುಸಲ್ಮಾನರೆಂಬ ಕಾರಣದಿಂದ ಅವರನ್ನು ವಿಜಯನಗರವು ಎಂದೂ ಹೀಯಾಳಿಸಲಿಲ್ಲ. ಮುಸಲ್ಮಾನರು ಕುರಾಣಕ್ಕೇನೆ ವಂದನೆ ಮಾಡಬೇಕೆಂದು ವಿಧಿಸಿದ್ದೂ, ಅರಮನೆಯ ಹತ್ತಿರವೇ ಅವರಿಗಾಗಿ ಮಸೀದಿ ಕಟ್ಟಿಸಿಕೊಟ್ಟದ್ದೂ ಸೈನ್ಯದಲ್ಲಿ ಕೂಡ ಅವರಿಗೆ ಸ್ಥಳಗಳನ್ನು ಕಲ್ಪಿಸಿಕೊಟ್ಟದ್ದೂ ಇವೇ ಮುಂತಾದವುಗಳು ಅವರ ಸಹಿಷ್ಣುತೆಯನ್ನೇ ತೋರಿಸುತ್ತವೆ. ಕ್ರಿಶ್ಚಿಯನ್ನರಿಗೆ ಆ ರಾಜ್ಯದಲ್ಲಿ ಸ್ಥಾನವಿತ್ತು. ನಿಜವಾಗಿ, ಅರಸ

ನೆಂದ ಬಳಿಕ ಎಲ್ಲ ಮತದವರನ್ನೂ ಸಮದೃಷ್ಟಿಯಿಂದ ನೋಡುವುದೇ ಆತನ ಧರ್ಮ. ಸರಕಾರವು ಸರ್ವಸಮದೃಷ್ಟಿಯನ್ನು ತಾಳುವುದೇ ಉಚಿತ. ಆದರೆ ಶತ್ರುಗಳಾಗಿ ಬಂದಾಗ ಅವರನ್ನು ಇದುರಿಸಲೇಬೇಕು. ಹೀಗೆ ವಿಜಯನಗರ ಸಾಮ್ರಾಜ್ಯದ ಇತಿಹಾಸವು ನಮಗೆ ಅನೇಕ ವಿಷಯಗಳಲ್ಲಿ ಮಾರ್ಗದರ್ಶಕವಾಗಿದೆ.

ಇರಲಿ, ವಿಜಯನಗರದ ತರುವಾಯ ಆದರ ಪರಂಪರೆಯು ಅವಿಚ್ಛಿನ್ನವಾಗಿ ಉಳಿಯಲಿಲ್ಲ. ಶ್ರೀಶಿವಾಜಿಯೇನೋ ವಿಜಯನಗರದ ಪರಂಪರೆಯನ್ನೇ ಬಲುಮಟ್ಟಿಗೆ ಅನುಸರಿಸಿದ್ದನು. ಆದರೆ ಆತನು ತನ್ನ ಶಕ್ತಿಸರ್ವಸ್ವವನ್ನೆಲ್ಲ ರಾಜ್ಯಗಳಿಸುವುದರಲ್ಲಿಯೇ ವೆಚ್ಚಮಾಡಬೇಕಾದುದರಿಂದ ಆತನಿಗೆ ಹೆಚ್ಚಿನ ಕೆಲಸ ಮಾಡಲಿಕ್ಕೆ ಅವಕಾಶವೇ ದೊರೆಯಲಿಲ್ಲ. ಮುಂದೆ ಪೇಶ್ವೆಯವರು ವಿಜಯನಗರದ ಧೋರಣವನ್ನು ಬಿಟ್ಟುಕೊಟ್ಟು, ವಿದ್ಯಾರಣ್ಯ – ವ್ಯಾಸರಾಯರಂತೆ ರಾಜಕಾರಣದ ಪ್ರತ್ಯಕ್ಷ ವೈಭವದಿಂದ ಅಲಿಪ್ತರಾಗಿ ಉಳಿಯದೆ ರಾಜ್ಯಮೋಹಕ್ಕೆ ಒಳಗಾಗಿ ದೇಶವನ್ನು ಪಾತಾಳಕ್ಕಿಳಿಸಿದರು. ಒಟ್ಟಿಗೆ ಹೇಳುವುದಾದಲ್ಲಿ, (೧) ಬ್ರಹ್ಮ-ಕ್ಷತ್ರರ ಅನ್ಯೋನ್ಯ (೨) ಬ್ರಾಹ್ಮಣಸ್ವಭಾವದವರ ಐಹಿಕ ಮೋಹದಿಂದ ಅಲಿಪ್ತರಾಗಿರುವಿಕೆ (೩) ಪ್ರತಿಯೊಂದು ಚಳವಳಿಗೂ ಧರ್ಮದ ಅಧಿಷ್ಠಾತೃತ್ವ (೪) ಸರ್ವ ಸಮದೃಷ್ಟಿ (೫) ಪರಕೀಯರೊಡನೆ ಶಕ್ಯವಾದ ಮಟ್ಟಿಗೆ ಸೌಹಾರ್ದ (೬) ಶಾಂತಿಮಯಕ್ರಾಂತಿ (೭) ಸರಕಾರದವರು ಧರ್ಮದಲ್ಲಿಯೂ ಸಮಾಜದ ರಚನೆಯಲ್ಲಿಯೂ ಕೈಹಾಕದಿರುವಿಕೆ ಇವೇ ಮುಂತಾದ ವಿಶಾಲವಾದ ಮತ್ತು ಉದಾತ್ತವಾದ ನೀತಿತಂತ್ರಗಳನ್ನು ವಿಜಯನಗರವು ಕಲಿಸಿದೆ. ಈಗಿನ ಕಾಲಕ್ಕೆ ರಾಷ್ಟ್ರೀಯತ್ವವೆಂದರೇನೆಂಬ ಬಗ್ಗೆ ನಮ್ಮ ದೇಶದ ಮುಖಂಡರ ವಿಚಾರದಲ್ಲಿ ಕೋಲಾಹಲವು ಕಂಡುಬರುತ್ತಿದೆ. ಅಂಥವರು ನಮ್ಮ ಇತಿಹಾಸವನ್ನು ಕೂಲಂಕಷವಾಗಿಯೂ ಸೂಕ್ಷ್ಮವಾಗಿಯೂ ಅಭ್ಯಾಸಮಾಡಿದರೆ ರಾಷ್ಟ್ರೀಯತ್ವದ ಮೀಮಾಂಸೆಯೆಂದರೇನೆಂಬುದು ಚೆನ್ನಾಗಿಯೇ ತಿಳಿಯುವುದು. ಅಂದು ವಿಜಯನಗರವು ಉದ್ಘೋಷಿಸಿದ "ಜಯ" ವೆಂಬ ಅವರ ಯುದ್ಧ ಘೋಷಣೆಯು ಇಂದು ಅಖಿಲ ಹಿಂದುಸ್ಥಾನದ ಜಯಧ್ವನಿಯಾಗಿದೆಂಬುದು ಕನ್ನಡಿಗರಿಗೆ ಎಂಥ ಅಭಿಮಾನಾಸ್ಪದ

ವಾದ ಸಂಗತಿಯು ? ಕೇವಲ ಐತಿಹಾಸಿಕ ಆಧಾರಗಳಿಂದಲೇ ಚಂದ್ರಗುಪ್ತನಿಂದೀಚೆನದಾದರೂ ವಿಶ್ವಸನೀಯವಾದ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸವು ಬರೆಯಲ್ಪಟ್ಟರೆ ಈಗಿನ ಬ್ರಾಹ್ಮಣರ ಮತ್ತು ಬ್ರಾಹ್ಮಣೇತರರ ಅನೇಕ ಭ್ರಮೆಗಳು ತಾನಾಗಿಯೇ ಬಯಲಾಗುವುವೆಂದು ನಮ್ಮ ಅಭಿಪ್ರಾಯ.

ಇದಾಯಿತು ಹಿಂದಿನ ಸಮಸ್ಯೆಯ ವಿಚಾರ. ಇಂದಿನ ಸಮಸ್ಯೆಗಳು ಇದಕ್ಕಿಂತಲೂ ಜಟಿಲವಾಗಿವೆ. ಸನಾತನ ಸಂಸ್ಕೃತಿಯ ಶುದ್ಧ ಸ್ವರೂಪವು ಮಾಯವಾಗಿದೆ. ಅದರಮೇಲಿನ ಶ್ರದ್ಧೆಯು ಹಾರುತ್ತಿದೆ. ಪಾಶ್ಚಾತ್ಯ ವಿಚಾರಗಳ ಪ್ರಭಾವವು ಪ್ರತಿಯೊಂದರಲ್ಲಿ ಕಂಡುಬರುತ್ತಿದೆ. ಅದರಿಂದ ಕೆಲವು ಲಾಭಗಳೂ ಆಗಿವೆ. ಕೆಲವು ಹಾನಿಗಳೂ ಆಗಿವೆ. ನಮ್ಮವರಲ್ಲಿ ಸ್ವತಂತ್ರವಿಚಾರದ ಗಾಳಿಯು ಹರಿಯುತ್ತಿರುವುದರಿಂದ ಹಿಂದಿನ ನಿರ್ಜೀವಸ್ಥಿತಿಯು ಹೋಗುತ್ತಿದೆ. ಚಿಕಿತ್ಸಕ ಬುದ್ಧಿಯು ಬೆಳೆದಿದೆ ದೃಷ್ಟಿಯು ವಿಶಾಲವಾಗಿದೆ ಅಂತಃಕರಣವು ಉದಾರವಾಗಿದೆ. ವ್ಯಾಪಕತೆ ಹೆಚ್ಚಾಗಿದೆ. ಜಗತ್ತಿನ ಸಂಪರ್ಕವು ಬೆಳೆದಿದೆ ಹೀಗೆ ಲಾಭಗಳಾಗಿದ್ದರೂ ಹಾನಿಗಳಿಗೂ ಕಡಮೆಯಿಲ್ಲ. ಧರ್ಮದ ಮೇಲಿನ ಶ್ರದ್ಧೆಯು ಹಾರಿಹೋಗುತ್ತಿರುವುದು ಒಂದು ದೊಡ್ಡ ಹಾನಿ. ಇದರಿಂದ, ಚಾರ್ವಾಕರು ಹೆಚ್ಚಾಗಿರುವರು. ಸ್ವತಂತ್ರ ಬುದ್ಧಿಯು ಬೆಳೆದಿದ್ದರೂ, ಅನುಕರಣ ಬುದ್ಧಿಯೂ ಬೆಳೆದಿದೆ. ಪಾಶ್ಚಾತ್ಯರಲ್ಲಿ ಸಮಾಜ ತೂಕವು ಎಂದೂ ಇಲ್ಲ ಒಮ್ಮೆ ಪಾದ್ರಿಗಳ ಪ್ರಾಬಲ್ಯ, ಮತ್ತೊಮ್ಮೆ ಸರದಾರರ ಶ್ರೇಷ್ಠತೆ, ಈಗ ಸಾಂಪತ್ತಿಕರ ಸಾಮ್ರಾಜ್ಯ, ಮುಂದೆ ಕೂಲಿಕಾರರ ಕಾಲ. ಹೀಗೆ ಅದು ಹೊಯ್ದಾಡುತ್ತಲೇ ಇದೆ. ಹೊಯ್ದಾಡುತ್ತಲೇ ಉಳಿಯುವುದು. ಅವರ ವಿಚಾರಗಳ ಹೊಸ ಹೊಳೆಗಳು ನಮ್ಮಲ್ಲಿ ಹೊಕ್ಕಿವೆ. ಇದರಿಂದ ವರ್ಣಸಾಂಕರ್ಯವೂ ಕ್ಷೇತ್ರಸಾಂಕರ್ಯವೂ ಆಗಿವೆ. ಮತಾಂತರದ ದಿವಸಗಳು ಮಾಯವಾಗಿರುವುದರಿಂದ, ಮತದಲ್ಲಿ ಶ್ರದ್ಧೆಯಿದ್ದವರು ನಮ್ಮ ತಮ್ಮ ಮತಗಳನ್ನನುಸರಿಸಿ, ಮಿಕ್ಕವರೊಡನೆ ಸೌಹಾರ್ದದಿಂದ ಇರಲು ಅನುಕೂಲವಾಗಿದ್ದರೂ ಧರ್ಮದ ಮತ(ಪಂಥ)ವು ಪ್ರಜಾ-ಮತ (Vote) ದಲ್ಲಿ ಹೊಕ್ಕು ಹಾವಳಿಯೆಬ್ಬಿಸುತ್ತಿದೆ. ಮುಸಲ್ಮಾನ ಮತ್ತು ಅಸ್ಪೃಶ್ಯರಲ್ಲಿ ಜಾಗ್ರತಿಯಾಗಿದ್ದು ಸುಚಿಹ್ನವಾದರೂ ಬ್ರಿಟಿಷರ ಕುಟಿಲ ನೀತಿಯ ಮೂಲಕವೂ ನಮ್ಮವರ ಅದೂರದರ್ಶಿತ್ವದ ಮೂಲಕವೂ ಆ ವರ್ಗಗಳು ಏರಿ ಕೂಡಹತ್ತಿರು

ವುವು. ಸಾಮ್ಯವಾದಿಗಳ ಮತ್ತು ಸಮತಾವಾದಿಗಳ ಉದ್ದೇಶವು ಉದಾತ್ತವಾಗಿದ್ದರೂ ಈ ಸಮಗಾರರ ಸಮದೃಷ್ಟಿಯಲ್ಲಿ ದೋಷವಿರುವ ಮೂಲಕ ಸಮಾಜವು ಅಡ್ಡದಾರಿ ಹಿಡಿಯುವ ಅಂಜಿಕೆ ಇದೆ. ಸಮದೃಷ್ಟಿ ಎಂದರೆ ಸಮಸಂಧಿ, ಸಮಸಂಸ್ಕೃತಿಯಲ್ಲ. ಸಮಸಂಸ್ಕೃತಿಯಾಗುವುದು ಗುಣತ್ರಯದಿಂದ ಕೂಡಿದ ಈ ಜಗತ್ತಿನಲ್ಲಿ ಶಕ್ಯವೇ ಇಲ್ಲ. ಇತ್ತ ಐದು ಕೋಟಿ ಅಸ್ಪೃಶ್ಯರು ಹಿಂದೂ ಸಮಾಜದಲ್ಲಿ ಹಿಂದಕ್ಕೆ ಉಳಿದವರು ಇಂದು ಜಾಗರಕತ್ತಿದ್ದಾರೆ. ಅನವಶ್ಯಕವಾದ ಭಂಗಿಜನರ ಹೊಸದೊಂದು ಅಸ್ಪೃಶ್ಯವರ್ಗವು ಹುಟ್ಟಿದೆ. ಇತ್ತ ತಲೆಬುರುಡೆಗಳ ಪ್ರಜಾರಾಜ್ಯವು ಬೇಕಾದಾಗ ಆದೀತೋ ಬೇಕಾವಾಗ ನೇಡು ತೀರಿಸಿಕೊಳ್ಳುವೆವೊ ಎಂದು ಹಲವರು ಹಲ್ಲು ಮಸೆಯುತ್ತಿರುವರು. ವರ್ಧಾ ಶಿಕ್ಷಣವು ಒತ್ತಾಯದಿಂದ ಹೇರಲ್ಪಟ್ಟಿದೆ. ಪಾಠಶಾಲೆಗಳು ಮೂಲೆಗುಂಪಾಗುವವೆಂದು ಸನಾತನಿಗಳಿಗೆ ಅಂಜಿಕೆ. ಈಗ ಕಾಂಗ್ರೆಸ್ಸು, ಹಿಂದೂ ಮಹಾಸಭೆ, ವರ್ಣಾಶ್ರಮ ಸ್ವರಾಜ್ಯ ಸಂಘ, ಸಮತಾ ಸಂಘಗಳು ಈ ಸಮಸ್ಯೆಗಳನ್ನು ಬಿಡಿಸುತ್ತಿರುವ ಪದ್ಧತಿಯು ಅಪೂರ್ಣವೂ, ಸದೋಷವೂ ಆಗಿದೆ. ಸಂತ ಮಹಾತ್ಮರಿಂದ ಅಥವಾ ತಜ್ಞಾನಿಯೋಗಿಕರಿಂದ ಈ ಸಮಸ್ಯೆ ಬಗೆಹರಿಯದು. ಹೊಸ ಸಮಸ್ಯೆಯನ್ನು ನೋಡುವುದಕ್ಕೆ ವಿದ್ಯಾರಣ್ಯ--ವ್ಯಾಸರಾಯರಂಥ ಅದ್ವಿತೀಯರಾದ ಮಂತ್ರದ್ರಷ್ಟಾರರೇ ಬೇಕು. ಅಂಥವರಾರೂ ನಮ್ಮ ಕಣ್ಣಿಗೆ ಕಾಣಲೊಲ್ಲರು. ಅಂಥವರು ಉದಯಿಸಿದ ದಿವಸವೇ ಸುದಿವಸ!

ಮುಖ್ಯವಾಗಿ, ಶ್ರೀಮಾನ್ ಬಿ. ಎನ್. ಲಿಂಗಣ್ಣಯ್ಯನವರು ಈ ಪುಸ್ತಕದಲ್ಲಿ ಕನ್ನಡ ನಾಡಿನ ಪರಿಸ್ಥಿತಿಯನ್ನು ಹೃದಯಂಗಮವಾಗಿ ಚಿತ್ರಿಸಿ ಶ್ರೀ ವಿದ್ಯಾರಣ್ಯರ ಜೀವನ ಪರಿಚಯವನ್ನು ತರುಣರಿಗೆ ಮುಂದಟ್ಟು ಮಾಡಿಕೊಟ್ಟಿರುತ್ತಾರೆ. ಗ್ರಂಥಕರ್ತರ ಅಭಿಮಾನಾದರಗಳನ್ನು ಕನ್ನಡಿಗರು ಮೆಚ್ಚಬೇಕೆಂದು ಹಾರೈಸುತ್ತೇನೆ.

ಧಾರವಾಡ
೩೦–೧–೧೯೪೬

**ಆಲೂರ ವೆಂಕಟರಾಯ**

# ಮುನ್ನುಡಿ

ಶ್ರೀಯುತ ಓ. ಎಲ್. ಲಿಂಗಣ್ಣಯ್ಯನವರು ಈ ವೇಳೆಗಾಗಲೇ ಎಷ್ಟೋ ಪುಸ್ತಕಗಳನ್ನು ಬರೆದಿದ್ದಾರೆ. ನನ್ನ ಜೊತೆ ಜೊತೆಯಲ್ಲಿ ಎಷ್ಟೋ ಕಡೆ ನನಗಿಂತ ಸೊಗಸಾಗಿ ಉಪನ್ಯಾಸ ಮಾಡಿದ್ದಾರೆ. ನನಗೆ ಇಷ್ಟವಿಲ್ಲದಾಗಲೂ ನನ್ನನ್ನು ಎಳೆದುಕೊಂಡು ಹೋಗಿ ಸಭೆಗಳಲ್ಲಿ ಮಾತನಾಡಿಸಿದ್ದಾರೆ. ಇವರಿಗೆ ನನ್ನಿಂದ ತಮ್ಮ ಪುಸ್ತಕಕ್ಕೆ ಮುನ್ನುಡಿ ಬರೆಯಿಸುವ ಹಂಬಲ !

ಸುಮಾರು ಐದಾರು ವರ್ಷದ ಹಿಂದೆ ಶ್ರೀಯುತ ರಾಮರಾಯರು ನನ್ನನ್ನು ವಿದ್ಯಾರಣ್ಯರ ಮೇಲೆ ಒಂದು ಪುಸ್ತಕ ಬರೆಯುವಿರಾ ? ಎಂದರು. ನಾನು ಬಹಳ ದಿನ ಯೋಚನೆ ಮಾಡಿ ಆಗುವುದಿಲ್ಲ ಎಂದೆ. ವಿದ್ಯಾರಣ್ಯರ ವಿಚಾರವಾಗಿ ಅಲ್ಲೊಂದು ಇಲ್ಲೊಂದು ದಂತ ಕಥೆಗಳಿವೆ. ಒಂದೊಂದು ಶಾಸನವಲ್ಲಿ ಇಷ್ಟೋ ಅಷ್ಟೋ ಇದೆ. ಆದರೆ ಒಂದು ಗ್ರಂಥ ಬರೆಯು ವಷ್ಟು ಸಾಮಗ್ರಿಯಿಲ್ಲ. ಹೀಗಿದ್ದರೂ ಶ್ರೀ|| ಲಿಂಗಣ್ಣಯ್ಯನವರು ಬಹು ಶ್ರಮಪಟ್ಟು ಈ ಪುಸ್ತಕವನ್ನು ಬರೆದಿದ್ದಾರೆ. ನನ್ನಿಂದ ಆಗದ ಕೆಲಸವನ್ನು ಇವರು ಸಾಧಿಸಿದ್ದಾರೆ.

ಇದೊಂದು ಸಂಧಿಕಾಲ. ಹಿಂದಿನದು ಬೇಡ, ಹೊಸವೇ ತರೋಣ ಎನ್ನುವ ಕೂಗು ಹೆಚ್ಚಾಗಿ ಕೇಳಬರುತ್ತಿದೆ. ಆದರೆ ಬಯಾಲಜಿ, ವೇದಾಂತ ಮೊದಲಾದ ಶಾಸ್ತ್ರಗಳ ಸಿದ್ಧಾಂತಗಳು ನಿಜವಾದರೆ, ಸ್ವಭಾವ ಬಿಡುವುದ ಕ್ಕಾಗುವುದಿಲ್ಲ ಅವರನ್ನು ನೋಡಿ, ಇವರನ್ನು ನೋಡಿ, ಎಂದರೆ, ಹೌದು, ಹೌದು ಇತ್ತ ಜಪಾನು ನೋಡಿ, ಅತ್ತ ಜರ್ಮನಿ ನೋಡಿ, ಅಚಲಗಳಂತೆ ಜೀವ ನದಿಗಳಂತೆ ಇರುವ ಚೀನಾ ಇಂಡಿಯ ನೋಡಿ ಎನ್ನಬೇಕಾಗುತ್ತದೆ. ಸುಪ್ತವಾಗಿದ್ದ ಸಿಂಹವನ್ನು ಎಬ್ಬಿಸಿದ ಧೀರರಂತೆ, ವಿದ್ಯಾರಣ್ಯರು ಹಿಂದೂ ಗಳನ್ನು ಎಚ್ಚರಿಸಿದರು. ವಿಜಯನಗರ ಸಾಮ್ರಾಜ್ಯಕ್ಕೆ ಅವರೇ ಕಾರಣರೋ ಅಲ್ಲವೋ ಅಂತು "ಜ್ಞಾನಿ ನಾ ಚರಿತುಂ ಶಕ್ಯಂ ಸಮ್ಯಗ್ರಾಜ್ಯಾದಿ ಕೌಶಲಂ"

ಎಂದು ಹೇಳಿ ಶಾಸ್ತ್ರ, ಶಸ್ತ್ರ ಎರಡನ್ನೂ ಹಿಡಿದು ಪರಧರ್ಮೀಯರ ಹಾವಳಿಯನ್ನು ತಡೆದರು.

ರಾಜಕೀಯಾಭಿಮಾನ ಬಲಿಯುತ್ತಿರುವ ಈ ಕಾಲದಲ್ಲಿ ವಿದ್ಯಾರಣ್ಯರಂತಹ ವಿಭೂತಿಗಳನ್ನು ಕುರಿತ ಹಲವು ಪುಸ್ತಕಗಳು ಬೇಕು. ಬಹುಶಃ ಕನ್ನಡದಲ್ಲಿ ಇದು ನೂರನೆಯದೇನೋ? ಇಂತಹ ಪುಸ್ತಕ ನೂರ್ನೂರಾದರೂ ಆಗಲಿ.

ತಾ॥ ೧—೨—೧೯೪೭
ಬೆಂಗಳೂರು

**ದೇವುಡು**

# ಅರಿಕೆ

ಶ್ರೀ ವಿದ್ಯಾರಣ್ಯರು ಪ್ರಪಂಚದ ಮಹಾಪುರುಷರ ಶ್ರೇಣಿಯಲ್ಲಿ ಗೌರವ ಸ್ಥಾನ ಪಡೆಯಲು ಅರ್ಹರು. ಇವರು ಕನ್ನಡನಾಡಿನಲ್ಲಿ ಹುಟ್ಟದೇ ಇದ್ದರೆ ನಮ್ಮ ನಾಡು, ನುಡಿ, ನಡೆ—ಇವು ಉಳಿಯುತ್ತಿದ್ದುವೆ ?—ಎಂಬ ಸಂದೇಹಕ್ಕೆ ಅವಕಾಶ ಉಂಟು. ಇವರ ಜೀವನ ಪರಿಚಯವನ್ನು ಸರಿಯಾದ ರೀತಿಯಲ್ಲಿ ಸಾಕಾದಷ್ಟು ಮಟ್ಟಿಗೆ ತಿಳಿಸುವ ಸಾಧನ ಸಂಪತ್ತು ದೊರೆಯುವುದಿಲ್ಲ. ತರುಣರಿಗೆ ರುಚಿಸುವಂತೆ ಇತಿಹಾಸದ ಹಿನ್ನೆಲೆಯಲ್ಲಿ ವಿದ್ಯಾರಣ್ಯರ ಜೀವನ ಪರಿಚಯವನ್ನು ನಿರೂಪಿಸಲಾಗಿದೆ. ಮೊದಲನೆಯ ಅಧ್ಯಾಯ ಒಂದು ರೀತಿ. ಇದೊಂದು ವೈಶಿಷ್ಟ್ಯ. ನಿರೂಪಣೆಯ ಪ್ರಖರ. ಭಾಷೆಯಲ್ಲಿ ಕೆಲವು ಸಂಸ್ಕೃತ ಪದಗಳಿವೆ. ಅವರಿಂದ ತರುಣರ ಶಬ್ದ ಭಂಡಾರ ತುಂಬಲಿ ! ಉಳಿದ ಭಾಗವೆಲ್ಲ ಸರಳ ಸ್ವಲ. ಲಲಿತ ರಚನೆ. ಅನೇಕ ವಿದ್ವಾಂಸರು ವಿದ್ಯಾರಣ್ಯರ ವಿಷಯವಾಗಿ ಗ್ರಂಥಗಳನ್ನು ಬರೆದಿದ್ದಾರೆ. ಅವುಗಳಿಂದ ನಾನು ಉಪಕೃತನಾಗಿದ್ದೇನೆ. ಆ ಎಲ್ಲ ಗ್ರಂಥಕರ್ತರಿಗೂ ನಾನು ಚಿರ ಋಣಿ.

ಕನ್ನಡ ನಾಡಿನ ಹಿರಿಯ ಸಾಹಿತಿಗಳೂ, ಜ್ಞಾನವೃದ್ಧರೂ, ಇತಿಹಾಸಜ್ಞರೂ ಘನವಿದ್ವಾಂಸರೂ ಆಗಿರುವ ಶ್ರೀಮಾನ್ ಮಾನ್ಯ ಆಲೂರ ವೆಂಕಟರಾಯರು, ಬಿ.ಎ., ಎಲ್ ಎಲ್ ಬಿ., ಅವರು ದಯೆಯಿಟ್ಟು ಈ ಪುಸ್ತಕಕ್ಕೆ ಪ್ರಸ್ತಾವನೆಯನ್ನು ಬರೆದು ಆಶೀರ್ವದಿಸಿರುತ್ತಾರೆ. ಅವರಿಗೆ ನನ್ನ ಸವಿನಯ ಭಕ್ತಿ ಪ್ರಣಾಮಗಳು. ಹಾಗೆಯೇ, ಮುನ್ನುಡಿಯನ್ನು ಬರೆದು ಪ್ರೋತ್ಸಾಹಿಸಿರುವ ಉತ್ತಮ ಸಾಹಿತಿಗಳೂ ದೊಡ್ಡ ವಿದ್ವಾಂಸರೂ ಆದ ಶ್ರೀ|| ದೇವುಡು ನರಸಿಂಹಶಾಸ್ತ್ರೀ, ಎಂ.ಎ., ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ಈ ಪುಸ್ತಕವನ್ನು ಬೆಳಕಿಗೆ ತರಲು ನೆರವಾದ ಎಸ್. ಎಸ್. ಎಲ್. ಬುಕ್ ಡಿಪೋ ಮಾಲೀಕರಾದ ಶ್ರೀ|| ಎಂ. ರಾಮುರಾಯರ ಉಪಕಾರವನ್ನು ಮರೆಯಲಾರೆನು

ತಾ|| [illegible]—೧೯೪೬
'ಶ್ರೀ [illegible] ನಿವಾಸ'
ಶಂಕರಪುರಂ, ಬೆಂಗಳೂರು

ಓ. ಎನ್. ಲಿಂಗಣ್ಣಯ್ಯ

# ಶ್ರೀ ವಿದ್ಯಾರಣ್ಯರು

## ಒಂದನೆಯ ಅಧ್ಯಾಯ

### ದಿವ್ಯ ಸಂದರ್ಶನ

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥ — ಗೀತಾ.

ಕ್ರಿ. ಶ. ೧೩೩೪ನೆಯ ವರ್ಷ. ಶಾಲಿವಾಹನ ಶಕ ೧೨೫೬ನೆಯ ಭಾವ ಸಂವತ್ಸರ ಕಾರ್ತೀಕ ಮಾಸ. ಅಂದು ಪೂರ್ಣಿಮೆಯ ಸಂಜೆ. ಸೂರ್ಯನ ಹೊಂಬಿಸಿಲು ತರುರಾಜಿಯ ಮೇಲೆ ನಗುತ್ತಿತ್ತು; ಗಿರಿಪಙ್ಕ್ತಿಯ ಮೇಲೆ ನಲಿಯುತ್ತಿತ್ತು; ತುಂಗಭದ್ರಾನದಿಯು ತೆರೆತೆರೆಗಳೊಂದಿಗೆ ಚೆಲ್ಲಾಟ ವಾಡುತ್ತಿತ್ತು. ಹೇಮಕೂಟಾದ್ರಿಯ ಸಾನುಪ್ರದೇಶಗಳಲ್ಲಿ ಪ್ರಕೃತಿಸೌಂದರ್ಯ ಭುವನಮೋಹಕವಾಗಿ ಕಂಗೊಳಿಸುತ್ತಿತ್ತು. ನಿಬಿಡವಾದ ಅರಣ್ಯದಲ್ಲಿ ಪಕ್ಷಿಗಳು ಇಂಪಾದ ಗಾನದಿಂದ ಹಾಡುತ್ತಿದ್ದುವು. ಸಂಜೆ ಗಾಳಿ ಮೆಲ್ಲಮೆಲ್ಲನೆ ಸುಳಿಯುತ್ತಿತ್ತು. ಚಿತ್ತಾಕರ್ಷಕವಾದ ಹೂಗಳು ಅರಳಿ ಪರಿಮಳವನ್ನು ಬೀರುತ್ತಿದ್ದುವು. ತುಂಬಿ ಬಿಂಗ ಬಂಡುಂಡು ಝೇಂಕರಿಸುತ್ತಿದ್ದುವು. ಅಲ್ಲಲ್ಲಿ ನಿರ್ಮಲ ಜಲಭರಿತ ಕಾಸಾರಗಳೂ, ಕಲಕಲಧ್ವನಿಯಿಂದ ಹರಿಯುತ್ತಿದ್ದ ಬೆಟ್ಟದ ಝರಿಗಳೂ ಕಾಣುತ್ತಿದ್ದುವು. ಎತ್ತ ನೋಡಿದರೂ ಮಹಾರಣ್ಯ. ತುಂಗಭದ್ರಾನದಿಯು ಆ ಅರಣ್ಯಮಧ್ಯದಲ್ಲಿ ಹರಿಯುತ್ತಾ, ಬೆಟ್ಟಗುಟ್ಟಗಳನ್ನು ಸುತ್ತುಬಳಸಿಕೊಂಡು ಧಾವಿಸುತ್ತಿದೆ. ಆ ಪುಣ್ಯನದಿಯ ತೀರದಲ್ಲಿ ಪಂಪಾಕ್ಷೇತ್ರದ ಬಳಿಯಲ್ಲಿಯೇ ಒಂದು ಅಗ್ರಹಾರ; ಸಮೀಪದಲ್ಲಿಯೇ ಶ್ರೀ ವಿರೂಪಾಕ್ಷೇಶ್ವರನ ದೇವಾಲಯ.

ಆಗತಾನೆ ಸೂರ್ಯಾಸ್ತಮಯವಾಗಿತ್ತು. ಪೂರ್ವದಿಕ್ಕಿನಲ್ಲಿ ಷೋಡಶಕಳಾಪರಿಪೂರ್ಣನಾದ ಚಂದ್ರನು ಉದಯಿಸುತ್ತಿದ್ದನು. ಆ ಅಮೃತ ಕಿರಣನು ಸೂಸುತ್ತಿದ್ದ ಅಮೃತಜ್ಯೋತ್ಸ್ನೆಯು ಭೂಮಿದೇವಿಯ ಆನಂದಲಹರಿಯಂತೆ

ಕಾಣುತ್ತಿತ್ತು. ಗಿರಿಶ್ರೇಣಿಯ ನಡುನಡುವೆ ಹರಿಯುತ್ತ ವನಪ್ರದೇಶದಲ್ಲಿ ಧಾವಿಸುವ ನಿರ್ಝರಿಯರುಗಳು ಬೆಳದಿಂಗಳಲ್ಲಿ ನಲಿಯುವ ಸ್ವರ್ಗಸುಂದರಿಯರಂತೆ ಕಾಣುತ್ತಿದ್ದುವು. ಪ್ರಶಾಂತ ವಾತಾವರಣ. ಸೃಷ್ಟಿಸೌಂದರ್ಯ ತಾಂಡವವಾಡುತ್ತಿತ್ತು. ಈ ಸೌಂದರ್ಯವೈಭವವನ್ನು ನೋಡಿ ನಲಿಯಲು ನಿಂತಿರುವ ದೇವತೆಗಳ ಬಿಡುಗಣ್ಣುಗಳಂತೆ ನಕ್ಷತ್ರಗಳು ಆಕಾಶದಲ್ಲಿ ಹೊಳೆಯುತ್ತಿದ್ದುವು. ಆ ಹೇಮಕೂಟಾದ್ರಿಯ ಸಮೀಪದಲ್ಲಿ ಪ್ರಕೃತಿ ಲೀಲಾಸೌಂದರ್ಯ ನಲಿಯುತ್ತಿದ್ದಂತೆಯೇ ಮಹಾಭಯಂಕರ ರಮಣೀಯತೆಯೂ ಭೈರವನರ್ತನಮಾಡುತ್ತಿತ್ತು. ಆ ಕಾಂತಾರಮಧ್ಯದಲ್ಲಿ ಆನೆ, ಹುಲಿ, ಕರಡಿ, ತೋಳ, ಗಂಡಕ, ಕಸ್ತೂರಿಮೃಗ, ಜಿಂಕೆ ಮೊದಲಾದ ವನ್ಯಪ್ರಾಣಿಗಳು ಸಂಚರಿಸುತ್ತಿದ್ದುವು.

ಆ ಹೇಮಕೂಟಾದ್ರಿಯ ಸಮೀಪದಲ್ಲಿಯೇ ಋಷ್ಯಮೂಕ, ಮತಂಗ, ಮಾಲ್ಯವಂತ ಮತ್ತು ಅಂಜನಾದ್ರಿ ಶ್ರೇಣಿ ಹಬ್ಬಿದೆ. ಅವು ನಮ್ಮ ಕರ್ನಾಟಕದ ಪ್ರಾಚೀನತೆಯನ್ನು ಸೂಚಿಸುವ ಸ್ಮಾರಕಗಳಂತೆ ನಿಂತಿವೆ. ಕನ್ನಡಿಗರ ಕೆಚ್ಚು ಹೆಪ್ಪುಗಟ್ಟಿರುವಂತೆ ತೋರುತ್ತವೆ.

ಅಂದು ನಡುರಾತ್ರಿ ಕಳೆದಿದೆ. ಹೇಮಕೂಟಾದ್ರಿಯ ಪೂರ್ವಭಾಗದ ವಿಶಾಲವಾದ ಒಂದು ಬಂಡೆಯ ಪಕ್ಕದಲ್ಲಿಯೇ ಸಣ್ಣ ಝರಿಯೊಂದು ಹರಿಯುತ್ತಿದೆ. ಹತ್ತಿರದಲ್ಲಿಯೇ ಒಂದು ದೇವದಾರು ವೃಕ್ಷ. ಅದರ ನೆರಳು ಪಕ್ಕದ ಬಂಡೆಯಮೇಲೆ ಬಿದ್ದಿದೆ. ಆ ಮರದ ದಟ್ಟವಾದ ಕೊಂಬೆರೆಂಬೆಗಳ ಎಲೆಗಳ ನಡುವೆ ಬೆಳದಿಂಗಳು ನುಸುಳಿ ಆ ವಿಶಾಲವಾದ ಬಂಡೆಯಮೇಲೆ ಮುಸುಕುಮುಸುಕಾಗಿ ಹರಡಿದೆ. ಆ ಮರಕ್ಕೆ ಒರಗಿಕೊಂಡು ತೇಜಃಪುಂಜ ಪುರುಷನೊಬ್ಬನು ನಿಂತಿದ್ದಾನೆ. ಆತನ ಸುವ್ಯಕ್ತವಾದ ಮೈಕಟ್ಟು, ಸುಪುಷ್ಟವಾದ ಬಾಹುದ್ವಯ; ವಿಶಾಲಹೃದಯ, ಅರೆತೆರೆದ ಕಣ್ಣುಗಳು—ಮಹಾಪುರುಷ ಲಕ್ಷಣಗಳನ್ನು ಸೂಚಿಸುತ್ತಿದ್ದುವು. ಮೈಕೊರೆಯುವ ಚಳಿ, ಗಾಳಿ ಬೀಸುತ್ತಿತ್ತು. ಆತನು ಮಾತ್ರ ಏಕವಸ್ತ್ರಧಾರಿಯಾಗಿ ನಿಂತಿದ್ದಾನೆ. ಭಾವಸಮಾಧಿಯಲ್ಲಿ ನಿಂತಿರುವ ಮಹರ್ಷಿಯಂತೆ ಅಂತರ್ಮುಖಿಯಾಗಿದ್ದಾನೆ. ನಿರ್ಜನಪ್ರದೇಶದಲ್ಲಿ, ನಿಶೀಸಮಯದಲ್ಲಿ, ಏಕಾಂತಸ್ಥಳದಲ್ಲಿ, ತದೇಕಧ್ಯಾನಚಿತ್ತನಾಗಿರುವ ಆ ಮಹಾಪುರುಷನು ಆಗಾಗ "ಶಿವೋಽಹಂ ಶಿವೋಽಹಂ"

ಕಣ್ವ, ಕೌಂಡಿನ್ಯ, ಋಷ್ಯಶೃಂಗ, ಮುಂತಾದ ಮಹರ್ಷಿಗಳ ಪಾದಧೂಳಿಯಿಂದ ಈ ನಾಡು ಪುನೀತವಾಗಿದೆ. ಗೋದಾವರಿ, ಕೃಷ್ಣಾ, ಭೀಮರಥಿ, ಮಲಪ್ರಭೆ, ಕಾವೇರಿ, ತುಂಗಭದ್ರೆ, ವೇದಾವತಿ, ಕಪಿಲಾ, ಪಿನಾಕಿನೀ ಮುಂತಾದ ಪುಣ್ಯನದಿಗಳಿಂದ ಈ ನಾಡು ಪಾವನವಾಗಿದೆ.

ಕರ್ನಾಟಕ ಜನನೀ, ನೀನು ಸನಾತನ ಧರ್ಮಾಶ್ರಯಳಲ್ಲವೆ! ನಿನ್ನ ವಿಶ್ವವಿಶಾಲಹೃದಯದಲ್ಲಿ ಧರ್ಮಜ್ಯೋತಿ ಎಂದೂ ನಂದಿಹೋಗದ ನಂದಾದೀಪದಂತೆ ಬೆಳಗುತ್ತಿದೆ! ನೀನು ಪರಂಜ್ಯೋತಿಯಲ್ಲವೇ! "ಅಹಿಂಸಾ ಪರಮೋಧರ್ಮಃ" ಎಂದು ಸಾರಿದ ಜೈನಸಿದ್ಧಾಂತ ನಿನ್ನ ಮಡಿಲಲ್ಲಿ ನಲಿಯುತ್ತಿದೆ. ವೇದಧರ್ಮವನ್ನು ಉದ್ಧರಿಸಲು ಅವತರಿಸಿದ ಶ್ರೀ ಶಂಕರಾಚಾರ್ಯರೂ, ಶ್ರೀ ರಾಮಾನುಜಾಚಾರ್ಯರೂ, ಮತ್ತು ಶ್ರೀ ಮಧ್ವಾಚಾರ್ಯರೂ ನಿನ್ನ ಕೀರ್ತಿಕಿರಣಗಳಂತಿದ್ದಾರೆ. ಅವರು ಈ ನಾಡಿನಲ್ಲಿ ಸಂಚರಿಸಿ, ತಮ್ಮ ತಮ್ಮ ಧರ್ಮವನ್ನು ಜಗತ್ತಿಗೆ ಸಾರಿದರು. ವೀರಶೈವ ಸಿದ್ಧಾಂತವನ್ನು ಪ್ರತಿಪಾದಿಸಿದ ಶ್ರೀ ರೇಣುಕಾಚಾರ್ಯರು ಈ ನಾಡಿನಲ್ಲಿ ತಮ್ಮ ಮತವನ್ನು ಸ್ಥಾಪಿಸಿದರು. ನಿನ್ನ ಧರ್ಮ ಪ್ರಭಾವವೇನು ಸಾಮಾನ್ಯವೆ!

ಕ್ಷಾತ್ರತೇಜೋಮೂರ್ತಿನಿ! ನಿನ್ನ ಪುಣ್ಯಗರ್ಭದಲ್ಲಿ ದುರ್ವಿನೀತ, ರಣವಿಕ್ರಮ, ಪುಲಿಕೇಶಿ, ಸನಾತನ ಧರ್ಮಾಶ್ರಯ ಕೀರ್ತಿವರ್ಮ, ಆದಿತ್ಯವರ್ಮ, ವಿದ್ಯಾಶ್ರಯ, ರಣರಸಿಕ ವಿಕ್ರಮಾದಿತ್ಯ, ಧಾರಾಶ್ರಯ ಜಯಸಿಂಹ, ವರ್ಮ, ಯುದ್ಧಮಲ್ಲ ವಿನಯಾದಿತ್ಯ ಮುಂತಾದ ಪರಾಕ್ರಮಿಗಳು ಜನಿಸಿ ನಿನ್ನ ಕೀರ್ತಿಲತೆಯನ್ನು ಹಬ್ಬಿಸಿದರು. ಇಂಥ ವೀರಪುತ್ರರನ್ನು ಪಡೆದ ನೀನು ಇಂದೇಕೆ ನಿಸ್ಸಹಾಯಕಳಾಗಿರುವೆಯಮ್ಮಾ! ನಿನ್ನ ಮಕ್ಕಳು ಶತ್ರುಭೀತಿಯನ್ನು ಕಂಡರಿಯರು. ಅಪಕೀರ್ತಿಯನ್ನು ಸಹಿಸರು. ಯುದ್ಧಭೂಮಿಯಲ್ಲಿ ಸಿಂಹ ಸದೃಶರಾಗಿ ನಿಲ್ಲುತ್ತಿದ್ದರು. ದೇಶಸ್ವಾತಂತ್ರ್ಯವನ್ನು ಕಾಪಾಡುವುದಕ್ಕಾಗಿ ಪ್ರಾಣದಾಸೆಯನ್ನೂ ಬಿಟ್ಟು, ಬಲಿದಾನಮಾಡಲು ಸಿದ್ಧರಾಗುತ್ತಿದ್ದರು. ನಿಜಪರಾಕ್ರಮಭೂಷಿತರಾದ ಆ ವೀರರು ಕಲಾಪರಿಪೋಷಕರಾಗಿದ್ದರು; ವಿದ್ವಜ್ಜನಾಶ್ರಯದಾತರಾಗಿದ್ದರು; ಸಂಸ್ಕೃತಿ ಸಂರಕ್ಷಕರಾಗಿದ್ದರು. ಆ ಭಾಗ್ಯವೇಕೆ ಕಳೆಗುಂದಿತು? ಆ ಪೌರುಷವೇಕೆ ಕಣ್ಮರೆ

ವಾಯಿತು ? ಕನ್ನಡ ನಾಡಿನ ದುರವಸ್ಥೆಯನ್ನು ನೆನಸಿಕೊಂಡರೆ ದುಃಖಾಶ್ರುಗಳು ಚಿಮ್ಮುತ್ತವೆ. ಕನ್ನಡಿಗರು ಆತ್ಮಬಲವನ್ನು ನೀಗಿಕೊಂಡು ಸ್ವಾತಂತ್ರ್ಯವನ್ನು ಕಳೆದುಕೊಂಡು ಪರಿತಪಿಸುತ್ತಿರುವರು. ತಮ್ಮ ಮನೆ ಮಠಗಳನ್ನೂ, ಹೆಂಗಸರು ಮಕ್ಕಳನ್ನೂ, ಮಾನಮರ್ಯಾದೆಯನ್ನೂ ಕಾಪಾಡಿಕೊಳ್ಳಲು ಶಕ್ತರಾಗಿಲ್ಲ. ಇವರಲ್ಲಿ ಒಗ್ಗಟ್ಟಿಲ್ಲದ ಪರದಾಸ್ಯದಲ್ಲಿ ನರಳುತ್ತಿರುವರು ತಮ್ಮ ಧರ್ಮ, ಧನ, ಗೌರವಗಳನ್ನು ಮಣ್ಣುಪಾಲು ಮಾಡಿ ಕಣ್ಣುಮುಚ್ಚಿ ಕುಳಿತಿರುವರು. ಅಭಿಮಾನಶೂನ್ಯರಾದ ಜನರೇ ನಾಡಿನಲ್ಲಿ ತುಂಬಿರುವರು. ತನ್ನ ಜನ, ನಾಡು, ಧರ್ಮಗಳಿಗಾಗಿ ಆತ್ಮಾರ್ಪಣೆ ಮಾಡುವ ಮನೋಭಾವನೆ ಅಳಿಸಿಹೋಗಿದೆ. ಪರಸ್ಪರ ದ್ವೇಷಾಸೂಯೆಗಳಿಂದ ಕಾಡುಮೃಗಗಳಂತೆ ವರ್ತಿಸುತ್ತಿರುವರು. ಆತ್ಮಸಂಯಮವಿಲ್ಲ ; ಚಿತ್ತಸ್ಥೈರ್ಯವಿಲ್ಲ ; ದೇಶಪ್ರೇಮವಿಲ್ಲ ವಿಧರ್ಮೀಯರ ದಾಳಿಯಿಂದ ಗಡಗಡನೆ ನಡುಗುತ್ತಿರುವರು. ತಾಯೀ ! ಮತ್ತೊಮ್ಮೆ ನೀನು ಹರ್ಷವದನೆಯಾಗಿ ನಲಿವುದೆಂದು ! ಭಾರತಾಂಬೆಯ ಮಣಿಮುಕುಟರತ್ನವಾಗುವುದೆಂದು ! ಸನಾತನಧರ್ಮ ಸಂಜೀವಿನಿಯಾಗುವುದೆಂದು ! ನಿನ್ನ ವೈಭವದ ಮಂಗಳ ದಿನಗಳು ಮೂಡುವುದೆಂದು ! ನೀನು ಮತ್ತೆ ಕ್ಷಾತ್ರತೇಜೋವಿರಾಜಮಾನಳಾಗುವುದೆಂದು ! ಅಮ್ಮಾ ! ನೀನು ಖಿನ್ನವದನಳಾಗಿ ಕಾಣುವೆಯಲ್ಲಾ ! ನಿನ್ನ ದುಃಖವನ್ನು ದೂರಮಾಡಲು ನನ್ನಿಂದ ಸಾಧ್ಯವೆ ? – ಎಂದು ಆ ಮಹಾಪುರುಷನು ಭಾವನಾಪರವಶನಾಗಿ ಮಾತನಾಡುತ್ತಿದ್ದನು. ಕರ್ಣಾಟಕ ಮಾತೆ ಅವನ ಮಾತಿಗೆ ಉತ್ತರ ಹೇಳುವಂತೆಯೂ ಅವನಿಗೆ ಭಾಸವಾಯಿತು.

"ಕುಮಾರಾ, ನಿನ್ನಂಥ ಸತ್ಪುತ್ರರಿರುವಲ್ಲಿ ನನಗೆ ದುಃಖವೇಕೆ ? ಇಂದು ನಿನ್ನ ಸಹೋದರರು ಅಜ್ಞಾನಕೂಪದಲ್ಲಿ ಬಿದ್ದು ನರಳುತ್ತಿರುವರು. ದಾರಿದ್ರ್ಯ ದಾವಾಗ್ನಿಯಲ್ಲಿ ಬೆಂದು ಬಳಲುತ್ತಿರುವರು. ಕರ್ತವ್ಯಪರಾಙ್ಮುಖರಾಗಿ ದಾರಿಗಾಣದೆ ತೊಳಲುತ್ತಿರುವರು. ಐಕಮತ್ಯವಿಲ್ಲದೆ ದೇಶಸ್ವಾತಂತ್ರ್ಯವನ್ನು ನೀಗಿಕೊಂಡರು. ರತ್ನಗರ್ಭಳಾದ ನನ್ನ ಭಾಗ್ಯವನ್ನು ಅನುಭವಿಸಲು ನನ್ನ ಮಕ್ಕಳಿಗೆ ಅದೃಷ್ಟವಿಲ್ಲ. ನಿರ್ವೀರ್ಯರಾಗಿರುವ ಕನ್ನಡಿಗರನ್ನು ಮತ್ತೊಮ್ಮೆ ಒಂದುಗೂಡಿಸಿ, ಅವರಲ್ಲಿ ನವಚೈತನ್ಯವನ್ನು ತುಂಬಿ ಕರ್ತವ್ಯನಿಷ್ಠರನ್ನಾಗಿ ಮಾಡಲು ನೀನು ಶಕ್ತನಾಗಿದ್ದೀಯೆ. ಸ್ವದೇಶಪ್ರೇಮವನ್ನು ಜನರಲ್ಲಿ ನೆಲೆ

ಗೊಳಿಸಿ, ತಾಯ್ನಾಡಿನ ಸೇವೆಗಾಗಿ ಅಣುವಾಗಬೇಕು. "ಜನನೀ ಜನ್ಮ
ಭೂಮಿಶ್ಚ ಸ್ವರ್ಗಾದಪಿಗರೀಯಸೀ" ಎಂಬ ಮಾತನ್ನು ಮರೆಯದಿರು. ಅಖಂಡ
ವಾದ ಬ್ರಹ್ಮತೇಜಸ್ಸೂ ಕ್ಷಾತ್ರಮನೋಧರ್ಮವೂ ನಿನ್ನಲ್ಲಿ ತುಂಬಿರುವುವು.
ನಿನ್ನಿಂದ ಧರ್ಮೋದ್ಧಾರವಾಗುವಂತೆಯೇ ರಾಷ್ಟ್ರಕಲ್ಯಾಣವೂ ಆಗಬೇಕಾಗಿದೆ.
ಸಂನ್ಯಾಸಿಯಾದ ನೀನು ವೀರಸಂನ್ಯಾಸಿಯಾಗಬೇಕು; ಕರ್ಮಯೋಗಿಯಾಗ
ಬೇಕು. ಈ ತುಂಗಭದ್ರಾನದಿಯು ಹರಿಯುತ್ತಿರುವವರೆಗೂ, ಈ ಹೇಮ
ಕೂಟಾದ್ರಿ ನಿಂತಿರುವವರೆಗೂ ನಿನ್ನ ನಿರ್ಮಲ ಕೀರ್ತಿ ಭೂಲೋಕದಲ್ಲಿ
ಬೆಳಗುತ್ತದೆ.

ಈಗ ವಿಧರ್ಮೀಯರ ಪಾದಾಘಾತಕ್ಕೆ ಸಿಕ್ಕಿ ನರಳುತ್ತಿರುವ ಜನಪದ
ವನ್ನು ಉದ್ಧರಿಸಲು ಸ್ಥಿರಸಂಕಲ್ಪಮಾಡಬೇಕು. ಜನರ ಮನಸ್ಸಿನಲ್ಲಿ ಬೇರೂರಿ
ರುವ ಷಂಡತನವನ್ನು ಹೊರದೂಡಿ ಅವರನ್ನು ರಣೋತ್ಸಾಹಿಗಳನ್ನಾಗಿ ಮಾಡ
ಬೇಕು. ಸೆರಗೊಡ್ಡಿ ಬೇಡುವುದರಿಂದ ಸ್ವಾತಂತ್ರ್ಯ ಬರುವುದಿಲ್ಲ; ಪರಾಕ್ರಮ
ದಿಂದಲೇ ಅದನ್ನು ಸಾಧಿಸಬೇಕು. ಯಾಚಿಸುವುದು ಅಧಃಪತನ; ಪೌರುಷ
ದಿಂದ ಸಾಧಿಸಬೇಕು. ಜೀವದಾನ ಮಾಡಲು ಸಿದ್ಧರಾಗಬೇಕು. ಮುಂದಿನ
ಸಂತತಿ ಸ್ವಾತಂತ್ರ್ಯವನ್ನು ಅನುಭವಿಸಬೇಕಾದರೆ ಇಂದಿನ ಜನ ಆತ್ಮಯಜ್ಞ
ಮಾಡಬೇಕು. ಪರರ ಹಂಗಿನಲ್ಲಿ ಸಿಕ್ಕಿಬಿದ್ದು ನೂರು ವರ್ಷ ಬದುಕುವುದ
ಕ್ಕಿಂತ, ಸ್ವಾತಂತ್ರ್ಯಪ್ರಿಯನಾಗಿ ಮೂರು ದಿನ ಬದುಕಿದರೂ ಸಾಕು.
ಸ್ವಧರ್ಮರಕ್ಷಣೆಗಾಗಿ ಮಡಿಯಲೇಬೇಕು. ದೇಶಾಭಿಮಾನರಹಿತರಾಗಿ ಹೇಡಿ
ಗಳಂತೆ ತಲೆತಗ್ಗಿಸಿ ನಡೆಯಬಾರದು. ಅಂಥ ಜೀವಗಳ್ಳನ ಬಾಳಿಗೆ
ಧಿಕ್ಕಾರವಿರಲಿ!

ಕುಮಾರಾ! ನಿನ್ನಲ್ಲಿ ಅಧ್ಯಾತ್ಮಬಲವಿದೆ; ಕ್ಷಾತ್ರಮನೋವೃತ್ತಿಯಿದೆ.
ನೀನು ಧೈರ್ಯಗೆಡದೆ ಕಾರ್ಯಕ್ಷೇತ್ರಕ್ಕೆ ಕಾಲಿಡಬೇಕು. ಜನನಾಯಕನಾಗಿ
ನಿಲ್ಲಬೇಕು. ನಿರ್ಮಲಚಿತ್ತರಿಂದಲೇ ಇದು ಸಾಧ್ಯ! ಕನ್ನಡಿಗರಲ್ಲಿ ಬಲ
ವಿಲ್ಲದಿಲ್ಲ: ಛಲವಿಲ್ಲದಿಲ್ಲ. ಅವರು ಛಲದಂಕಮಲ್ಲರು; ಸಾಹಸಪ್ರಿಯರು.
ಅವರನ್ನು ಸರಿಯಾದ ದಾರಿಯಲ್ಲಿ ಒಯ್ಯಬಲ್ಲ ಶಕ್ತರು ಬೇಕು. ಅವರು
ಒಗ್ಗಟ್ಟಿನಿಂದ ನಿಂತರೆಂದರೆ ಭೂಮಂಡಲವನ್ನೇ ಜಯಿಸಬಲ್ಲರು. ಪ್ರಾಣ

ವನ್ನಾದರೂ ಸಂತೋಷದಿಂದ ದೇಶಸೇವೆಗಾಗಿ ಕೊಡಬಲ್ಲರು; ಆದರೆ ಮಾನಹೀನರಂತೆ ಬದುಕಿರಲಾರರು. ಅವರ ಜೀವನವೇ ಸಿಂಹಜೀವನ; ಅವರ ಪರಾಕ್ರಮವೇ ಭೀಮಪರಾಕ್ರಮ. ಈಗ ಶಿಥಿಲವಾಗುತ್ತಿರುವ ಧರ್ಮವನ್ನು ಉಳಿಸಿ ರಾಷ್ಟ್ರಶಕ್ತಿಯನ್ನು ಒಮ್ಮುಖವಾಗಿ ತಿರುಗಿಸಬೇಕಾದರೆ ನೀನು ಮುಂದೆ ಬರಬೇಕು. ಕೇವಲ ಸಂನ್ಯಾಸಿಯಾಗಿ ಕಣ್ಮುಚ್ಚಿ ಕುಳಿತರೆ ಪ್ರಯೋಜನವಿಲ್ಲ. ದೇಶವೆಲ್ಲ ಅಧೋಗತಿಗೆ ಹೋಗುತ್ತಿರುವಾಗ ತಾನೊಬ್ಬನು ಮುಕ್ತನಾಗಬೇಕೆಂದು ಬಯಸುವುದು ಸ್ವಾರ್ಥ. ಪರಹಿತಾರ್ಥ ಸಾಧನೆಯೇ ನಿಜವಾದ ತಪಸ್ಸು. ಸಂನ್ಯಾಸಿಯ ಕ್ರಿಯಾಯೋಗದಂಡ ಇಂದು ಕೋದಂಡವಾಗಬೇಕು. ಅವನ ಕ್ರಿಯೆ ಜನಸಮೂಹ ಶತ್ರುನಾಶನಾಗಬೇಕು. ಕನ್ನಡನಾಡಿನ ಗೃಹಿಣಿಯರು ವೀರಸ್ತ್ರೀಯರಾಗಬೇಕು; ವೀರಕ್ಷತ್ರಿಯರಾಗಬೇಕು. ಅವರ ತೊಟ್ಟಿಲು ತೂಗುವ ಕೈ ಕತ್ತಿ ಹಿಡಿಯಬೇಕು. ಯೋಗಿಗಳ ತಾರಕದ ಬಾಯಿ ರಣಗೀತೆ ಹಾಡಬೇಕು. ವೃದ್ಧರು ಹಿರಿಯರ ಊರುಗೋಲು ವಜ್ರಾಯುಧವಾಗಬೇಕು. ರೈತನ ನೇಗಿಲು ಹಲಾಯುಧವಾಗಬೇಕು. ನಾಡಿಗೆ ಮರಳಿ ಸ್ವಾತಂತ್ರ್ಯವನ್ನು ಪಡೆದುಕೊಳ್ಳಬಹುದು. ಶೂರರಾದವರು ಸಾಯುವುದು ಒಂದೇ ಸಲ. ಹೇಡಿಗಳು ಕ್ಷಣಕ್ಷಣಕ್ಕೂ ಸಾಯುತ್ತಾರೆ. ಕ್ಷಾತ್ರಧರ್ಮವನ್ನು ಪುನಃ ಬೆಳೆಯಿಸಲು ಹವಣಿಸಬೇಕು. ಧರ್ಮರಕ್ಷಣೆಯಾಗಬೇಕಾದರೆ ಕ್ಷಾತ್ರತೇಜಸ್ಸನ್ನು ಜನರು ಗಳಿಸಿಕೊಳ್ಳಬೇಕು. ಪರಧರ್ಮೀಯರು ನಮ್ಮ ಸಂಸ್ಕೃತಿ ಧರ್ಮಗಳನ್ನು ನಾಶಮಾಡದಂತೆ ಅವರ ಅತ್ಯಾಚಾರವನ್ನು ತಡೆಗಟ್ಟಿ ನಿಲ್ಲಿಸಬೇಕಾದರೆ ಸ್ವರಾಜ್ಯಸ್ಥಾಪನೆಯಾಗಬೇಕು. ಈ ಮಹಾಕಾರ್ಯದಲ್ಲಿ ನೀನು ದೀಕ್ಷಾಚಾರ್ಯನಾಗಿ ನಿಲ್ಲು. ನೀನು ವೇದಾಂತಕೇಸರಿಯೆಂಬುದನ್ನು ಬಲ್ಲೆ. ನಿನ್ನ ಸಿಂಹನಾದ ದಶದಿಕ್ಕುಗಳಲ್ಲಿಯೂ ಮೊಳಗಲಿ. ವೇದಾಂತ ಧರ್ಮವನ್ನು ಉದ್ಧರಿಸು. ನಿರ್ವೀರ್ಯ ಕನ್ನಡಕುಲವನ್ನು ಎಚ್ಚರಗೊಳಿಸಿ ಸ್ವಾತಂತ್ರ್ಯದ ಮುಂಬೆಳಗನ್ನು ತೋರು; ರಾಷ್ಟ್ರಸೇವಾ ಕಂಕಣವನ್ನು ಧರಿಸಿ ಜನ್ಮಭೂಮಿಯನ್ನು ಉದ್ಧರಿಸು. ನಿನಗೆ ಶುಭವಾಗಲಿ; ನಿತ್ಯಮಂಗಳವಾಗಲಿ — ಎಂದು ಅವ್ಯಕ್ತಮೂರ್ತಿಯೊಂದು ನುಡಿದು ಕಣ್ಮರೆಯಾದಂತೆಯೂ ಭಾಸವಾಯಿತು. ಆ ಮಹಾಪುರುಷನು ಕಣ್ಣುಬಿಟ್ಟು ಕತ್ತೆತ್ತಿನೋಡಿದನು. ಮೊದಲಿನಂತೆಯೇ

ಬೆಳುದಿಂಗಳು. ಅವನು ಭಾವನೆಯಲ್ಲಿ ಮಗ್ನನಾಗಿದ್ದಾಗ ಇವಷ್ಟೂ ಅವನ ಮನಃಪಟಲದಮೇಲೆ ಮೂಡಿದ ದಿವ್ಯಸಂದರ್ಶನವೆಂದು ತೋರಿತು.

ಅಷ್ಟುಹೊತ್ತಿಗೆ ಚಂದ್ರನು ಹೇಮಕೂಟಾಚಲದ ಶಿಖರಗಳ ಹಿಂದೆ ಮರೆಯಾಗುತ್ತಿದ್ದನು. ಸೂರ್ಯನು ಕೆಂಪು ಬೀರುತ್ತಿದ್ದನು. ಆಕಾಶದಲ್ಲಿ ಅಲ್ಲೊಂದು ಇಲ್ಲೊಂದು ನಕ್ಷತ್ರ ಕಾಣುತ್ತಿತ್ತು. ಕರ್ಮಠರಾದ ಬ್ರಾಹ್ಮಣರು ನದಿಯ ಸ್ನಾನಕ್ಕೆ ಅಗ್ರಹಾರದಿಂದ ಹೊರಟುಬರುತ್ತಿದ್ದರು. ಕರ್ನಾಟಕ ಭಾಗ್ಯವಿಧಾತನ ಉದಯವೆಂಬಂತೆ ಸೂರ್ಯನು ಪೂರ್ವ-ದಿಕ್ಕಿನಲ್ಲಿ ಮೂಡುತ್ತಿದ್ದನು. ತುಂಗಭದ್ರಾನದಿಯ ತೀರದ ಮೇಲಿನ ಸ್ನಾನಘಟ್ಟಗಳಲ್ಲಿ ಹೆಂಗಸರೂ ಗಂಡಸರೂ ಸ್ನಾನಮಾಡುತ್ತಿದ್ದರು. ತ್ರಿಮತ ಬ್ರಾಹ್ಮಣರೂ ತಮ್ಮ ತಮ್ಮ ಮತಧರ್ಮಕ್ಕೆ ಅನುಸಾರವಾಗಿ ಸ್ನಾನ ಪ್ರಯೋಗಗಳನ್ನು ನೆರವೇರಿಸಿ ಸೂರ್ಯಾಭಿಮುಖವಾಗಿ ತಿರುಗಿಕೊಂಡು ಅರ್ಘ್ಯವನ್ನು ಬಿಡುತ್ತಿದ್ದರು. ವೀರಶೈವರು ಏಕಾಂತದಲ್ಲಿ ಕುಳಿತು ಇಷ್ಟಲಿಂಗಾರ್ಚನೆಯನ್ನು ಮಾಡುತ್ತಿದ್ದರು. ಜೈನಮತೀಯರು ಸ್ನಾನಸಂಧ್ಯಾವಂದನೆಗಳನ್ನು ಆಚರಿಸುತ್ತಿದ್ದರು. ಹೆಂಗಸರು [illegible] ಉಟ್ಟು [illegible]ಗಳಲ್ಲಿ ನೀರನ್ನು ತುಂಬಿಕೊಂಡು ಕತ್ತನ್ನು ಮೈಯನ್ನು ಬಳುಕಿಸುತ್ತ ಮನೆಗಳ ಕಡೆಗೆ ಹೋಗುತ್ತಿದ್ದರು. ತುಂಗಭದ್ರೆಯು ಯಾರ ಎಗ್ಗೂ ಇಲ್ಲದ ಎಲ್ಲರನ್ನೂ ಪಾವನಗೊಳಿಸುತ್ತ ನಡೆಯುತ್ತಿದ್ದಳು. ಪಂಪಾವಿರೂಪಾಕ್ಷೇಶ್ವರನ ಸನ್ನಿಧಿಯಲ್ಲಿ ಬ್ರಾಹ್ಮಣರು ವೇದ ಮಂತ್ರಗಳನ್ನು ಉಚ್ಚರಿಸುತ್ತಿದ್ದರು. ಪ್ರಾತಃಕಾಲಪೂಜೆಯು ನಡೆಯುತ್ತಿತ್ತು. ಜಾಗಟೆ, ಘಂಟೆ, ಶಂಖ, ಭೇರಿ, ತಾಳ, ಮೇಳಗಳು ಮೊಳಗುತ್ತಿದ್ದುವು. ಹೆಂಗಸರೂ ಗಂಡಸರೂ ಮಕ್ಕಳೂ ತಂಡತಂಡವಾಗಿ ದೇವಸ್ಥಾನಕ್ಕೆ ಹೋಗಿಬರುತ್ತಿದ್ದರು. ನದಿಯ ನೀರು ಏರುತಗ್ಗುಗಳಲ್ಲಿ ನೊರೆನೊರೆಯಾಗಿ ಬಿದ್ದೇಳುತ್ತ, ಎಳೆಗಾಳಿ ಸುಳಿಯುತ್ತಿರಲು, ಎಳೆಬಿಸಿಲು ನಗುತ್ತಿರಲು, ಅಲ್ಲಲ್ಲಿ ಸುಳಿಸುಳಿಯಾಗಿ ಸುತ್ತುತ್ತ ಕಲಕಲರವದಿಂದ ಹರಿದು ಹೋಗುತ್ತಿತ್ತು.

ಆ ಸಮಯದಲ್ಲಿ ಹೇಮಕೂಟಾಚಲದ [illegible] ಕಡೆಗೆ ಆ ಮಹಾಪುರುಷನು ಇಳಿಯುತ್ತಿದ್ದನು. ಆಗಾಗ [illegible] ದಾರಿಯಲ್ಲಿಯೇ ನಿಂತುಬಿಡುತ್ತಿದ್ದನು. [illegible] ಹೆಜ್ಜೆ ಮುಂದೆ ಹೋಗಿ

ಏನನ್ನೋ ಧ್ಯಾನಿಸುವವನಂತೆ ಸುತ್ತ ನಿಂತುಕೊಳ್ಳುತ್ತಿದ್ದನು. ಹಿಂಭಾಗದಲ್ಲಿ ತಲೆಯೆತ್ತಿ ನಿಂತಿರುವ ಹೇಮಕೂಟಾಚಲ; ಮುಂಭಾಗದಲ್ಲಿ ನಿರರ್ಗಳವಾಗಿ ಹರಿಯುತ್ತಿರುವ ತುಂಗಭದ್ರಾನದಿ! ಒಮ್ಮೆ ಉನ್ನತಗಿರಿಯನ್ನು ನೋಡುವನು; ಮತ್ತೊಮ್ಮೆ ಗಂಭೀರ ತುಂಗಭದ್ರೆಯನ್ನು ನೋಡುವನು. ಈ ಎರಡೂ ಆ ಸಿದ್ಧನಿಗೆ ಏನನ್ನೋ ಬೋಧಿಸುತ್ತಿರುವಂತೆ ಎಣಿಸಿದನು. ಗಿರಿಯಂತೆ ಅಚಲಚಿತ್ತನಾಗು—ನದಿಯಂತೆ ಕರ್ತವ್ಯಶೀಲನಾಗು—ಎಂದು ಆ ಮನೋಹರ ಪ್ರಕೃತಿದೇವಿಯು ಆ ಮಹಾಪುರುಷನಿಗೆ ಜೀವನ ರಹಸ್ಯವನ್ನು ಉಪದೇಶಿಸುತ್ತಿದ್ದಂತೆಯೇ ಕಾಣುತ್ತಿತ್ತು!

ಆ ಮಹಾಪುರುಷನು ಬೇಗಬೇಗನೆ ನಡೆಯುತ್ತಿದ್ದನು. ಆತನ ಮುಖದಲ್ಲಿ ಪರ್ವತ ಗಾಂಭೀರ್ಯವೂ, ತುಂಗಭದ್ರಾ ಜಲಲಾವಣ್ಯವೂ ಕಾಣುತ್ತಿದ್ದುವು. ಕಳೆದರಾತ್ರಿ ತಾನು ಧ್ಯಾನಸಮಾಧಿಯಲ್ಲಿದ್ದಾಗ ಕಂಡ ದಿವ್ಯದರ್ಶನವನ್ನು ಆಗಾಗ ಮನಸ್ಸಿನಲ್ಲಿಯೇ ಚಿತ್ರಿಸಿಕೊಳ್ಳುತ್ತಿದ್ದನು. ಕರ್ಣಾಟಕ ಮಾತೆಯು ತನಗೆ ಸಂದೇಶವನ್ನು ನೀಡಿರುವಳೆಂದು ನಿರ್ಧರಿಸಿದನು. ಅಂಥ ಪವಿತ್ರಕಾರ್ಯದಲ್ಲಿ ತಾನು ಕಂಕಣಬದ್ಧನಾಗಿ ನಿಲ್ಲಬೇಕೆಂದೂ ನಿಶ್ಚಯಿಸಿದನು. ತನ್ನ ಅಂತರ್ವಾಣಿಯ ಆದೇಶವನ್ನು ಜೀವಮಾನಪರ್ಯಂತ ಪಾಲಿಸುವುದಾಗಿಯೂ ಸಂಕಲ್ಪಿಸಿದನು.

ಇನ್ನೂ ಸ್ವಲ್ಪ ಮುಂದೆ ನಡೆದನು. ಅಲ್ಲಿ ತುಂಗಭದ್ರಾ ನದಿಯು ಕಣಿವೆಯ ಮಗ್ಗುಲಲ್ಲಿ ತಿರುಗಿ ಮುಂದೆ ಹರಿದುಹೋಗುತ್ತಿದೆ. ಆ ತಿರುವಿನಲ್ಲಿ ಪ್ರತಿದಿನವೂ ಆ ಸಂನ್ಯಾಸಿ ಸ್ನಾನಮಾಡಿಕೊಂಡು ನಿತ್ಯಾರ್ಚನೆಗಳನ್ನು ನೆರವೇರಿಸುತ್ತಿದ್ದನು. ಆ ದುರ್ಗಮವಾದ ಪರ್ವತಭಾಗಕ್ಕೆ ಜನರು ಸುಳಿಯುತ್ತಿರಲಿಲ್ಲ. ಆ ಏಕಾಂತಸ್ಥಳದಲ್ಲಿ ಕುಳಿತು ಬಹಳ ಹೊತ್ತು ಆತನು ಧ್ಯಾನಮಗ್ನನಾಗಿರುತ್ತಿದ್ದನು. ಎಂದಿನಂತೆ ಆ ದಿನವೂ ಆತನು ಆಯೆಡೆಯಲ್ಲಿಯೇ ಸ್ನಾನಮಾಡಿ ಜಪಧ್ಯಾನವನ್ನು ಮುಗಿಸಿದನು. ಅಲ್ಲಿಗೆ ಸಮೀಪದಲ್ಲಿಯೇ ಆತನ ಪರ್ಣಕುಟೀರವಿತ್ತು. ಅಂದು ಆತನು ಆ ಗಿರಿಶ್ರೇಣಿಯ ಮಧ್ಯದಲ್ಲಿ [illegible] ಉಚ್ಚರಿಸಿದ ಸಂಕಲ್ಪ — ಎಂದಿನಂತಲ್ಲ!

ತಾಯಿ ಭುವನೇಶ್ವರೀ ದೇವಿ – ನಾನು ನಾಲ್ವತ್ತು ವರ್ಷದಿಂದ ಮಾಡಿದ ನನ್ನ ಅಖಂಡ ತಪಸ್ಸಿನ ಫಲವನ್ನು ಕರ್ಣಾಟಕದ ಉದ್ಧಾರಕ್ಕಾಗಿಯೇ ಧಾರೆ ಯೆರೆಯುವೆನು. ಈ ಪ್ರಪಂಚದಲ್ಲಿ ನನ್ನದೆಂಬುದು ಯಾವುದೂ ಇಲ್ಲ. ತಾಯ್ನಾಡಿನ ಸೇವಾಭಾಗ್ಯವೊಂದೇ ನನ್ನದು. ಈ ಸೇವಾಕಾರ್ಯದಲ್ಲಿ ನಾನು ಸರ್ವಸ್ವವನ್ನು ತ್ಯಾಗಮಾಡಲು ಸಿದ್ಧನಾಗಿರುವೆನು. ಕನ್ನಡ ಕುಲಕೋಟಿಯ ಸ್ವಾತಂತ್ರ್ಯವೇ ನನಗೆ ಮುಕ್ತಿ; ಸನಾತನ ಧರ್ಮದ ಅಭ್ಯುದಯವೇ ನನ್ನ ಪರಮಾರ್ಥ! ನನ್ನ ಜೀವಿತದಲ್ಲಿ ಇದಕ್ಕಿಂತಲೂ ಮಿಗಿಲಾದುದು ಇನ್ನೊಂದಿಲ್ಲ. ಮಹಮ್ಮದೀಯರ ಪದಾಘಾತದಿಂದ ಜರ್ಝರಿತವಾಗುತ್ತಿರುವ ಕನ್ನಡ ನಾಡನ್ನು ಒಟ್ಟುಗೂಡಿಸಿ ಜನಬಲವನ್ನು ಕೇಂದ್ರೀಕರಿಸಿ ಧ್ಯೇಯಸಾಧನೆಗಾಗಿಯೇ ದುಡಿಯುವೆನು. ಈ ಮಹಾಕಾರ್ಯದಲ್ಲಿ ಸತ್ತರೂ ಚಿಂತೆಯಿಲ್ಲ. ಸತ್ತವರೇನು ಮತ್ತೆ ಹುಟ್ಟುವುದಿಲ್ಲವೆ? ನಮ್ಮ ಮುನ್ನುದಾವರು ಜೀವಿತಕ್ಕಾಗಿ ಸಾಯಬೇಕೆಂದು ಪುರಾಣಗಳು ಸಾರುತ್ತವೆ. ನಾನು ಬಾಲ್ಯದಿಂದಲೂ ಗುರುಹಿರಿಯರ ಸನ್ನಿಧಿಯಲ್ಲಿ ಅಭ್ಯಾಸಮಾಡಿ ಆರ್ಜಿಸಿದ ವಿದ್ಯಾಸರ್ವಸ್ವವನ್ನು ಸನಾತನ ಧರ್ಮಸಂಸ್ಥಾಪನೆಗಾಗಿಯೇ ಮೀಸಲಾಗಿರಿಸಿದೆನು. ನಾನು ಕಲಿತ ರಾಜನೀತಿಯೆಲ್ಲವೂ ನಾಡಿನ ಅಭ್ಯುನ್ನತಿಯನ್ನು ಸಾಧಿಸುವೆನು. ಬುದ್ಧಿಶಕ್ತಿಯಿದೆ. [illegible]! ಈ ತ್ರಿವೇಣೀ ಸಂಗಮದ ಪವಿತ್ರಸ್ಥಾನದಲ್ಲಿ [illegible] ಎಂದಿನಂತೆ ನಾನು — ಹಗಲಿರುಳೂ ನಾಡಿನ ಸ್ವಾತಂತ್ರ್ಯಕ್ಕಾಗಿಯೇ ದುಡಿಯುವೆನು. ಜಗನ್ಮಾತೆ! ಈ ಸಂಕಲ್ಪವನ್ನು ಆದೇಶಿಸಿ ನನಗೆ ಸರಿಯಾದ ಮಾರ್ಗ ತೋರಿಸು! ಯಾವ ಯೋಗ್ಯ ರೂಪದಿಂದಲಾದರೂ ನೀನು ಮೈದೋರಿ ಕರುಣಿಸು. ಪುರುಷಪ್ರಯತ್ನವೆಂಬುದು ಎಷ್ಟೇ ಬಲಯುತವಾದುದಾದರೂ ದೈವಬಲವಿರಲೇಬೇಕು. ಈಗ ನಾಡಿಗೆ ಒದಗಿರುವ ದುರವಸ್ಥೆಯನ್ನು ಕೊನೆಗಾಣಿಸಿ ಧರ್ಮಸಂಸ್ಥೆಗಳನ್ನು ಉಳಿಸಬೇಕಾದರೆ ಸುಭದ್ರವಾದ ಸ್ವರಾಜ್ಯವನ್ನು ಸ್ಥಾಪಿಸದೆ ವಿಧಿಯಿಲ್ಲ. ಉತ್ತರದ ಕಡೆಯಿಂದ ನುಗ್ಗಿಬರುತ್ತಿರುವ ಮುಸಲ್ಮಾನರನ್ನು ಎದುರಿಸಬೇಕಾದರೆ ಕರ್ಣಾಟಕವೇ ಯುದ್ಧರಂಗ! ದಕ್ಷಿಣಾಪಥದ ಸಮಗ್ರ ಅವನತಿ ಅಥವಾ ಉನ್ನತಿಯು ಕರ್ಣಾಟಕದ ಅವನತಿ ಅಥವಾ ಉನ್ನತಿಯನ್ನು ಅವಲಂಬಿಸಿದೆ. ವಿಂಧ್ಯಾದ್ರಿಯನ್ನು ದಾಟಿ ದಕ್ಷಿಣಕ್ಕೆ ಹರಿದು

ಬರುವ ಆ ಪ್ರಚಂಡ ಶತ್ರುಧಾಳಿಯನ್ನು ತಡೆಯಲು ಮೊಟ್ಟಮೊದಲು ಕರ್ಣಾಟಕವೇ ಎದೆಗೊಟ್ಟು ನಿಲ್ಲಬೇಕು. ಈ ಸಾಹಸಕಾರ್ಯಕ್ಕೆ ನನ್ನ ನಾಡನ್ನು ಸಿದ್ಧಗೊಳಿಸಬೇಕು. ತಾಯಿ! ನನ್ನನ್ನು ಅನುಗ್ರಹಿಸು. ಈ ಪಂಪಾ ವಿರೂಪಾಕ್ಷಸ್ವಾಮಿಯ ಹೆಸರಿನಲ್ಲಿ ಈ ಬೀಡಿನಲ್ಲಿಯೇ ಕರ್ಣಾಟಕ ರಾಜ್ಯವನ್ನು ಸ್ಥಾಪಿಸುವೆನು. ನಾರಾಯಣನು ವರಾಹಾವತಾರ ಮಾಡಿ ರಾಕ್ಷಸರು ಕದ್ದು ಒಯ್ದಿದ್ದ ಭೂಮಿಯನ್ನು ಪುನರುತ್ಥಾನಗೊಳಿಸಿದ ಸ್ಮಾರಕವಾಗಿಯೇ ಇಂದು ಅನ್ಯಾಕ್ರಾಂತವಾಗಿರುವ ಕನ್ನಡನಾಡನ್ನು ಸ್ವಾತಂತ್ರ್ಯಗೊಳಿಸಿ ಆ ವರಾಹ ಚಿಹ್ನೆಯನ್ನು ನಾಡಿನ ಧ್ವಜದಲ್ಲಿ ಕೆತ್ತಬೇಕು. ದೇವಿ ತುಂಗಭದ್ರೆಯೇ ಸಾಕ್ಷಿ! ಶ್ರೀ ವಿರೂಪಾಕ್ಷದೇವನ ಪಾದಸ್ಪರ್ಶದಿಂದ ಪುನೀತಳಾದ ನೀನು ನನ್ನನ್ನು ಆಶೀರ್ವದಿಸು! ಜಗದ್ಗುರುಚಾರ್ಯರೇ ನನ್ನಲ್ಲಿ ಸ್ಥೈರ್ಯವನ್ನು ತುಂಬು! ಮಹಾದೇವತೆಗಳೇ ನನಗೆ ನೆರವಾಗಿ ನಿಲ್ಲಿರಿ! ವಾಯುದೇವನೇ ನನಗೆ ಆತ್ಮಬಲವನ್ನು ನೀಡು! ಕರ್ಮಸಾಕ್ಷಿಯೇ ನೀನು ಮಾರ್ಗದರ್ಶಕನಾಗಿರು. ಭೂಮಿದೇವಿಯೇ ಪ್ರಸನ್ನಚಿತ್ತಳಾಗು. ಭುವನೇಶ್ವರೀ ದೇವಿಯೇ ನಿನಗಿದೋ ಪ್ರಣಾಮಗಳು. ತುಂಗಭದ್ರಾದೇವಿಯೇ ನಿನಗೆ ವಂದನೆಗಳು - ಎಂಬ ಆ ಪುರುಷಸಿಂಹನ ಗಂಭೀರವಾಣಿ ಗಿರಿಶ್ರೇಣಿಯಲ್ಲಿ ಮೊರೆಯಿತು, ನದಿಯ ತೆರೆಗಳಲ್ಲಿ ಮೊಳಗಿತು, ವನಮಧ್ಯದಲ್ಲಿ ಧ್ವನಿಗೈದಿತು.

ಅಂದಿನ ಆ ಮಹಾಪುರುಷನು ಸ್ಥಿರಗಂಭೀರಭಾವದಿಂದ ಆ ಅರಣ್ಯಮಾರ್ಗದಲ್ಲಿ ನಡೆಯುತ್ತ ಕಣ್ಮರೆಯಾದನು! ಈ ಸಂನ್ಯಾಸಿಯೇ ಕರ್ಮಯೋಗಿ ಶ್ರೀ ವಿದ್ಯಾರಣ್ಯರು.



# ಎರಡನೆಯ ಅಧ್ಯಾಯ

## ವೀರಸಂನ್ಯಾಸಿ, ಆಶ್ರಮಜೀವನ

ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿಯಃ ।
ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥ —ಗೀತೆ.

ಶ್ರೀ ವಿದ್ಯಾರಣ್ಯರು ವೀರಸಂನ್ಯಾಸಿ, ನಿಷ್ಕಾಮಕರ್ಮಯೋಗಿ. ಅವರು ಅಗ್ರಹಾರವನ್ನು ಬಿಟ್ಟು ತುಂಗಭದ್ರಾ ತೀರದಲ್ಲಿ, ಹೇಮಕೂಟಾಚಲದ ತಪ್ಪಲಿನಲ್ಲಿ ಒಂದು ಪರ್ಣಕುಟೀರವನ್ನು ನಿರ್ಮಿಸಿಕೊಂಡು ಆಶ್ರಮಜೀವನವನ್ನು ನಡೆಸುತ್ತಿದ್ದರು. ಅವರ ಧರ್ಮಪತ್ನಿ ವೈತಿಹೋತ್ರಿ. ಆಕೆ ವಾತಾಪಿಪುರದ ಚಾಲುಕ್ಯವಂಶದ ಮಂತ್ರಿಯಾಗಿದ್ದ ವೀತಿಹೋತ್ರನ ಮಗಳು. ಮಹರ್ಷಿ ಅಗಸ್ತ್ಯರಿಗೆ ರಾಜಪುತ್ರಿ ಲೋಪಾಮುದ್ರೆ ಹೆಂಡತಿಯಾಗಿದ್ದಂತೆ ಆ ಅಮಾತ್ಯಪುತ್ರಿ ವೈತಿಹೋತ್ರಿಯು ವಿದ್ಯಾರಣ್ಯರಿಗೆ ಧರ್ಮಪತ್ನಿಯಾಗಿದ್ದಳು. ಐಶ್ವರ್ಯ ವಿಲಾಸದಲ್ಲಿ ಬೆಳೆದಿದ್ದ ಹೆಣ್ಣುಮಗಳು ಬಡಬ್ರಾಹ್ಮಣನ ಪತ್ನಿಯಾಗಿ ಪತಿಗೆ ತಕ್ಕ ಸತಿಯಾಗಿ ಬಾಳುತ್ತಿದ್ದಳು. ಅವಳು ಎಂದಿಗೂ ತವರುಮನೆಯ ಸಿರಿಯನ್ನು ನೆನೆಸಿಕೊಂಡು ಪತಿಯ ಸಂಸಾರದಲ್ಲಿ ಉದಾಸೀನಭಾವದಿಂದ ವರ್ತಿಸಿದವಳಲ್ಲ. ಅವಳು ಬಡತನಕ್ಕೆ ತಕ್ಕ ಉಡುಗೆ ತೊಡಿಗೆಗಳಿಂದಲೇ ತೃಪ್ತಳಾಗಿರುತ್ತಿದ್ದಳು. ಸುಸಂಸ್ಕೃತಳಾದ ಅವಳ ಮನೋಮಂದಿರದಲ್ಲಿ ಪತಿಯ ಪವಿತ್ರ ಮೂರ್ತಿಯನ್ನು ನೆಲೆಗೊಳಿಸಿದ್ದಳು. ಬಡತನದ ದಾರುಣ ಪರಿಸ್ಥಿತಿಯಾಗಲಿ ತನ್ನ ತವರುಮನೆಯ ವೈಭವದ ನೆನಪಾಗಲಿ ಅವಳ ಮನಸ್ಸನ್ನು ಪ್ರಕ್ಷುಬ್ಧಗೊಳಿಸಿರಲಿಲ್ಲ. ಆತ್ಮಸಂಯಮದಿಂದ ಋಷಿಪತ್ನಿಯಂತೆ ಆಕೆ ವಿದ್ಯಾರಣ್ಯರೊಂದಿಗೆ ಸಂಸಾರ ನಡೆಸುತ್ತಿದ್ದಳು. ಅತ್ತೆ ಶ್ರೀಮತೀದೇವಿ ಸೊಸೆಯ ಸದ್ಗುಣಗಳನ್ನು ಕಂಡು ಆನಂದಿಸುತ್ತಿದ್ದಳು. ಒಂದು ದೊಡ್ಡ ರಾಜ್ಯದ ಮಂತ್ರಿ ಮಗಳು ಸಾಮಾನ್ಯ ಬಡವಳಂತೆ ಹೊಂದಿಕೊಂಡು ಸಂಸಾರ ಮಾಡುವುದೆಂದರೆ ಅದಕ್ಕಿಂತಲೂ ನಿಸ್ವಾರ್ಥಬುದ್ಧಿಯುಂಟೆ.

ವಿದ್ಯಾರಣ್ಯರು ತಮ್ಮ ಸಂಕಲ್ಪಸಾಧನೆಗಾಗಿ ಸದಾ ಆಲೋಚಿಸುತ್ತಿದ್ದರು. ಶ್ರೀ ಭುವನೇಶ್ವರೀದೇವಿಯು ಯಾವ ರೂಪದಿಂದಲಾದರೂ ತನಗೆ

ಮಾರ್ಗದರ್ಶಕಳಾಗಬಹುದೆಂದು ಚಿಂತಿಸುತ್ತಿದ್ದರು. ಪ್ರತಿದಿನವೂ ಬಹಳ ಹೊತ್ತು ಧ್ಯಾನಾಸಕ್ತರಾಗಿರುತ್ತಿದ್ದರು. "ಈ ಜಗತ್ತು ಪರಮಾತ್ಮನ ಕ್ರೀಡಾ ಮಂದಿರ. ನಾವೆಲ್ಲರೂ ಜಗತ್ತಿನಲ್ಲಿ ಒಂದೊಂದು ಅಣುಸ್ವರೂಪರು. ಈ ಜಗನ್ನಾಟಕದಲ್ಲಿ ಪ್ರತಿಯೊಬ್ಬನೂ ಒಂದೊಂದು ಪಾತ್ರವನ್ನು ವಹಿಸಲೇ ಬೇಕು. ಅದಕ್ಕೆ ಅನುಗುಣವಾದ ಸಿದ್ಧತೆಯನ್ನು ಪ್ರಕೃತಿ ಮಾತೆಯಾಗಲೇ ಒದಗಿಸಿಕೊಟ್ಟಿರುವಳು. ಅದನ್ನೇ ಸ್ವಭಾವವೆನ್ನುವರು. ಪ್ರತಿಯೊಬ್ಬನೂ ತನ್ನ ಹಿಂದಿನ ಗುಣಕರ್ಮಕ್ಕೆ ತಕ್ಕಂತೆ ಒಂದೊಂದು ಸ್ವಭಾವವನ್ನು ಅನು ಸರಿಸಿಕೊಂಡೇ ಬಂದಿರುವನು. ಅದನ್ನು ಅನುಸರಿಸಿದ ಬುದ್ಧಿಯು ತನಗೆ ತಾನೇ ಹುಟ್ಟುತ್ತಿರುವುದು. ಬೇಡಬೇಡವೆಂದರೂ ಬಿಡದೇ ಒಳಗಿನಿಂದ ಪ್ರೇರಿಸಿ ಕೆಲಸ ಮಾಡಿಸಿಬಿಡುವುದು. ಆದ್ದರಿಂದ ಈ ಜಗನ್ನಾಟಕದಲ್ಲಿ ನಮಗೆ ಸಿದ್ಧವಾಗಿರುವ ಭೂಮಿಕೆಯನ್ನು ನಾವು ಸಂತೋಷದಿಂದ ವಹಿಸಲೇ ಬೇಕು. ಪರಮಾತ್ಮನ ಪ್ರೇರಣಾ ಪ್ರವಾಹವು ಸ್ವೇಚ್ಛೆಯಾಗಿ ಹರಿಯಲಾರಂ ಭಿಸುವದು. ಆ ಪ್ರೇರಣೆಗೆ ಮನುಷ್ಯನು ತಲೆಬಾಗಲೇಬೇಕು. ಅದರಂತೆ ಆ ವ್ಯಕ್ತಿ ಕಾರ್ಯತತ್ಪರನಾಗಿ ದುಡಿಯಬೇಕು" ಎಂಬುದಾಗಿ ಅವರು ಆಗಾಗ ಆಲೋಚಿಸುತ್ತಿದ್ದರು. ಇದೇ ಅರ್ಥ ಬರುವಂತೆ ಅವರು ಎಷ್ಟೋ ಸಂದರ್ಭಗಳಲ್ಲಿ ತಮ್ಮ ಪತ್ನಿ ವೈತಿಹೋತ್ರೀದೇವಿಗೆ ಹೇಳುತ್ತಿದ್ದರು. ಹೀಗೆ ಅವರ ಮನಸ್ಸು ಸ್ವರಾಜ್ಯಸ್ಥಾಪನೆಯ ಕಾರ್ಯಕ್ಕೆ ಹದವಾಗುತ್ತಿತ್ತು. ಅವರು ತಮ್ಮ ಪ್ರಯತ್ನದಲ್ಲಿ ದೈವಾನುಕೂಲವನ್ನು ನಿರೀಕ್ಷಿಸುತ್ತಿದ್ದರು. ಅವರಿಗೆ ಜನಬಲವಿಲ್ಲ ಧನಬಲವಿಲ್ಲ; ವಿದ್ಯಾಬಲವೊಂದೇ ಅವರಲ್ಲಿದ್ದುದು. ಅವರು ತಮ್ಮ ವಿದ್ಯಾಸಂಪತ್ತನ್ನೂ ಆತ್ಮಬಲವನ್ನೂ ಬ್ರಹ್ಮತೇಜಸ್ಸನ್ನೂ ಸ್ವದೇಶೋ ನ್ನತಿಗಾಗಿ ನೀಡಲು ಹವಣಿಸುತ್ತಿದ್ದರು.

ವಿದ್ಯಾರಣ್ಯರು ಆಶ್ರಮದಲ್ಲಿ ಕರ್ಮಯೋಗಿಯಂತೆ ಕಾಲಕಳೆಯುತ್ತಿ ದ್ದರು. ಅವರು ತಮ್ಮ ಇಷ್ಟಸಿದ್ಧಿಗಾಗಿ ಶ್ರೀ ಭುವನೇಶ್ವರಿಯನ್ನು ಕುರಿತು ತಪಸ್ಸು ಮಾಡುತ್ತ ದೇವಿಯ ಅನುಗ್ರಹಕ್ಕೆ ಪಾತ್ರರಾಗುತ್ತಿದ್ದರು. ಅವರ ಕೀರ್ತಿಯು ಎಲ್ಲೆಲ್ಲಿಯೂ ಹಬ್ಬಿತು. ಜನರು ತಂಡತಂಡವಾಗಿ ಅವರ ಸಂದರ್ಶನಕ್ಕೆ ಬಂದು ಹೋಗುತ್ತಿದ್ದರು. ಅವರು ಕಾಲವನ್ನು ವ್ಯರ್ಥವಾಗಿ ಕಳೆಯುತ್ತಿರಲಿಲ್ಲ; ದೇಶದ ಆಗುಹೋಗುಗಳನ್ನು ಜನರಿಂದ ಕೇಳಿ ತಿಳಿದು

ಕೊಳ್ಳುತ್ತಿದ್ದರು. ಆಗಾಗ ಜನರಿಗೆ ಕನ್ನಡನಾಡಿನ ಗತವೈಭವವನ್ನು ಸಮಯವರಿತು ತಿಳಿಸುತ್ತ ದೇಶಸೇವೆಗೆ ಎಲ್ಲರೂ ಒಂದಾಗಬೇಕೆಂದು ಬೋಧಿಸುತ್ತಿದ್ದರು. ವೇದಧರ್ಮೋದ್ಧಾರಕ್ಕಾಗಿ ಅವರು ಅನೇಕ ಗ್ರಂಥಗಳನ್ನು ಬರೆಯುತ್ತಲೂ ಇದ್ದರು.

ವಿದ್ಯಾರಣ್ಯರು ಅತ್ಯಂತ ಕರ್ಮಠರು. ಸಂಜೆ ಮುಂಜೆ ಉಷಃಕಾಲಕ್ಕೆ ಎದ್ದು ತುಂಗಭದ್ರಾ ನದಿಯಲ್ಲಿ ಸ್ನಾನಮಾಡಿ ಶುಚಿರ್ಭೂತರಾಗಿ ಮಡಿಯುಟ್ಟು, ವಿಭೂತಿ ರುದ್ರಾಕ್ಷಿಧಾರಣೆ ಮಾಡಿಕೊಂಡು ಜಪತಪಗಳನ್ನು ನೆರವೇರಿಸಿಕೊಂಡು ಶ್ರೀ ಭುವನೇಶ್ವರಿಯ ದರ್ಶನಕ್ಕೆ ಬೆಳಕು ಹರಿಯುವುದರೊಳಗಾಗಿಯೇ ಹೋಗುತ್ತಿದ್ದರು. ಅವರ ಭವ್ಯವಾದ ಶರೀರ ಸಂಪತ್ತು ಎಂಥವರಲ್ಲಿಯೂ ಭಕ್ತಿಭಾವವನ್ನು ಉಂಟುಮಾಡುತ್ತಿತ್ತು. ಅವರು ಪ್ರತ್ಯಕ್ಷ ಪರಮೇಶ್ವರನಂತೆ ಕಾಣುತ್ತಿದ್ದರು. ಭುವನೇಶ್ವರಿಯ ದರ್ಶನಕಾಲದಲ್ಲಿ ಅವರು ಬಹಳ ಹೊತ್ತು ಮೌನವಾಗಿ ಕುಳಿತು ಧ್ಯಾನಮಾಡುತ್ತಿದ್ದರು. ಅವರ ಕಣ್ಣಿನಿಂದ ಆನಂದಾಶ್ರುಗಳು ಸಂತತವಾಗಿ ಹರಿಯುತ್ತಿದ್ದವು.

ಅವರ ಕುಟೀರ ಋಷ್ಯಾಶ್ರಮದಂತಿತ್ತು. ಅನೇಕ ವಿದ್ಯಾರ್ಥಿಗಳಿಗೆ ಅವರು ಪಾಠಹೇಳಿಕೊಡುತ್ತಿದ್ದರು. ವೇದವೇದಾಂಗಗಳನ್ನೂ ಮುಖ್ಯ ಶಾಸ್ತ್ರ ವಿಚಾರಗಳನ್ನೂ ಅವರು ಶಿಷ್ಯರಿಗೆ ಆಸಕ್ತಿಯಿಂದ ಬೋಧಿಸುತ್ತಿದ್ದರು. ಕೇವಲ ವೈದಿಕ ವಿದ್ಯೆಯನ್ನು ಮಾತ್ರವೇ ಕಲಿತು ಅಷ್ಟಕ್ಕೆ ತೃಪ್ತರಾಗುವಂತಿರಲಿಲ್ಲ. ವಿದ್ಯಾರಣ್ಯರು ಆ ವಿದ್ಯಾರ್ಥಿಗಳಿಗೆ ರಾಜನೀತಿಯನ್ನೂ ಅರ್ಥಶಾಸ್ತ್ರವನ್ನೂ ಕಲಿಸುತ್ತಿದ್ದರು. ಪ್ರತಿಭಾವಂತರಾದ ಆ ಶಿಷ್ಯರು ಗುರುಮುಖದಿಂದ ಎಲ್ಲ ವಿದ್ಯೆಗಳನ್ನೂ ಭಕ್ತಿಯಿಂದ ಕಲಿಯುತ್ತಿದ್ದರು. ಮುಂದೆ ಸನಾತನ ಧರ್ಮ ಜ್ಯೋತಿಗಳಾಗಬೇಕೆಂದು ಅವರು ಶಿಷ್ಯರಿಗೆ ಆಗಾಗ ಹೇಳುತ್ತಿದ್ದರು. ಹೀಗೆ ಅವರು ಅವಿಚ್ಛಿನ್ನವಾಗಿ ಸನಾತನ ಧರ್ಮ ಪ್ರಚಾರವನ್ನು ನಡೆಯಿಸುತ್ತಿದ್ದರು. ಆದರೆ ಅವರ ಸಂಕಲ್ಪದಂತೆ ರಾಜ್ಯಸ್ಥಾಪನೆ ಮಾಡುವ ಯೋಗವಿನ್ನೂ ಒದಗಿಬರಲಿಲ್ಲವೆಂದು ಯೋಚಿಸುತ್ತಲೇ ಇದ್ದರು.

ಕರ್ಮಯೋಗಿ ರಾಜಕಾರಣ ಪಟು ಕೌಟಿಲ್ಯನ ಶಕ್ತಿ ಸಾಹಸಗಳನ್ನೂ ಅವನ ಪ್ರತಿಭಾ ಸಂಪತ್ತನ್ನೂ ಕುರಿತು ವಿದ್ಯಾರಣ್ಯರು ಎಷ್ಟೋ ಸಲ ತಮ್ಮ ಶಿಷ್ಯವೃಂದದಲ್ಲಿ ಹೆಮ್ಮೆಯಿಂದ ಮಾತನಾಡುತ್ತಿದ್ದರು. ಅವನು ಹಠ

ತೊಟ್ಟು ನವನಂದರನ್ನು ನಿರ್ಮೂಲನಮಾಡಿ ಚಂದ್ರಗುಪ್ತನನ್ನು ಸಿಂಹಾಸನದ ಮೇಲೆ ಕೂರಿಸಿ ರಾಜ್ಯಸ್ಥಾಪನೆ ಮಾಡಿದ ರೀತಿಯಲ್ಲಿಯೇ ತಾವೂ ವಿಧರ್ಮಿಗಳ ಹಾವಳಿಯನ್ನು ಅಡಗಿಸಿ ಧರ್ಮಸಂಸ್ಥಾಪನೆಗಾಗಿ ಹಿಂದೂರಾಜ್ಯವನ್ನು ಕಟ್ಟಬೇಕೆಂದು ತಿಳಿಸುತ್ತಿದ್ದರು. ಈ ಮಹಾಕಾರ್ಯದಲ್ಲಿ ಎಲ್ಲರೂ ಭುಜಕೊಟ್ಟು ಧೈರ್ಯಮನೋಭಾವದಿಂದ ನಿಲ್ಲಬೇಕೆಂದು ಅವರು ಆಶಿಸುತ್ತಿದ್ದರು.

ಸಂಜೆಯವೇಳೆ ವಿದ್ಯಾರಣ್ಯರು ರಮ್ಯವಾದ ವನಪ್ರದೇಶದಲ್ಲಿ ತುಂಗಭದ್ರಾನದಿಯ ತಟದಲ್ಲಿ ಶಿಷ್ಯರೊಂದಿಗೆ ಅಡ್ಡಾಡುತ್ತಿದ್ದರು. ಆಗ ಅವರು ತಮ್ಮ ಶಿಷ್ಯರಿಗೆ ಅಂದಿನ ಕರ್ಣಾಟಕದ ಪರಿಸ್ಥಿತಿಯನ್ನು ಕುರಿತು ವಿಶದವಾಗಿ ಹೇಳುತ್ತಿದ್ದರು. "ಕ್ಷತ್ರಿಯನಾದವನು ಮಾತ್ರನೇ ಶಸ್ತ್ರ ಹಿಡಿದು ಯುದ್ಧ ಮಾಡಬೇಕೆಂಬ ನಿಯಮವಿಲ್ಲ. ಅವಶ್ಯಕತೆ ಬಿದ್ದರೆ ಬ್ರಾಹ್ಮಣನೂ ಯುದ್ಧಮುಖಕ್ಕೆ ನಿಲ್ಲಬೇಕು. ಶಾಂತಿಕಾಲದಲ್ಲಿ ವೇದಘೋಷ ಮಾಡತಕ್ಕ ವೀರಶ್ರೋತ್ರಿಯನು ಯುದ್ಧಕಾಲದಲ್ಲಿ ವೀರಘೋಷ ಮಾಡಬೇಕು. ಅದರಿಂದ ಬ್ರಾಹ್ಮಣಧರ್ಮಕ್ಕೆ ಯಾವ ಚ್ಯುತಿಯೂ ಬರಲಾರದು. ಬ್ರಾಹ್ಮಣನು ಮುನಿದು ನಿಂತನೆಂದರೆ ಮಹಾರುದ್ರ ಸದೃಶನಾಗುತ್ತಾನೆ; ಪ್ರಳಯ ಭೈರವನಾಗುತ್ತಾನೆ; 'ಶಾಪಾದಪಿ ಶರಾದಪಿ' ಎಂಬ ವೀರವಾಣಿಯನ್ನು ಬ್ರಾಹ್ಮಣವಂಶಜರು ಮರೆಯಬಾರದು. ದ್ರೋಣಾಚಾರ್ಯರು ಬ್ರಾಹ್ಮಣರಲ್ಲವೆ ! ಕುರುಕ್ಷೇತ್ರಯುದ್ಧದಲ್ಲಿ ಧನುರ್ಧಾರಿಯಾಗಿ ನಿಂತು ಜಾತಿ ಕ್ಷತ್ರಿಯ ಬಲವನ್ನೂ ನಡುಗಿಸಲಿಲ್ಲವೇ! ಕೃಪಾಚಾರ್ಯರೇನು ಸಾಮಾನ್ಯರೆ ! ಚಿರಂಜೀವಿ ಅಶ್ವತ್ಥಾಮನಂಥ ಬ್ರಾಹ್ಮಣ ಪುತ್ರರು ಕರ್ಣಾಟಕದಲ್ಲಿ ಜನಿಸಬೇಕು" ಎಂದು ಅವರು ತಮ್ಮ ಶಿಷ್ಯಮಂಡಲಿಗೆ ತಿಳಿಸುತ್ತಿದ್ದರು. ಈ ಮಾತುಗಳನ್ನು ಹೇಳುವಾಗ ಅವರ ಮುಖಮಂಡಲ ಕೆಂಪೇರುತ್ತಿತ್ತು. ಸಂಧ್ಯಾಸೂರ್ಯನಂತೆ ಸಿಗಿಸಿಗಿಸುತ್ತಿತ್ತು. ಶಿಷ್ಯರು ಅವರನ್ನು ನೋಡಿ ತಾವು ಒಬ್ಬೊಬ್ಬರೂ ಶಸ್ತ್ರಧಾರಿಗಳಾಗಿ ನಿಂತು ಶತೃಹೃದಯ ವಿದಾರಕರಾಗಬೇಕೆಂದು ಹಲ್ಲುಮಸೆಯುತ್ತಿದ್ದರು. ಹೀಗೆಯೇ ನಾನಾವಿಚಾರಗಳನ್ನು ಮಾತನಾಡಿಕೊಳ್ಳುತ್ತ ದರ್ಭೆ, ಸಮಿತ್ತು, ಮುತ್ತುಗದೆಲೆ, ಹಣ್ಣುಹಂಪಲು,

ಗಡ್ಡೆಗೆಣಸುಗಳನ್ನು ಶೇಖರಿಸಿಕೊಂಡು ಕತ್ತಲಾಗುವ ವೇಳೆಗೆ ಆಶ್ರಮಕ್ಕೆ ಹಿಂದಿರುಗುತ್ತಿದ್ದರು.

ಕಲವು ಕಾಲ ಕಳೆಯಿತು. ವಿದ್ಯಾರಣ್ಯರ ಸಂಕಲ್ಪ ನೆರವೇರುವ ಶುಭ ಸೂಚನೆಯೇ ಕಾಣಬರಲಿಲ್ಲ. ಇದರಿಂದ ಅವರು ನಿರಾಶರಾಗಲಿಲ್ಲ. ಹಿಡಿದ ಕಾರ್ಯವನ್ನು ಯಾವರೀತಿಯಿಂದಲಾದರೂ ಸಾಧಿಸಬೇಕೆಂದು ಅವರು ನಿರ್ಧರಿಸಿದ್ದರು.

ವರ್ಷಾಕಾಲ ಬಂತು. ಒಂದು ದಿನ ರಾತ್ರಿ ಮಳೆಯ ಮೋಡಗಳು ಆನೆ ಹಿಂಡಿನಂತೆ ಆಕಾಶದಲ್ಲಿ ಕವಿದು ನಿಂತವು. ಆಗಾಗ ಕೋಲ್ಮಿಂಚು ಹೊಳೆಯುತ್ತಿತ್ತು. ಗುಡುಗಿನ ಶಬ್ದದಿಂದ ಆ ಗಿರಿ ಕಂದರಗಳೆಲ್ಲ ನಳೆಯುತ್ತಿದ್ದವು. ಸ್ವಲ್ಪಹೊತ್ತಿನೊಳಗಾಗಿಯೇ ಮಳೆಯೂ ಬಂತು. ವಿದ್ಯಾರಣ್ಯರು ತಮ್ಮ ಕುಟೀರದಲ್ಲಿ ವ್ಯಾಘ್ರಾಜಿನದಮೇಲೆ ಕುಳಿತುಕೊಂಡು ಹಣತೆಯ ಬೆಳಕಿನಲ್ಲಿ ಗೀತಾ ಭಾಷ್ಯವನ್ನು ಅವಲೋಕಿಸುತ್ತಿದ್ದರು. ವೈತಿಹೋತ್ರಿಯು ಪಕ್ಕದಲ್ಲಿ ಕುಳಿತುಕೊಂಡು ಆಸಕ್ತಿಯಿಂದ ಅವರು ಹೇಳುತ್ತಿದ್ದ ವ್ಯಾಖ್ಯಾನವನ್ನು ಕೇಳುತ್ತಿದ್ದಳು. ಆಗಾಗ ತನಗೆ ತೋರಿದ ಸಂದೇಹಗಳನ್ನು ತಿಳಿಸಿ ಅವರನ್ನು ಪ್ರಶ್ನೆ ಮಾಡುತ್ತಿದ್ದಳು. ಆ ದಿನ ವಿದ್ಯಾರಣ್ಯರು ಗೀತೆಯಲ್ಲಿ ಸಾಂಖ್ಯಯೋಗವನ್ನು ಕುರಿತು ವ್ಯಾಖ್ಯಾನ ಮಾಡುತ್ತಿದ್ದರು.

ಜಾತಸ್ಯ ಹಿ ಧ್ರುವೋಮೃತ್ಯು ರ್ಧ್ರುವಂ ಜನ್ಮ ಮೃತಸ್ಯ ಚ ।
ತಸ್ಮಾದಪರಿಹಾರ್ಯೇಽರ್ಥೇ ನತ್ವಂ ಶೋಚಿತಮರ್ಹಸಿ ॥

ಎಂಬ ಶ್ಲೋಕವನ್ನು ಓದಿ ವಿದ್ಯಾರಣ್ಯರು ತಮ್ಮ ಸಹಜ ವಾಗ್ವೈಖರಿಯಿಂದ ತಾತ್ಪರ್ಯವನ್ನು ಹೇಳಿದರು. ಅದನ್ನು ಹೇಳುತ್ತಿದ್ದಂತೆಯೇ ಹೆಂಡತಿಯ ಕಡೆಗೆ ನೋಡಿದರು.

ವೈತಿಹೋತ್ರಿ :—ಸ್ವಾಮಿ, ಹುಟ್ಟಿದವನಿಗೆ ಸಾವು ತಪ್ಪುವುದಿಲ್ಲ. ಸತ್ತವನು ಹುಟ್ಟದೆ ಇರುವುದಿಲ್ಲ – ಎಂದಮೇಲೆ ನಾವು ಈ ದೇಹಾಭಿಮಾನದಿಂದ ಮುಕ್ತರಾಗಿ ಲೋಕಹಿತಕ್ಕಾಗಿ ಸತ್ತರೂ ಸಾರ್ಥಕವಲ್ಲವೆ !

ವಿದ್ಯಾರಣ್ಯ :—ದೇವಿ ! ನಿನ್ನ ಪ್ರಶ್ನೆಯ ಅಭಿಪ್ರಾಯ ತಿಳಿಯಿತು. ಮನುಷ್ಯನು ಎಷ್ಟು ದಿನ ಬದುಕಿದರೂ ಒಂದು ದಿನ ಸಾಯಬೇಕು. ಈ

ದೇಹ ಶಾಶ್ವತವಲ್ಲ; ಆತ್ಮನು ಮಾತ್ರ ಶಾಶ್ವತ. ಮನುಷ್ಯನು ಹಳೆಯ ಬಟ್ಟೆಗಳನ್ನು ಬಿಟ್ಟು ಹೊಸ ಬಟ್ಟೆಗಳನ್ನು ಧರಿಸುವಂತೆಯೇ ಜೀವಾತ್ಮನು ಜೀರ್ಣವಾದ ಶರೀರಗಳನ್ನು ಬಿಟ್ಟು, ಇತರ ಹೊಸ ಶರೀರಗಳನ್ನು ಧರಿಸುತ್ತಾನೆ. ಆತ್ಮ ಅವಿನಾಶಿಯಾದುದು. ಯಾವ ಶಸ್ತ್ರಗಳೂ ಅದನ್ನು ಕತ್ತರಿಸಲಾರವು; ದಾವಾಗ್ನಿಯಾದರೂ ಇದನ್ನು ದಹಿಸಲಾರದು. ಯಾವುದೊಂದು ಜಲಪ್ರಳಯವೂ ಅದನ್ನು ತೋಯಿಸಲಾರದು. ಯಾವ ಬಿರುಗಾಳಿಯೂ, ಅದನ್ನು ಒಣಗಿಸಲಾರದು – ಎಂದಮೇಲೆ ನಾವು ಈ ದೇಹ ಗಟ್ಟಿಯಾಗಿರುವಾಗಲೇ ಇದನ್ನು ಲೋಕಹಿತಕ್ಕಾಗಿ ಅರ್ಪಿಸಬೇಕು. ಜೀವಕೋಟಿಯ ಅಭ್ಯುದಯಕ್ಕಾಗಿ ಇದನ್ನು ಸಂತೋಷದಿಂದ ಸವೆಸಬೇಕು. ಈ ನನ್ನ ಮಾತಿನ ಅರ್ಥವನ್ನು ನೀನು ಗ್ರಹಿಸಿದೆಯಾ!

ನೈತಿಹೋತ್ರಿ :—ಪ್ರಾಣೇಶ್ವರಾ, ನಿಮ್ಮ ಇಂಗಿತವನ್ನು ಅರಿತೆನು. ನನ್ನಿಂದ ಲೋಕಹಿತಾರ್ಥಕ್ಕಾಗಿ ಯಾವ ಸಹಾಯವಾದೀತು!

ವಿದ್ಯಾರಣ್ಯ :—ಸಾಧ್ವೀ, ನನ್ನ ಮನಸ್ಸಿನಲ್ಲಿರುವ ಒಂದು ಸಂಗತಿಯನ್ನು ನಿನಗೆ ತಿಳಿಸಬೇಕೆಂದು ಬಹಳ ದಿನಗಳಿಂದಲೂ ಯೋಚಿಸುತ್ತಿದ್ದೆನು. ನೀನಾದರೋ ಮಂತ್ರಿಯ ಮಗಳು. ನಾನು ಹುಟ್ಟು ಬಡವನು. ನನ್ನ ಕೈ ಹಿಡಿದ ನಿನಗೆ ಯಾವ ಸುಖ ತಾನೆ ಉಂಟು.

ಪತ್ನಿ :—ಸ್ವಾಮಿ, ನನ್ನ ಜೀವನ ಸೌಭಾಗ್ಯವೇ ನೀವಾಗಿರುವಾಗ ನನಗೆ ಬೇರೆ ಯಾವ ಭಾಗ್ಯ ತಾನೇ ಬೇಕಾದೀತು! ಪತಿಸೇವೆಯೇ ಸತಿಗೆ ಒಂದು ಭಾಗ್ಯವಲ್ಲವೆ! ನಿಮ್ಮ ಅಂತರಂಗವನ್ನು ನನಗೆ ತಿಳಿಸಲು ಇನ[illegible]ದು ಯೋಚನೆಯು ?

ವಿದ್ಯಾರಣ್ಯ:—ಮಂಗಳಾಂಗಿ, ನೀನು ಪರಮ ಪತಿವ್ರತೆ. [illegible] ಹಿಡಿದ ನನ್ನ ಮನೋರಥವು ಈಡೇರುವುದರಲ್ಲಿ ಸಂಶಯವಿಲ್ಲ. ಆದ ನೀನು ನನಗಾಗಿ ನಮ್ಮ ನಾಡಿಗಾಗಿ ನಮ್ಮ ಧರ್ಮ ರಕ್ಷಣೆಗಾಗಿ ನಿನ್ನ ಸುಖವನ್ನು ತ್ಯಜಿಸಬಲ್ಲೆಯಾ!

ಪತ್ನಿ:—ಪತಿದೇವ, ಈ ತೃಣಪ್ರಾಣಿಯಾದ ನನ್ನಿಂದ ಯತ್ಕಿಂಚಿತ್ ಸೇವೆಯಾಗುವದಾದರೂ ನಾನು ಸಂತೋಷದಿಂದ ನನ್ನ ಪ್ರಾಣವನ್ನೇ ನಿಮಗಾಗಿ ನಮ್ಮ ನಾಡಿಗಾಗಿ ಸನಾತನಧರ್ಮರಕ್ಷಣೆಗಾಗಿ ಮೀಸಲಿರಿಸುವೆನು.

ವಿದ್ಯಾರಣ್ಯ :—ದೇವಿ, ನಿನ್ನ ನೆರವೊಂದಿದ್ದರೆ ಸಾಕು. ಈ ಬಡ ಬ್ರಾಹ್ಮಣನು ದೇಶ ಕಲ್ಯಾಣವನ್ನು ಸಾಧಿಸಬಲ್ಲನು. ಸನಾತನಧರ್ಮವನ್ನು ಉಳಿಸಬಲ್ಲನು.

ಪತ್ನಿ:—ಪೂಜ್ಯರೇ, ನಿಮ್ಮ ಮನೋರಥವನ್ನು ನನಗೆ ಬಿಡಿಸಿ ಹೇಳ ಬಾರದೆ ?

ವಿದ್ಯಾರಣ್ಯ:—ನೀನು ರಾಜನೀತಿ ಚತುರನಾದ ಮಂತ್ರಿಯ ಮಗಳು. ನಿನಗೆ ತಿಳಿಯದ ವಿಚಾರವೇನಿದೆ? ಈಗ ಕನ್ನಡನಾಡಿಗೆ ಒದಗಿರುವ ದುರ ವಸ್ಥೆಯೆಲ್ಲಾ ನಿನಗೆ ಚೆನ್ನಾಗಿ ಗೊತ್ತಾಗಿದೆ. ನಾನು ನನ್ನ ಈ ಒಂದು ಸಂಸಾರಕ್ಕಾಗಿ ಹಂಬಲಿಸಬೇಕಾದುದಿಲ್ಲ. ಲಕ್ಷಾಂತರ ಹಿಂದೂ ಸಂಸಾರ ಗಳು ಈಗ ಹೀನದೆಸೆಯಲ್ಲಿವೆ. ಸನಾತನಧರ್ಮ ಈಗ ಕಾಡುಪಾಲಾಗಿದೆ. ಕನ್ನಡಿಗರಲ್ಲಿ ಒಗ್ಗಟ್ಟು ಅಳಿಸಿಹೋಗಿದೆ. ವಿಧರ್ಮಿಗಳ ಹಿಂಸೆಯಂತೂ ಸಹಿಸಲಸಾಧ್ಯವಾಗಿರುತ್ತದೆ. ಈಗ ನಾಡನ್ನು ಒಂದುಗೂಡಿಸಿ ಕನ್ನಡಿಗರ ಹೃದಯದಲ್ಲಿ ದೇಶಪ್ರೇಮವನ್ನು ತುಂಬಿ, ಅಖಂಡ ಕರ್ಣಾಟಕ ಸಾಮ್ರಾಜ್ಯ ವನ್ನು ಸ್ಥಾಪಿಸಿ, ವಿಧರ್ಮಿಗಳನ್ನು ಮೆಟ್ಟಿ ತುಳಿದು ಸನಾತನಧರ್ಮವನ್ನು ಉಜ್ಜೀವನಗೊಳಿಸಬೇಕಾದರೆ ನಾನು ನನ್ನ ಆತ್ಮಪಾರಿಶುದ್ಧತೆಗಾಗಿ ಕಠಿಣ ತಪಸ್ಸನ್ನಾಚರಿಸಬೇಕೆಂದು ಸಂಕಲ್ಪಿಸಿರುವೆನು. ಇದನ್ನು ನೀನು ಒಪ್ಪು ವಿಯಾ !

ಪತ್ನಿ .—ಹೃದಯೇಶ್ವರಾ, ಈ ಮಹಾ ಕಾರ್ಯಸಾಧನೆಯಲ್ಲಿ ಅಬಲೆ ಯಾದ ನಾನು ಸಲ್ಲಿಸಬೇಕಾದ ಸೇವೆಯೇನು ?

ವಿದ್ಯಾರಣ್ಯ :—ಹೃದಯೇಶ್ವರಿ, ಹಿಂದೂ ಸ್ತ್ರೀಯರು ಅಬಲೆಯರಲ್ಲ. ಅವರು ವೀರಮಾತೆಯರು; ವೀರಪತ್ನಿಯರು. ಪಾತಿವ್ರತ್ಯಧರ್ಮಬಲವೇ ಹಿಂದೂ ಸ್ತ್ರೀಯರ ಸರ್ವಸಂಪತ್ತು. ಸ್ತ್ರೀಯರು ಮಾನಧನರು. ಪ್ರಾಣ ಕ್ಕಿಂತಲೂ ಮಾನವೇ ಅವರಿಗೆ ಮಿಗಿಲಾದುದು. ನೀನು ಈ ಮಹಾಕಾರ್ಯ ದಲ್ಲಿ ಸಲ್ಲಿಸಬೇಕಾದ ಸೇವೆಯೂ ಮಹತ್ತರವಾದುದು. ಈ ಸಂಸಾರದ ಎಲ್ಲ ಭಾರವನ್ನೂ ನೀನು ವಹಿಸಿಕೊಂಡು ವೀರಯೋಗಿನಿಯಂತೆ ನೀನು ನನಗೆ ನೆರ ವಾಗಿ ನಿಲ್ಲಬೇಕು. ನಾನು ಪಂಪಾಕ್ಷೇತ್ರಕ್ಕೆ ಹೋಗಿ ಶ್ರೀ ಭುವನೇಶ್ವರೀ ದೇವಿಯನ್ನು ಕುರಿತು ತಪಸ್ಸು ಮಾಡುತ್ತೇನೆ. ಆ ಮಹಾದೇವಿಯ ಅನು

ಗ್ರಹದಿಂದ ನಾನು ಕೃತಕಾರ್ಯನಾಗಬಲ್ಲೆನೆಂಬ ನಂಬುಗೆ ನನ್ನಲ್ಲಿ ಅಂಕುರಿಸಿದೆ. ನೀನು ಸಂತೋಷದಿಂದ ಅನುಮೋದಿಸಬೇಕು. ಇದೇ ನನ್ನ ಮನಸ್ಸಿನ ಆಕಾಂಕ್ಷೆ.

ಪತ್ನಿ:—ಪ್ರಾಣೇಶ್ವರಾ, ನೀವು ಸಾಧಿಸಬೇಕಾಗಿರುವ ದೇಶೋದ್ಧಾರ ಕಾರ್ಯದಲ್ಲಿ ಸೇವೆ ಸಲ್ಲಿಸುವ ಭಾಗ್ಯ ಲಭಿಸಿದರೆ ಸಾಕು. ನಾನೇ ಧನ್ಯಳು. ನಿಮ್ಮ ಇಷ್ಟದಂತೆಯೇ ಆಗಬಹುದು. ನಾನು ನಿಮ್ಮ ಸಂಕಲ್ಪಕ್ಕೆ ಅಡ್ಡಿ ಬರುವದಿಲ್ಲ. ತಾವು ಅಪ್ಪಣೆ ಕೊಡಿಸಿದ ಗೀತಾ ಶ್ಲೋಕದ ಸಾರಾಂಶ ಈಗ ಚೆನ್ನಾಗಿ ತಿಳಿಯಿತು. ಈ ನಶ್ವರವಾದ ದೇಹವನ್ನು ಪರಾರ್ಥಕ್ಕಾಗಿ ತೇಯಬೇಕು. ಈ ದೇಹ ಯಾವಾಗ ಬಿದ್ದುಹೋಗುತ್ತದೆಯೋ ಏನೋ! ಆದ್ದರಿಂದ ಶಕ್ತಿಯಿರುವಾಗಲೇ ಪರೋಪಕಾರವನ್ನು ಮಾಡಬೇಕು. ತಾವು ಸಾವಧಾನ ಚಿತ್ತದಿಂದ ತಮ್ಮ ತಪಸ್ಸನ್ನು ಆಚರಿಸಿ ಆತ್ಮಬಲದಿಂದ ಮುಂದಿನ ಮಹಾಕಾರ್ಯದಲ್ಲಿ ವೀರಸಂನ್ಯಾಸಿಯಾಗಿ ನಿಲ್ಲಬೇಕು. ಶ್ರೀ ಭುವನೇಶ್ವರೀದೇವಿಯು ತಮ್ಮನ್ನು ಅನುಗ್ರಹಿಸಲಿ.

ವಿದ್ಯಾರಣ್ಯ:—ದೇವಿ, ನಿನ್ನಂಥ ಅನುಕೂಲಸತಿಯಿರುವಲ್ಲಿ ನನಗೇನು ಭಯ! ದೇವರು ನನಗೆ ಯಾವ ಭಾಗ್ಯವನ್ನು ಕೊಡದೇ ಇದ್ದರೂ ನಿನ್ನಂಥ ಸಾಧ್ವಿಯನ್ನು ನನ್ನ ಜೀವನ ರಥಕ್ಕೆ ನನ್ನೊಂದಿಗೆ ಹೂಡಿದ್ದಾನೆ. ಇದಕ್ಕಿಂತಲೂ ಪರಮಭಾಗ್ಯವಿನ್ನೇನು! ಆದರೆ ಒಂದು ಮಾತನ್ನು ಹೇಳಿಯೇ ತೀರಬೇಕು. ಪ್ರಾಜ್ಞೆಯಾದ ನಿನಗೆ ಅದೇನೂ ಹೊಸದಲ್ಲ. ನೀನು ಸಂಸಾರದಲ್ಲಿ ನಿನ್ನ ಅತ್ತೆಯವರನ್ನು ಭಕ್ತಿಯಿಂದ ಸೇವಿಸುತ್ತಿರು. ನನ್ನ ಅಗಲುವಿಕೆಯಿಂದ ಅವರ ಮನಸ್ಸಿಗೆ ವ್ಯಥೆಯಾಗದಂತೆ ನೋಡಿಕೊಂಡಿರು. ನಿನ್ನ ಮೈದುನರನ್ನು ಗೌರವದಿಂದಲೂ ಮಾತೃಪ್ರೇಮದಿಂದಲೂ ಕಾಣುತ್ತಿರಬೇಕು. ಈ ಶಿಷ್ಯವೃಂದವೇ ನಿನ್ನ ಸಂತಾನ. ನೀನು ಸಂತೋಷದಿಂದ ನನ್ನನ್ನು ಬೀಳ್ಕೊಡು. ನಾಳೆಯೇ ನಾನು ಪಂಪಾಕ್ಷೇತ್ರಕ್ಕೆ ಹೊರಡುವೆನು.

ಹೀಗೆ ಆ ಬ್ರಾಹ್ಮಣ ದಂಪತಿಗಳು ಮಾತನಾಡುತ್ತ ಕುಳಿತಿರುವಷ್ಟರಲ್ಲಿಯೇ ಬೆಳಗಿನಜಾವವಾಯಿತು. ವಿದ್ಯಾರಣ್ಯರು ಸ್ನಾನಾಹ್ನಿಕಗಳನ್ನು ನೆರವೇರಿಸಲು ತುಂಗಭದ್ರಾನದಿಗೆ ಹೊರಟರು. ಆ ಸಾಧ್ವಿಯು ಎಂದಿನಂತೆ ಮನೆಗೆಲಸಗಳಲ್ಲಿ ತೊಡಗಿದಳು. ಅಷ್ಟುಹೊತ್ತಿಗೆ ಮಳೆಯೂ ನಿಂತಿತ್ತು.

ಎಲ್ಲಿ ನೋಡಿದರೂ ನೀರು ನಿಂತಿತ್ತು. ವನರಾಜಿಯೆಲ್ಲ ಪ್ರಾತಃಕಾಲದಲ್ಲಿ ಮಿಂದು ಸೂರ್ಯದೇವನನ್ನು ಭಕ್ತಿಯಿಂದ ನಮಿಸುವಂತೆ ಕಾಣುತ್ತಿತ್ತು.

ಆದಿನ ಮಧ್ಯಾಹ್ನ ಶ್ರೀ ವಿದ್ಯಾರಣ್ಯರು ಪಂಪಾಕ್ಷೇತ್ರಕ್ಕೆ ಹೊರಡಲು ಸಿದ್ಧರಾದರು. ಜೊತೆಯಲ್ಲಿ ಇಬ್ಬರು ಶಿಷ್ಯರೂ ಹೊರಟರು. ವೈತಿಹೋತ್ರಿಯು ತನ್ನ ಪತಿಯ ಪಾದಗಳನ್ನು ಮುಟ್ಟಿ ನಮಸ್ಕರಿಸಿ ಸಂತೋಷದಿಂದ ಬೀಳ್ಕೊಟ್ಟಳು. ಕುಟೀರದ ಬಾಗಿಲಿನಲ್ಲಿಯೇ ನಿಂತುಕೊಂಡು ವಿದ್ಯಾರಣ್ಯರು ಕಾಡಿನ ಮಧ್ಯದಲ್ಲಿ ಮರೆಯಾಗುವವರೆಗೂ ನೋಡುತ್ತಿದ್ದಳು. ಅವರು ತಮ್ಮ ಶಿಷ್ಯರೊಂದಿಗೆ ನಡೆಯುತ್ತ ಪಂಪಾಕ್ಷೇತ್ರಾಭಿಮುಖವಾಗಿ ಪ್ರಯಾಣ ಮಾಡಿದರು. ಅವರ ಕುಟೀರದಿಂದ ಪಂಪಾಕ್ಷೇತ್ರಕ್ಕೆ ಒಂದು ಹರದಾರಿ ದೂರವಿತ್ತು. ದಾರಿಯಲ್ಲಿ ಅವರು ಶಿಷ್ಯರೊಂದಿಗೆ ಮಾತನಾಡುತ್ತ - ಈ ಸನಾತನಧರ್ಮದ ಏಳಿಗೆಗಾಗಿ ಆದಿಶಂಕರಾಚಾರ್ಯರು ವಹಿಸಿದ ಶ್ರಮವನ್ನೂ ಅವರ ವಿದ್ಯಾಪಾಂಡಿತ್ಯವನ್ನೂ ತಿಳಿಸುತ್ತಿದ್ದರು. ಶಿಷ್ಯರೂ ಕುತೂಹಲಾವಿಷ್ಟರಾಗಿ ತಮಗೆ ಸೂಕ್ತ ತೋರಿದ ಪ್ರಶ್ನೆಗಳನ್ನು ಕೇಳುತ್ತಿದ್ದರು.

ಸದಾಶಿವ :—ಗುರುದೇವ ! ತಾವು ಕಟ್ಟಬೇಕೆಂದು ಸಂಕಲ್ಪಿಸಿರುವ ಲೌಕಿಕ ಸಾಮ್ರಾಜ್ಯವನ್ನು ತಕ್ಕ ಕ್ಷತ್ರಿಯ ಶಿಷ್ಯರ ಸಹಾಯದಿಂದ ಕಟ್ಟುವಿರಿ. ಆದರೆ ಸನಾತನಧರ್ಮ ಸಾಮ್ರಾಜ್ಯವನ್ನು ಕಟ್ಟಲು ನಾವು ನಮ್ಮ ಸೇವೆಯನ್ನು ಸಲ್ಲಿಸುವೆವು.

ಚಂದ್ರಶೇಖರ :—ಪೂಜ್ಯರೇ, ಶ್ರೀ ಶಂಕರಾಚಾರ್ಯರು ಯಾವ ಸಾಮ್ರಾಜ್ಯವನ್ನು ಸ್ಥಾಪಿಸಿದರು.

ವಿದ್ಯಾರಣ್ಯರು :—(ನಕ್ಕು) ವತ್ಸಾ! ಶ್ರೀ ಶಂಕರರು ಅವತರಿಸಿದ್ದ ಕಾಲದಲ್ಲಿ ಧರ್ಮ ಜಾಗೃತಿಯನ್ನು ಮಾತ್ರ ಮಾಡಬೇಕಾಗಿತ್ತು. ಆಗ ಪ್ರಬಲವಾಗಿದ್ದ ಪಾಷಂಡ ಮತಗಳನ್ನು ಖಂಡಿಸಿ, ವೇದ ಧರ್ಮವನ್ನು ಉದ್ಧಾರ ಮಾಡಬೇಕಾಗಿತ್ತು. ಅವರು ಅಖಂಡವಾದ ತಪಸ್ಸನ್ನೆಲ್ಲಾ ಧರ್ಮೋದ್ಧಾರಕಾರ್ಯಕ್ಕಾಗಿಯೇ ವಿನಿಯೋಗಿಸಿದರು. ಈಗಲಾದರೋ, ಧರ್ಮದ ಅವನತಿಯೇ ಅಲ್ಲದೆ ರಾಜ್ಯದ ಅವನತಿಯೂ ಆಗಿದೆ. ಆದ್ದರಿಂದ ಪ್ರಬಲವಾದ ರಾಷ್ಟ್ರ ಸ್ಥಾಪನೆಯಾಗದಹೊರತು ಧರ್ಮದ ರಕ್ಷಣೆಯಾಗಲಾರದು.

ಸದಾಶಿವ :—ಪೂಜ್ಯರೇ ! ಶ್ರೀ ಶಂಕರರು ಕೈಗೊಂಡ ಧರ್ಮ ದಿಗ್ವಿಜಯವನ್ನು ಕೇಳಿ ತಿಳಿಯಬೇಕೆಂದು ನನಗೆ ಬಹಳ ದಿನದಿಂದಲೂ ಕುತೂಹಲವಿತ್ತು. ಅದನ್ನು ಕೃಪೆಯಿಟ್ಟು ಅಪ್ಪಣೆ ಕೊಡಿಸುವಿರಾ !

ವಿದ್ಯಾರಣ್ಯರು : ಕುಮಾರರಂರಾ, ಬಹಳ ಸಂತೋಷ. ನಾನು ಇದುವರೆಗೂ ನಿಮಗೆ ಆಚಾರ್ಯರ ಜೀವನ ಚರಿತ್ರೆಯನ್ನೇ ತಿಳಿಸದಿದ್ದುದು ಒಂದು ಕೊರತೆ. ಮುಖ್ಯವಾಗಿ ಒಬ್ಬ ಮಹಾಪುರುಷನ ಮತ್ತು ಒಂದು ರಾಷ್ಟ್ರದ ಇತಿಹಾಸವನ್ನು ಕೂಲಂಕಷವಾಗಿ ತಿಳಿಯುವುದರಿಂದ ನಮ್ಮಲ್ಲಿ ಅಭಿಮಾನ ಮೂಡುತ್ತದೆ. ಆ ಅಭಿಮಾನ ಉಳಿ ಪೂತು ಫಲಿಸುತ್ತದೆ. ಅದಲ್ಲದೆ ವೈದಿಕ ಧರ್ಮ ಗ್ಲಾನಿಯುಂಟಾಗುತ್ತಿದ್ದ ಕಾಲದಲ್ಲಿ ಶ್ರೀ ಶಂಕರರು ಎಂಥ ಧರ್ಮ ದಿಗ್ವಿಜಯ ಮಾಡಿದರೆಂಬುದನ್ನು ಎಲ್ಲ ಧರ್ಮಾಭಿಮಾನಿಗಳೂ ಅರಿಯಬೇಕು.

ಸದಾಶಿವ :—ಗುರುದೇವ, ಅವರು ಮಾಡಿದ ವಿಜಯ ಯಾತ್ರೆಯನ್ನು ಸ್ಥೂಲವಾಗಿಯಾದರೂ ನಿರೂಪಿಸಬೇಕೆಂದು ಬೇಡುತ್ತೇನೆ.

ವಿದ್ಯಾರಣ್ಯರು :—ಆಗಬಹುದು ; ಕೇಳಿ. "ಶ್ರೀ ಶಂಕರರು ವಾದ ವಿವಾದಗಳಲ್ಲಿ ಅದ್ಭುತಶಕ್ತಿಯನ್ನು ಪಡೆದು ತಮ್ಮ ಮತವನ್ನು ಮಂಡಿಸುವುದರಲ್ಲಿ ಮತ್ತು ಅದನ್ನೇ ಸಿದ್ಧಮಾಡುವುದರಲ್ಲಿ ನಿಪುಣರಾದರು. ಗುರುಗಳ ಅಪ್ಪಣೆಯಿಂದ ದಿಗ್ವಿಜಯಕ್ಕಾಗಿ ಹೊರಟು ಪ್ರಸಿದ್ಧ ವಿದ್ವಾಂಸರಿದ್ದ ಸ್ಥಳಗಳಿಗೆ ಹೋಗಿ ಅವರನ್ನು ವಾದದಲ್ಲಿ ಸೋಲಿಸಿ ರಾಜಾಸ್ಥಾನಗಳಲ್ಲಿ ವಿವಾದಮಾಡಿ, ರಾಜಾಶ್ರಯದಿಂದ ಅನ್ಯಮತಗಳನ್ನು ಭಂಗಿಸಿ ಅದ್ವೈತಮತವನ್ನು ಸ್ಥಾಪಿಸ ಹತ್ತಿದರು. ಕಾಶಿಯಲ್ಲಿ ವಿದ್ವಾಂಸರನ್ನು ತಮ್ಮ ಮತಕ್ಕೆ ಒಲಿಸಿಕೊಂಡು ಅಲ್ಲಿಯೇ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದರು. ಆ ಕಾಲದಲ್ಲಿ ಉತ್ತರಾ ಪಥದಲ್ಲಿ ಅತಿ ವಿದ್ವಾಂಸರೂ ಪ್ರತಿಭಾಶಾಲಿಗಳೂ ಎಂದು ಖ್ಯಾತಿಯನ್ನು ಹೊಂದಿದ್ದ ಮೀಮಾಂಸಾ ಧರ್ಮದ ಪ್ರಚಾರಕರಾದ ಕುಮಾರಿಲ ಭಟ್ಟರನ್ನು ಪ್ರಯಾಗದಲ್ಲಿ ಕಂಡು ಅವರಿಗೆ ತಮ್ಮ ಭಾಷ್ಯವನ್ನು ತೋರಿಸಿದರು. ಭಟ್ಟರು ತಾವು ದೀಕ್ಷಾಬದ್ಧರಾಗಿರುವುದರಿಂದ ಸ್ವಲ್ಪ ಕಾಲದಲ್ಲಿಯೇ ಇಹ ಲೋಕದ ಯಾತ್ರೆಯನ್ನು ಮುಗಿಸತಕ್ಕವರಿರುವುದರಿಂದ ಮಂಡನಮಿಶ್ರರ ಕಡೆಗೆ ಹೋಗಬೇಕೆಂದೂ ಅವರನ್ನು ತಮ್ಮ ಕಡೆಗೆ ಒಲಿಸಿಕೊಳ್ಳಬೇಕೆಂದೂ ಸೂಚಿಸಿದರು. ಆ ಕಾಲದಲ್ಲಿ ಮಂಡನಮಿಶ್ರರು ಮೀಮಾಂಸಮತದ ಆಧಾರ

ಸ್ತಂಭರೂ, ಒಳ್ಳೇ ವರ್ಚಸ್ವಿಗಳೂ, ವಿದ್ವಾಂಸರೂ ಇದ್ದುದರಿಂದ ಅವರನ್ನು ಅದ್ವೈತಮತಕ್ಕೆ ಸೇರಿಸಿಕೊಂಡರೆ ಒಂದು ಅಲಭ್ಯಲಾಭವಾಗುವಂತಿತ್ತು. ಆದುದರಿಂದ ಶ್ರೀ ಶಂಕರಾಚಾರ್ಯರು ಮಾಹಿಷ್ಮತೀ ನಗರಕ್ಕೆ ಹೋಗಿ ಮಂಡನಮಿಶ್ರರನ್ನು ವಾದಕ್ಕೆ ಕರೆದರು."

ಚಂದ್ರಶೇಖರ :—ಸ್ವಾಮಿ, ಮಾಹಿಷ್ಮತೀನಗರವೆಲ್ಲಿದೆ ?

ವಿದ್ಯಾರಣ್ಯರು :—ಕಾಮರೂಪದೇಶದಲ್ಲಿದೆ.

ಸದಾಶಿವ :—ಮುಂದೇನಾಯಿತು ?

ವಿದ್ಯಾರಣ್ಯರು :—ಶ್ರೀ ಶಂಕರಾಚಾರ್ಯರಿಗೂ ಮಂಡನಮಿಶ್ರರಿಗೂ ಪ್ರಚಂಡ ವಾದವಿವಾದ ನಡೆಯಿತು. ಮಂಡನಮಿಶ್ರರ ಹೆಂಡತಿಯಾದ ಭಾರತೀದೇವಿಯೇ ಈ ಇಬ್ಬರ ವಾದವಿವಾದಗಳನ್ನು ಕೇಳಿ ತೀರ್ಮಾನ ಹೇಳಬೇಕೆಂದು ಗೊತ್ತಾಗಿತ್ತು. ಕಡೆಗೆ ಮಂಡನಮಿಶ್ರರು ವಾದದಲ್ಲಿ ಸೋತು ಹೋದರು. ಭಾರತೀದೇವಿ ಶಂಕರಾಚಾರ್ಯರೊಂದಿಗೆ ವಾದಕ್ಕೆ ಸಿದ್ಧಳಾದಳು. ಆಕೆಯನ್ನು ವಾದದಲ್ಲಿ ಜಯಿಸಬೇಕಾದರೆ ಶಂಕರರು ಅಮರುಕ ರಾಜನ ಮೃತದೇಹದಲ್ಲಿ ಪರಕಾಯ ಪ್ರವೇಶಮಾಡಿ ಕಾಮಶಾಸ್ತ್ರ ರಹಸ್ಯವನ್ನು ಅರಿಯಬೇಕಾಯಿತಂತೆ.

ಚಂದ್ರಶೇಖರ :—ವಾದದಲ್ಲಿ ಕೊನೆಗೆ ಯಾರು ಗೆದ್ದರು ?

ವಿದ್ಯಾರಣ್ಯ :—ಶ್ರೀ ಶಂಕರಾಚಾರ್ಯರೇ ಜಯಿಸಿದರು. ಮಂಡನ ಮಿಶ್ರರು ಗೃಹಸ್ಥಾಶ್ರಮವನ್ನು ಬಿಟ್ಟು ಸಂನ್ಯಾಸಿಯಾಗಿ ಆಚಾರ್ಯರ ಶಿಷ್ಯರಾದರು. ಇವರೇ ಸುರೇಶ್ವರಾಚಾರ್ಯರು. ಶಂಕರಾಚಾರ್ಯರ ತರುವಾಯ ಶೃಂಗೇರಿಯ ಜಗದ್ಗುರು ಪೀಠವನ್ನು ಅಲಂಕರಿಸಿದರು.

ಸದಾಶಿವ :—ಶ್ರೀ ಶಂಕರರು ಯಾವಾಗ ಬದುಕಿದ್ದರು ? ಅವರ ತಾಯಿ ತಂದೆಗಳಾರು ?

ವಿದ್ಯಾರಣ್ಯರು :—ಅವರು ಎಂಟನೆಯ ಶತಮಾನದ ಸುಮಾರಿನಲ್ಲಿ ಲ್ಲಿದ್ದರು. ಅವರು ಕೇರಳದೇಶದಲ್ಲಿರುವ ಕಾಲಟಿಯೆಂಬ ಗ್ರಾಮದ ಶಿವಗುರು ಎಂಬುವರ ಧರ್ಮಪತ್ನಿಯ ಪುಣ್ಯಗರ್ಭದಲ್ಲಿ ಜನಿಸಿದರು. ಅವರು ಬಹಳ ಚಿಕ್ಕ ವಯಸ್ಸಿನವರಾಗಿದ್ದಾಗಲೇ ತಂದೆ ಕಾಲವಾದ್ದರಿಂದ, ತಾಯಿಯು

ಮಗನನ್ನು ಪ್ರೀತಿಯಿಂದ ಸಾಕಿದರು. ಅವರು ಗೋವಿಂದ ಯತಿಗಳೆಂಬು ವರ ಶಿಷ್ಯರಾದರು. ವೇದವೇದಾಂತಗಳಲ್ಲಿ ನಿಷ್ಣಾತರಾದರು.

ಚಂದ್ರಶೇಖರ :—ಆಚಾರ್ಯರು ಕಾಮರೂಪದೇಶದಿಂದ ಮುಂದೆ ಎಲ್ಲಿಗೆ ಹೋದರು ?

ವಿದ್ಯಾರಣ್ಯರು :—ಅವರು ಕಾಮರೂಪದೇಶದಿಂದ ಕಾಶ್ಮೀರ ದೇಶಕ್ಕೆ ಹೋಗಿ ಅಲ್ಲಿ ಸರ್ವಜ್ಞ ಪೀಠವನ್ನು ಅಲಂಕರಿಸಿದರು. ಅವರಿಗೆ ಸುರೇಶ್ವರಾ ಚಾರ್ಯ, ಪದ್ಮಪಾದ, ತೋಟಕ ಮತ್ತು ಹಸ್ತಾಮಲಕ – ಈ ನಾಲ್ವರೂ ಆಪ್ತಶಿಷ್ಯರು. ಶೃಂಗೇರಿ, ದ್ವಾರಕೆ, ಜಗನ್ನಾಥ ಮತ್ತು ಬದರಿ ಈ ಸ್ಥಳ ಗಳಲ್ಲಿ ಅವರು ಮಠಗಳನ್ನು ಸ್ಥಾಪಿಸಿದರು.

ಸದಾಶಿವ :—ಅವರು ಎಷ್ಟು ವರ್ಷ ಬದುಕಿದ್ದರು ? ಅವರು ರಚಿಸಿದ ಗ್ರಂಥಗಳು ಯಾವುವು ?

ವಿದ್ಯಾರಣ್ಯ :—ಆಚಾರ್ಯರು ಕೇವಲ ಮೂವತ್ತೆರಡು ವರುಷ ಬದು ಕಿದ್ದರು. ಅಷ್ಟು ಸ್ವಲ್ಪಕಾಲಾವಕಾಶದಲ್ಲಿಯೇ ಅವರು ಸುಮಾರು ಇಪ್ಪತ್ತು ಗ್ರಂಥಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಪ್ರಸ್ಥಾನತ್ರಯವೆನಿಸಿದ ಉಪನಿ ಷತ್ತು, ಬ್ರಹ್ಮಸೂತ್ರ, ಭಗವದ್ಗೀತೆ, ಇವುಗಳ ಮೇಲಣ ಭಾಷ್ಯ ಅತ್ಯಂತ ಮಹತ್ವವಾದುದು. ಆಚಾರ್ಯರ ಒಂದು ವಿಶೇಷ ಗುಣವನ್ನು ಯಾರೂ ಮರೆಯಬಾರದು. ಸರ್ವಸಂಗಪರಿತ್ಯಾಗ ಮಾಡಿದ ಸಂನ್ಯಾಸಿಯಾಗಿದ್ದರೂ ಧರ್ಮಶಾಸ್ತ್ರದ ನಿಯಮಗಳನ್ನು ಲೆಕ್ಕಿಸದೆಯೂ ತಮ್ಮ ತಾಯಿಯವರಿಗೆ ಅಂತ್ಯಕಾಲದಲ್ಲಿ ಶುಶ್ರೂಷೆಯನ್ನು ಮಾಡಿ ಆಕೆಯು ಕಾಲವಾದಮೇಲೆ ತಾವೇ ಶ್ಮಶಾನ ವಿಧಿಯನ್ನೂ ನೆರವೇರಿಸಿದರು.

ಚಂದ್ರಶೇಖರ :—ಆಚಾರ್ಯರಂಥ ಮಹಾಪುರುಷರು ಆ ಕಾಲದಲ್ಲಿ ಉದಯಿಸದೆ ಇದ್ದರೆ ಸನಾತನಧರ್ಮವೇ ನಶಿಸಿಹೋಗುತ್ತಿತ್ತೆಂದು ಧಾರಾಳ ವಾಗಿ ಹೇಳಬಹುದು.

ವಿದ್ಯಾರಣ್ಯರು :—ಸಂದೇಹವೇ ಇಲ್ಲ. ಅವರು ತಮ್ಮ ಮೇಧಾಶಕ್ತಿಯ ಪ್ರಭಾವದಿಂದ ವೇದವಾಙ್ಮಯವನ್ನು ವೃದ್ಧಿಪಡಿಸಿ ಸನಾತನಧರ್ಮವನ್ನು ಹೆಚ್ಚು ಪ್ರಚಾರಕ್ಕೆ ತಂದರು. ಅಲ್ಲದೆ ಆ ಕಾಲದಲ್ಲಿ ಮಾರಿ, ಮಸಣಿ, ದುರ್ಗಿ, ಭೈರವ, ಮಲ್ಲಾರಿ ಮುಂತಾದ ಕ್ಷುದ್ರ ದೇವತೆಗಳ ಹೆಸರಿನಲ್ಲಿ ನಡೆಯುತ್ತಿದ್ದ

ಕ್ರೂರಕರ್ಮಗಳನ್ನು ನಿಲ್ಲಿಸಿ, ಶಿವ, ವಿಷ್ಣು, ಶಕ್ತಿ, ಸೂರ್ಯ ಮೊದಲಾದ ದೇವತೆಗಳ ಸ್ತೋತ್ರಗಳನ್ನು ರಚಿಸಿ ಹಾಡಿ ಜನರಿಗೆ ಸಾತ್ವಿಕ ಭಕ್ತಿಮಾರ್ಗವನ್ನು ತೋರಿಸಿದರು. ವಿಚಾರ ಸ್ವಾತಂತ್ರ್ಯ, ಅಂಧ ಸಂಪ್ರದಾಯ ತ್ಯಾಗ, ಶುದ್ಧ ಧರ್ಮಾಚರಣೆ – ಇವುಗಳನ್ನು ತಮ್ಮ ಮತಾನುಯಾಯಿಗಳಲ್ಲಿ ರೂಢಿಗೆ ತಂದರು.

ಸದಾಶಿವ :—ಪೂಜ್ಯರೇ, ಶಂಕರಾಚಾರ್ಯರು ನಮ್ಮ ಕನ್ನಡ ನಾಡಿನಲ್ಲಿ ಸಂಚರಿಸಿ, ಶೃಂಗೇರಿಯಲ್ಲಿ ಶಾರದಾ ಪೀಠವನ್ನು ಸ್ಥಾಪಿಸಿ ಧರ್ಮ ರಕ್ಷಣೆ ಮಾಡಿದಮೇಲೆ ಈವರೆಗೆ ಆ ಪೀಠವನ್ನು ಅಲಂಕರಿಸಿದ ಗುರುಗಳು ಯಾರು ಯಾರು ?

ವಿದ್ಯಾರಣ್ಯರು :—ಸುರೇಶ್ವರಾಚಾರ್ಯರು, ಬೋಧಘನಾಚಾರ್ಯರು, ಜ್ಞಾನಘನಾಚಾರ್ಯರು, ಜ್ಞಾನ ಘನೋತ್ತಮ ಶಿವರು, ಜ್ಞಾನ ಗಿರಿಗಳು, ನರಸಿಂಹ ಮುನಿಗಳು, ಆ ತರುವಾಯ ವಿದ್ಯಾಶಂಕರರು. ಅವರಿಗೆ ವಿದ್ಯಾತೀರ್ಥರೆಂದೂ ಹೆಸರು. ಇವರೇ ಈಗ ಶೃಂಗೇರಿಯ ಪೀಠಾಧೀಶ್ವರರಾಗಿರುವವರು. ಇವರು ಕಾಂಚೀಪುರದಲ್ಲಿ ಶ್ರೀ ಶಂಕರಾಚಾರ್ಯರಿಂದ ಪ್ರತಿಷ್ಠಿತವಾಗಿರುವ ಕಾಮಕೋಟಿ ಪೀಠಾಧೀಶ್ವರರಾಗಿಯೂ ಇದ್ದಾರೆ. ನಾನು ಬಾಲ್ಯದಲ್ಲಿ ಸಾಯಣ ಮತ್ತು ಭೋಗನಾಥರೊಂದಿಗೆ ಇವರ ಬಳಿಯಲ್ಲಿ ವಿದ್ಯಾಭ್ಯಾಸ ಮಾಡಿದೆ. ಅವರೇ ನನ್ನ ಜ್ಞಾನಗುರು.

ಸದಾಶಿವ :—ಸ್ವಾಮಿ, ಶಂಕರಾಚಾರ್ಯರ ತರುವಾಯ ಸನಾತನ ಧರ್ಮವನ್ನು ಕಾಲಕ್ರಮದಲ್ಲಿ ಉಳಿಸಿದವರು ಯಾರು ಯಾರು ?

ವಿದ್ಯಾರಣ್ಯರು :—ವೀರಶೈವವೂ ಸನಾತನಧರ್ಮ ಶಾಖೆಯೆ. ಆ ಮತದ ಆಚಾರ್ಯರು ಸ್ಥಾಪಿಸಿದ ಮಠಗಳು ಬಾಳೇನಹಳ್ಳಿ, ಶ್ರೀಶೈಲ, ಉಜ್ಜಯಿನಿ, ಕಾಶಿ, ಹಿಮತ್ಕೇದಾರಗಳಲ್ಲಿವೆ. ರೇಣುಕ, ಏಕೋರಾಮ, ಮರುಳಾರಾಧ್ಯ, ಪಂಡಿತಾರಾಧ್ಯ, ವಿಶ್ವಾರಾಧ್ಯ—ಎಂಬ ಪಂಚಾಚಾರ್ಯರುಗಳು ಆ ಮತವನ್ನು ಸ್ಥಾಪಿಸಿದರು. ತರುವಾಯ ಬಸವಣ್ಣ, ಅಲ್ಲಮ ಮುಂತಾದವರೂ ಆ ಮತವನ್ನು ಅಭಿವೃದ್ಧಿಗೆ ತಂದರು.

ಚಂದ್ರಶೇಖರ :—ದ್ವೈತ ಮತ್ತು ವಿಶಿಷ್ಟಾದ್ವೈತ ಮತಗಳನ್ನು ಸ್ಥಾಪಿಸಿದ ಆಚಾರ್ಯರುಗಳೂ ನಮ್ಮ ನಾಡಿನಲ್ಲಿ ಸಂಚರಿಸಿರುವರೆ ?

ವಿದ್ಯಾರಣ್ಯರು :—ದ್ವೈತಮತವನ್ನು ಸ್ಥಾಪಿಸಿದ ಮಧ್ವಾಚಾರ್ಯರು ಹುಟ್ಟುಕನ್ನಡಿಗರು. ವಿಶಿಷ್ಟಾದ್ವೈತವನ್ನು ಸ್ಥಾಪಿಸಿದ ರಾಮಾನುಜಾಚಾರ್ಯರು ತಮಿಳುನಾಡಿನವರಾದರೂ ಕನ್ನಡನಾಡಿನಲ್ಲಿ ಬಹುಕಾಲ ವಾಸಿಸಿದರು. ಅವರ ಪ್ರಭಾವ ಕನ್ನಡನಾಡಿನಲ್ಲಿ ನೆಲೆಯೂರಿತು.

ಸದಾಶಿವ :—ಶ್ರೀ ರಾಮಾನುಜಾಚಾರ್ಯರ ಮತ ಸ್ವರೂಪವನ್ನು ಅಪ್ಪಣೆ ಕೊಡಿಸಿರಿ. ಅಲ್ಲದೆ ಆಚಾರ್ಯರ ಜೀವನಪರಿಚಯವನ್ನು ತಿಳಿಸಿರಿ.

ವಿದ್ಯಾರಣ್ಯರು :—ನಿಮ್ಮ ಅಭಿಲಾಷೆಯಂತೆ ಆಗಲಿ. ಪ್ರತಿಯೊಬ್ಬ ಹಿಂದುವೂ ಎಲ್ಲ ಮತಗಳ ತತ್ತ್ವಗಳನ್ನೂ ನಿಷ್ಪಕ್ಷಪಾತಬುದ್ಧಿಯಿಂದ ತಿಳಿದುಕೊಳ್ಳಬೇಕು. ಆಗ ಪರಸ್ಪರ ಪ್ರೇಮಾದರಗಳಿಂದ ಜನರು ಬಾಳಬಹುದು. ತನ್ನ ಮತ ದೊಡ್ಡದು; ಇನ್ನೊಬ್ಬರ ಮತ ಚಿಕ್ಕದು ಎಂಬ ದುರಭಿಮಾನವಿರಬಾರದು. ಆದರೆ ಸ್ವಮತದ ಉತ್ಕರ್ಷೆಯನ್ನು ಸ್ಥಾಪಿಸಲು ಪರಮತವನ್ನು ಖಂಡಿಸುವುದಾದರೂ ಕೇವಲ ಬುದ್ಧಿವಂತಿಕೆಯೇ ಹೊರತು ನಿಜವಾದ ಗುರಿ ಮಾತ್ರ ಒಂದೇ ಆಗಿರುತ್ತದೆ. ಆದ್ದರಿಂದ ನೀವು ಎಲ್ಲ ಮತಗಳ ಸಿದ್ಧಾಂತಗಳನ್ನು ಸಹೃದಯಭಾವದಿಂದ ಅರಿಯಬೇಕು. ನೀಚ ಮತಗಳನ್ನು ಮಾತ್ರ ಖಂಡಿಸಬೇಕು. ಶ್ರೀ ರಾಮಾನುಜಾಚಾರ್ಯರು ಹನ್ನೊಂದನೆಯ ಶತಮಾನದಲ್ಲಿ ಜೀವಿಸಿದ್ದರು. ಅವರು ಭರತಖಂಡದಲ್ಲೆಲ್ಲಾ ಪ್ರವಾಸಮಾಡಿ ಮಧುರೆ, ಬದರಿನಾಥ, ಕಾಶ್ಮೀರ, ಕಾಶಿ, ಜಗನ್ನಾಥಗಳ ಮಾರ್ಗವಾಗಿ ತಿರುಪತಿಗೆ ಹೋಗಿ ಅಲ್ಲಿಂದ ಕಂಚಿಯನ್ನು ಸಂದರ್ಶಿಸಿ ಶ್ರೀರಂಗಕ್ಕೆ ಬಂದರು. ಅವರು ಬ್ರಹ್ಮಸೂತ್ರಗಳ ಮೇಲೆ ಭಾಷ್ಯವನ್ನು ಬರೆದರು. ಅದಕ್ಕೆ ಶ್ರೀಭಾಷ್ಯವೆಂದು ಹೆಸರು. ಶೈವರಾಜನಾದ ಕುಲೋತ್ತುಂಗ ಚೋಳನಿಗೂ ರಾಮಾನುಜಾಚಾರ್ಯರಿಗೂ ಮನಸ್ತಾಪ ಬಂದದ್ದರಿಂದ, ಆಚಾರ್ಯರು ಕನ್ನಡನಾಡಿಗೆ ಬಂದು ಆಗ ದೋರಸಮುದ್ರದಲ್ಲಿ ರಾಜನಾಗಿದ್ದ ಬಲ್ಲಾಳವಂಶದ ಬಿಟ್ಟಿದೇವನ ಆಶ್ರಯ ಪಡೆದರು. ಅವನು ಆಚಾರ್ಯರ ಶಿಷ್ಯನಾಗಿ ವಿಷ್ಣುವರ್ಧನ ಎಂದು ಹೆಸರಿಟ್ಟುಕೊಂಡನು. ಅವರು ಮೇಲುಕೋಟೆಯಲ್ಲಿ ಒಂದು ವಿಷ್ಣುದೇವಾಲಯವನ್ನು ಕಟ್ಟಿಸಿ ರಾಮಪ್ರಿಯ ಎಂಬ ವಿಷ್ಣುವಿಗ್ರಹವನ್ನು ಅಲ್ಲಿ ಸ್ಥಾಪಿಸಿದರು. ಪಂಚಮರು

ಕೆಲವು ಗೊತ್ತಾದ ದಿನಗಳಲ್ಲಿ ಆ ದೇವಾಲಯಕ್ಕೆ ಹೋಗಿ ದೇವರದರ್ಶನ ಮಾಡಲು ಅವಕಾಶವನ್ನು ಕಲ್ಪಿಸಿಕೊಟ್ಟರು.

ರಾಮಾನುಜರು ತಮ್ಮ ಮತತತ್ತ್ವಗಳನ್ನು ಉಪನಿಷತ್ತು, ಬ್ರಹ್ಮಸೂತ್ರ, ಪುರಾಣ, ಸಾಂಖ್ಯದರ್ಶನ – ಇವುಗಳ ಆಧಾರದಮೇಲೆ ಸ್ಥಾಪಿಸಿರುವರು. ರಾಮಾನುಜರ ಮತ ಪಾಂಚರಾತ್ರ ಮತದ ವಾಸುದೇವ ಧರ್ಮ. ಕೇಶವಸೋಮಯಾಜಿ ಮತ್ತು ಕಾಂತಿಮತಿ ಎಂಬುವರು ರಾಮಾನುಜರ ತಂದೆತಾಯಿಗಳು. ಇವರು – ಯಾದವಪ್ರಕಾಶರೆಂಬ ಗುರುವಿನ ಬಳಿಯಲ್ಲಿ ಕೆಲವು ಕಾಲ ಶಾಸ್ತ್ರಾಭ್ಯಾಸಮಾಡಿದರು. ಅವರಿಗೆ ಸಂಸಾರದಲ್ಲಿ ವಿರಕ್ತಿಯುಂಟಾಗಿ ಹೆಂಡತಿಯನ್ನು ತವರುಮನೆಗೆ ಕಳುಹಿಸಿ ತಾವು ಸಂನ್ಯಾಸಿಗಳಾದರು. ಅವರು ಸುಮಾರು ೧೨೦ ವರ್ಷ ಬದುಕಿದ್ದರು.

ಚಂದ್ರಶೇಖರ :––ಸ್ವಾಮ್ಯರೆ, ಸಹಜವಾಗಿಯೂ ಇಂಥ ಮಹಾಪುರುಷರಿದ್ದುದರಿಂದಲೇ ನಮ್ಮ ಧರ್ಮಕ್ಕೆ ಯಾವ ಚ್ಯುತಿಯೂ ಇಲ್ಲದೆ ಬೆಳೆದುಕೊಂಡು ಬಂದಿದೆ. ಮಧ್ವಾಚಾರ್ಯರ ವಿಷಯವನ್ನೂ ನಮಗೆ ತಿಳಿಸಿರಿ. ಇನ್ನೇನು ಹಂಪೆಯ ಸಮೀಪಕ್ಕೆ ಬಂದೆವು.

ವಿದ್ಯಾರಣ್ಯರು :—ನಾನು ಸ್ಥೂಲವಾಗಿ ತಿಳಿಸುತ್ತಿದ್ದೇನೆ. ಮುಂದೆ ನೀವು ಆಯಾ ಮತಗ್ರಂಥಗಳನ್ನು ಅಭ್ಯಾಸ ಮಾಡುವಾಗ ಆ ಮತಗಳ ಸ್ವರೂಪವನ್ನು ಚೆನ್ನಾಗಿ ತಿಳಿಯಬಹುದು. ಶ್ರೀ ರಾಮಾನುಜರಂತೆಯೇ ಶ್ರೀ ಮಧ್ವಾಚಾರ್ಯರೂ ವೇದಧರ್ಮ ಸಂಸ್ಥಾಪಕರು. ಅವರ ತಂದೆಯ ಹೆಸರು ಮಧ್ಯಗೇಹಭಟ್ಟ. ತಾಯಿಯ ಹೆಸರು ವೇದವತಿ. ಅವರು ತೋಟಂತಿಲ್ಲಾಯರೆಂಬ ಗುರುಗಳಲ್ಲಿ ವೇದಾಧ್ಯಯನವನ್ನು ಮಾಡಿ, ಅಚ್ಯುತಪ್ರೇಕ್ಷರಿಂದ ಸಂನ್ಯಾಸವನ್ನು ಸ್ವೀಕರಿಸಿದರು. ಅವರನ್ನು ಆನಂದತೀರ್ಥರೆಂದೂ ಪೂರ್ಣಪ್ರಜ್ಞರೆಂದೂ ಕರೆಯುತ್ತಿದ್ದರು. ಅವರು ಅನೇಕ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ, ಪ್ರಸಿದ್ಧ ವಿದ್ವಾಂಸರೊಂದಿಗೆ ವಾದಮಾಡಿ ತಮ್ಮ ಮತವನ್ನು ಪ್ರಸಾರಮಾಡಿದರು. ನರಹರಿತೀರ್ಥ, ಪದ್ಮನಾಭತೀರ್ಥ, ವಿಷ್ಣುತೀರ್ಥ, ಉಪೇಂದ್ರತೀರ್ಥ, ವಾಮನತೀರ್ಥ, ರಾಮತೀರ್ಥ – ಮುಂತಾದವರು ಆಚಾರ್ಯರ ಮುಖ್ಯಶಿಷ್ಯರು. ಅವರು ಬ್ರಹ್ಮಸೂತ್ರಗಳಿಗೆ ದ್ವೈತಮತಪರವಾಗಿ ಭಾಷ್ಯವನ್ನು ಬರೆದರು. ಸುಮಾರು ೭೯ ವರ್ಷ ಜೀವಿಸಿದ್ದರು.

ಹರಿಯೇ ಪರಬ್ರಹ್ಮನು; ಜಗತ್ತು ಸತ್ಯವಾದುದು. ಜೀವಾತ್ಮರುಗಳಲ್ಲಿ ಉಚ್ಚನೀಚ ಭೇದವಿದೆ. ನಿರ್ಮಲಭಕ್ತಿಯೇ ಮುಕ್ತಿಗೆ ಸಾಧನ – ಎಂದು ಆ ಮತಸಿದ್ಧಾಂತದಲ್ಲಿ ಹೇಳಿದೆ.

ಸದಾಶಿವ :—ಪೂಜ್ಯರೆ, ಎಲ್ಲ ಮತದರ್ಶನಗಳೂ ಒಂದೇ ಧ್ಯೇಯವನ್ನು ಸಾಧಿಸುತ್ತವೆಯೆಂಬುದನ್ನು ತಾವೇ ಎಷ್ಟೋ ವೇಳೆ ತಿಳಿಸಿರುವಿರಿ. ಮುಖ್ಯವಾಗಿ ವೈದಿಕಧರ್ಮ ವಿಶಾಲವಾದುದು. ಅದು ಎಲ್ಲ ಮತಗಳ ತತ್ತ್ವಗಳನ್ನೂ ಒಳಗೊಂಡಿದೆ. ಆದ್ದರಿಂದ ಒಂದು ಮತದವರು ಇನ್ನೊಂದು ಮತದವರನ್ನು ಯಾವ ರೀತಿಯಿಂದಲೂ ಕಡೆಗಣಿಸಬಾರದು.

ಚಂದ್ರಶೇಖರ :—ಬೌದ್ಧ ಮತ್ತು ಜೈನಧರ್ಮಗಳು ವೇದಧರ್ಮಕ್ಕೆ ಅನುಗುಣವಾಗಿವೆಯೆ ?

ವಿದ್ಯಾರಣ್ಯರು :—ದೇಶದಲ್ಲಿ ಧರ್ಮಗ್ಲಾನಿಯಾದಾಗ, ಧರ್ಮಸಂಸ್ಥಾಪನಾರ್ಥವಾಗಿ ಪರಮಾತ್ಮನೇ ಒಂದಲ್ಲದಿನ್ನೊಂದು ರೂಪದಿಂದ ಅವತರಿಸುತ್ತಾನೆ. ಆದ್ದರಿಂದ ಅವತಾರಪುರುಷರೆಲ್ಲರೂ ಒಂದೇ. ಅವರೆಲ್ಲರೂ ಮಹಾತ್ಮರೇ. ಪಾಮರರಾದ ನಮ್ಮಲ್ಲಿ ಆ ಕ್ಷುಲ್ಲಕ ಭಾವನೆಗಳು ತುಂಬಿರುವುವೇ ಹೊರತು ಆ ಮಹನೀಯರಲ್ಲಿ ಅಂಥ ಭಾವನೆಗಳಿರುವುದಿಲ್ಲ. ಕಾಲಕಾಲಕ್ಕೆ ಉದಯಹೊಂದಿದ ಈ ಮತಗಳ ಮೂಲವನ್ನು ನಿರೀಕ್ಷಿಸಿದರೆ ಎಲ್ಲವೂ ಒಂದೇ ತತ್ತ್ವವನ್ನು ಅರಸುತ್ತಿವೆ. ಜನರ ತಿಳಿವಳಿಕೆಯಲ್ಲಿ ವೈಪರೀತ್ಯವುಂಟಾದಾಗ ಅವಕ್ಕೆ ಅನುಸಾರವಾಗಿ ಮತಗಳು ಹುಟ್ಟಿವೆ. ಜಗತ್ತಿನ ಆರಂಭದಲ್ಲಿ ನಾಸ್ತಿಕಮತವೇ ಪ್ರಚಾರದಲ್ಲಿತ್ತು. ಕಾಲ ಕಳೆದಂತೆ ಜನರಲ್ಲಿ ಅನೀತಿ ಬೆಳೆಯಿತು; ಸಮಾಜದ ಅಸ್ತಿತ್ವಕ್ಕೆ ಹಾನಿ ತಟ್ಟಿತು. ಆಗ ನಾಸ್ತಿಕ ಮತತತ್ತ್ವಗಳನ್ನು ಅನುಸರಿಸುವುದು ಸರಿಯಲ್ಲವೆಂದೂ, ಸರ್ವಶಕ್ತನಾದ ಪರಮಾತ್ಮನೊಬ್ಬನಿದ್ದಾನೆಂದೂ, ಜೀವರ ಮರಣಾನಂತರ ಅವರ ಪಾಪಪುಣ್ಯಗಳಿಗೆ ತಕ್ಕ ಫಲ ದೊರೆಯುತ್ತದೆಂದೂ ಜಗತ್ತಿಗೆ ಬೋಧಿಸಬೇಕಾಯಿತು. ಅನಂತರ ಈ ಜೀವಾತ್ಮನಿಗೂ ಪರಮಾತ್ಮನಿಗೂ ಇರುವ ಸಂಬಂಧವೇನು ? ಅವರಿಗಿರುವ ಭೇದ ಇವೇ ಮೊದಲಾದ ಪ್ರಶ್ನೆಗಳು ಹುಟ್ಟಿದುವು. ಆಗ ಅದ್ವೈತಮತ ಪ್ರಚಾರಕ್ಕೆ ಬಂತು. ಇದರಿಂದ ಕೆಲವು ಕಾಲಾನಂತರ ಮನುಷ್ಯನಲ್ಲಿ ಅಹಂಕಾರ ಹುಟ್ಟಿತು. ಅಜ್ಞಾನವಶದಿಂದ ದೇವರಿಗೂ

ತನಗೂ ಭೇದವಿಲ್ಲವೆಂಬ ಪ್ರಚಾರ ಹರಡಿತು. ಹೀಗೆ ಜನರಲ್ಲಿ ವಿಚಾರ ಕ್ರಾಂತಿಯುಂಟಾದಂತೆ ವಿಶಿಷ್ಟಾದ್ವೈತ ಮತ್ತು ದ್ವೈತತತ್ತ್ವಗಳು ಪ್ರಚಾರಕ್ಕೆ ಬಂದುವು.

ಈ ದೃಷ್ಟಿಯಿಂದ ನೋಡಿದರೆ, ಆಯಾ ಕಾಲದ ಪರಿಸ್ಥಿತಿಗೆ ಅನುಗುಣವಾಗಿಯೇ ಬೌದ್ಧ ಮತ್ತು ಜೈನಮತಗಳು ಹುಟ್ಟಿವೆ. ಈಗ ಕರ್ನಾಟಕದಲ್ಲಿ ಬೌದ್ಧಮತವಿಲ್ಲ; ಜೈನಮತ ತುಂಬ ಹಬ್ಬಿದೆ. ಅದು ಹಿಂದೂಧರ್ಮದಿಂದ ಭಿನ್ನವಾಗಿದ್ದು ಒಂದು ಸ್ವತಂತ್ರ ಧರ್ಮವಾಗಿರುವುದು. ಜೈನಾಚಾರ್ಯರಲ್ಲಿ ಕುಂದಕುಂದ, ಸಮಂತಭದ್ರ, ಪೂಜ್ಯಪಾದ, ಅಕಲಂಕ ಮೊದಲಾದವರು ಪ್ರಮುಖರು. ಜೈನರು ಸಂಸ್ಕೃತ ಪ್ರಾಕೃತ ಮತ್ತು ಕನ್ನಡ ಭಾಷೆಗಳಲ್ಲಿ ಅನೇಕ ಗ್ರಂಥಗಳನ್ನು ಬರೆದಿರುವರು. ಆ ಮತೀಯರು ೨೪ ಜನ ತೀರ್ಥಂಕರರನ್ನು ಭಕ್ತಿಯಿಂದ ಆರಾಧಿಸುತ್ತಾರೆ. ಮಹಾವೀರ ವರ್ಧಮಾನ ತೀರ್ಥಂಕರರೇ ಕೊನೆಯ ತೀರ್ಥಂಕರರು. ಜೈನಧರ್ಮದಲ್ಲಿ ಮುಕ್ತಿಯನ್ನು ಪಡೆಯುವುದು ಸಂಪೂರ್ಣವಾಗಿ ಮನುಷ್ಯನ ಸ್ವತಂತ್ರದಲ್ಲಿದೆ. ದೇವರ ಅಥವಾ ದೇವರ ಪ್ರತಿನಿಧಿಯ ಅಗತ್ಯವಿಲ್ಲ. ರತ್ನತ್ರಯಗಳೆಂದು ಜೈನರು ಹೇಳುವ, ಸಮ್ಯಕ್ ದರ್ಶನ, ಸಮ್ಯಕ್ ಜ್ಞಾನ, ಸಮ್ಯಕ್ ಚಾರಿತ್ರ್ಯ – ಇವು ಜೀವನಿಗೆ ಮೋಕ್ಷವನ್ನು ಒದಗಿಸುವುದರಲ್ಲಿ ಸಹಾಯಕವಾಗಿರುವುವು.

ಬೌದ್ಧಧರ್ಮವನ್ನು ಬುದ್ಧನು ಪ್ರಚಾರ ಮಾಡಿದನು. ಜೀವಾತ್ಮ, ಪರಮಾತ್ಮ, ಜಗತು, ಇವುಗಳಲ್ಲಿ ಆತನಿಗೆ ನಂಬುಗೆ ಇರಲಿಲ್ಲ. ದುಃಖಮಯವಾದ ಈ ಪ್ರಪಂಚದಿಂದ ಹೇಗೆ ಪಾರಾಗಬೇಕೆಂಬ ಪ್ರಶ್ನೆಯೇ ಆತನನ್ನು ಬಾಧಿಸುತ್ತಿತ್ತು. ಎಲ್ಲವೂ ನಶ್ವರ; ಎಲ್ಲವೂ ಕ್ಷಣಿಕ; ಪ್ರಾಣಿ ಜೀವಿಸಿದ್ದಾಗ ಮಾಡಿದ ಕರ್ಮದಿಂದ ಪುನರ್ಜನ್ಮವುಂಟಾಗುವುದು. ಆರ್ಯಸತ್ಯಗಳನ್ನು ಅರಿತ ಜ್ಞಾನಿಯ ಕರ್ಮ ನಾಶವಾಗುವುದರಿಂದ ಆತನು ಪುನರ್ಜನ್ಮವಿಲ್ಲದೆ ನಿರ್ವಾಣವನ್ನು ಪಡೆಯುವನು. ನಿರ್ವಾಣವೆಂದರೆ ಪೂರ್ಣವಾಗಿ ಇಲ್ಲದಂತಾಗುವುದು. ಹಣತೆಯಲ್ಲಿ ಎಣ್ಣೆ ಇರುವವರೆಗೆ ದೀಪ ಉರಿಯುವುದು. ಎಣ್ಣೆ ತೀರಿದಮೇಲೆ ದೀಪ ಆರಿಹೋಗುವುದು. ಪುನಃ ಹಚ್ಚಿದರೂ ಉರಿಯುವುದಿಲ್ಲ. ಕರ್ಮವನ್ನೂ ಅದರಿಂದುಂಟಾಗುವ ದುಃಖ

ವನ್ನೂ ನೀಗಿದ ಅರುಹಂತನು ನಂದಿಹೋದ ದೀಪದಂತೆ ಇರುವನು. ಇದೇ ನಿರ್ವಾಣ. ಇದೇ ಆ ಮತದ ಮುಖ್ಯ ಸ್ವರೂಪ.

ಸದಾಶಿವ :—ಸ್ವಾಮಿ, ಕೃತಾರ್ಥರಾದೆವು. ಈ ಧರ್ಮಗಳ ಸ್ವರೂಪ ವನ್ನು ಕೇಳಿ, ಅವುಗಳ ಅಂತರಾರ್ಥವನ್ನು ಗ್ರಹಿಸದೆ ಪಂಡಿತರೆನ್ನಿಸಿಕೊಳ್ಳು ವವರು ಮೂಢರಂತೆ ವರ್ತಿಸುತ್ತಾರೆ.

ಹೀಗೆ ಮಾತನಾಡಿಕೊಂಡು ನಡೆಯುತ್ತಿದ್ದರು. ಅವರಿಗೆ ಎಷ್ಟು ದೂರ ದಾರಿ ಸಾಗಿರುವುದೆಂಬುದೇ ತಿಳಿಯಲಿಲ್ಲ. ಇನ್ನು ಸ್ವಲ್ಪ ದೂರದಲ್ಲಿಯೇ ಪಂಪಾ ವಿರೂಪಾಕ್ಷೇಶ್ವರನ ದೇವಾಲಯದ ಶಿಖರ ಕಾಣುತ್ತಿತ್ತು. ಅಲ್ಲಿಗೆ ಸಮೀಪದಲ್ಲಿಯೇ ಇದ್ದ ಶ್ರೀ ಭುವನೇಶ್ವರೀದೇವಿಯ ದೇವಾಲಯದ ಕಡೆಗೆ ಆ ಮೂವರೂ ತಿರುಗಿದರು. ಅಷ್ಟುಹೊತ್ತಿಗೆ ಸಂಜೆಯಾಯಿತು. ಆ ರಾತ್ರಿ ಆ ಗುರುಶಿಷ್ಯರು ದೇವಾಲಯದಲ್ಲಿಯೇ ತಂಗಿದರು.

ವಿದ್ಯಾರಣ್ಯರು ಕಠಿಣ ತಪಸ್ಸನ್ನಾಚರಿಸಲಾರಂಭಿಸಿದರು. ಶಿಷ್ಯರು ಗುರು ಶುಶ್ರೂಷೆಯಲ್ಲಿ ನಿರತರಾಗಿದ್ದರು ಅವರ ಧರ್ಮ ಪತ್ನಿ ಪ್ರೀತಿ ಹೋತ್ರಿಯು ಅತ್ತ ಸಂಸಾರದಲ್ಲಿ ವೀರವ್ರತಾಚಾರಿಣಿಯಾಗಿ ಆತ್ಮ ಸಂಯಮ ದಿಂದ ಕಾಲ ಕಳೆಯುತ್ತಿದ್ದಳು. ಈ ದಂಪತಿಗಳ ತಪಶ್ಚರ್ಯೆಯಿಂದ ಕನ್ನಡ ನಾಡಿನ ಶ್ರೇಯಸ್ಸಾಧನೆಯಾಯಿತು. ವಿದ್ಯಾರಣ್ಯರು ಶ್ರೀ ಭುವನೇಶ್ವರೀ ಸಾನ್ನಿಧ್ಯದಲ್ಲಿ ತದೇಕ ಧ್ಯಾನಚಿತ್ತರಾಗಿ ಧ್ಯಾನ ಮಗ್ನರಾಗುತ್ತಿದ್ದರು. ಮೂರು ತಿಂಗಳು ಹಣ್ಣುಗಳನ್ನು ಮಾತ್ರವೇ ಸ್ವೀಕರಿಸುತ್ತಿದ್ದರು. ಆರು ತಿಂಗಳು ನೀರನ್ನು ಮಾತ್ರ ಕುಡಿದು ತಪಸ್ಸು ಮಾಡಿದರು. ಒಂದು ವರ್ಷ ವಾತಾ ಹಾರಿಯಾಗಿಯೂ ನಾಲ್ಕು ವರ್ಷ ನಿರಾಹಾರಿಯಾಗಿಯೂ ತಪಸ್ಸು ಮಾಡಿ ದರು. ದೇವಿಯು ಅವರ ನಿಶ್ಚಲ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷಳಾದಳು. "ಯೋಗಿವರ್ಯ, ನಿನ್ನ ತಪಸ್ಸಿನಿಂದ ಸಂತೋಷಪಟ್ಟೆನು. ನಿನಗೆ ಈ ಜನ್ಮ ದಲ್ಲಿ ಕಾರ್ಯಸಾಧನೆಯಾಗುವುದಿಲ್ಲ. ಮುಂದಿನ ಜನ್ಮಕ್ಕೆ ನಿನ್ನ ಇಷ್ಟಾರ್ಥ ಸಿದ್ಧಿಸುತ್ತದೆ. ನಿನ್ನ ಈ ತಪಃಪ್ರಭಾವವನ್ನು ಸ್ವದೇಶ ಸೇವಾ ಕಾರ್ಯದಲ್ಲಿ ಬೆಳಗಿಸು.'' ಎಂದು ಹೇಳಿದಳು. ವಿದ್ಯಾರಣ್ಯರು ತಾಯೀ,ನಾನು ಲೋಕೋಪ ಕಾರಾರ್ಥವಾಗಿಯೇ ನಿನ್ನನ್ನು ಕುರಿತು ತಪಸ್ಸು ಮಾಡಿದೆನು. ಭಕ್ತವತ್ಸಲೆ ಯಾದ ನೀನು ಕರುಣಿಸಿ ಪ್ರತ್ಯಕ್ಷಳಾಗಿರುವೆ. ನನಗೆ ಇದರಿಂದ ಯಾವ

ಸ್ವಾರ್ಥ ಸಿದ್ಧಿಯೂ ಬೇಡ. ರಾಷ್ಟ್ರ ಕಲ್ಯಾಣವನ್ನು ಸಾಧಿಸಲು ನನಗೆ ಮಾರ್ಗ ತೋರಿಸು. ನಾನು ಯಾವಾಗ ನಿನ್ನನ್ನು ಸೇವಿಸುತ್ತೇನೆಯೋ ನೀನು ಆವಾಗ ದರ್ಶನವನ್ನೀಯಬೇಕು. ನಾನು ಧನ್ಯನಾದೆನು.—ಎಂದು ಸಾಷ್ಟಾಂಗ ಪ್ರಣಾಮ ಮಾಡಿದರು. ದೇವಿಯು ಅವರನ್ನು ನ್ಯೆದಡವಿ— "ಕುಮಾರಾ! ನಿನಗೆ ಶುಭವಾಗಲಿ. ನೀನು ನನ್ನನ್ನು ಯಾವಾಗ ಸ್ಮರಿಸಿದರೂ ಆಗ ನಾನು ಬಂದು ದರ್ಶನ ಕೊಡುವೆನು" ಎಂದು ಹೇಳಿ ಅಂತರ್ಧಾನಳಾದಳು.

ಶ್ರೀ ವಿದ್ಯಾರಣ್ಯರು ದೇವಿಯ ಅನುಗ್ರಹದಿಂದ ಹರ್ಷಚಿತ್ತರಾದರು. ಅವರ ಮನಸ್ಸು ಪ್ರಫುಲ್ಲವಾಯಿತು. ತಾವು ಪಡೆದ ಶ್ರೀ ಮಹಾದೇವಿಯ ಸಂದರ್ಶನ ಭಾಗ್ಯವನ್ನು ತಮ್ಮ ಶಿಷ್ಯರಿಗೆ ತಿಳಿಸಿದರು. ಆ ಶಿಷ್ಯರ ಸಂತೋಷಕ್ಕೆ ಪಾರವೇ ಇಲ್ಲ! ಆದರೆ ದೇವಿಯು ಹೇಳಿದ ಮಾತೊಂದು ವಿದ್ಯಾರಣ್ಯರ ಮನಸ್ಸಿನಲ್ಲಿ ಕೊರೆಯುತ್ತಿತ್ತು. "ನಿನಗೆ ಈ ಜನ್ಮದಲ್ಲಿ ಕಾರ್ಯ ಸಾಧನೆಯಾಗುವುದಿಲ್ಲ. ಮುಂದಿನ ಜನ್ಮಕ್ಕೆ ನಿನ್ನ ಇಷ್ಟಾರ್ಥ ಸಿದ್ಧಿಸುತ್ತದೆ" ಎಂದು ದೇವಿಯಾಡಿದಮಾತಿನ ಅರ್ಥವನ್ನು ಪುನಃಪುನಃ ಆಲೋಚಿಸುತ್ತ ವಿಚಾರಮಗ್ನರಾಗುತ್ತಿದ್ದರು. ಈ ಜನ್ಮದಲ್ಲಿ ಸಾಧನೆಯಾಗದೆ ಇರತಕ್ಕ ಕಾರ್ಯವನ್ನು ಮುಂದಿನ ಜನ್ಮಕ್ಕೆ ಸಾಧಿಸಿ ಪ್ರಯೋಜನವೇನು? ಈಗ ಇಡಿಯ ಕನ್ನಡ ನಾಡೇ ಶಕ್ತಿಗುಂದಿ ಬೀಳುತ್ತಿರುವಾಗ ನಾನು ಮುಂದಿನ ಜನ್ಮ ಪರ್ಯಂತ ಕಾದಿರಲು ಸಾಧ್ಯವೇ? ಎಂದು ಒಮ್ಮೊಮ್ಮೆ ತಾವೇ ತರ್ಕಿಸಿಕೊಳ್ಳುತ್ತಿದ್ದರು. ಹೀಗೆಯೇ ಕೆಲವು ದಿನಗಳು ಕಳೆದುವು. ಇನ್ನು ತಾವು ತಮ್ಮ ಕುಟೀರಕ್ಕೆ ಹೋಗಬೇಕೆಂದು ಶಿಷ್ಯರಿಗೆ ಹೇಳಿದರು. ಮರುದಿನ ಪ್ರಯಾಣಮಾಡಬೇಕೆಂದು ಗೊತ್ತಾಯಿತು. ಆ ರಾತ್ರಿ ವಿದ್ಯಾರಣ್ಯರು ದೇವಿಯ ದರ್ಶನಮಾಡಿ ಮಲಗಿದರು. ಇದ್ದಕ್ಕಿದ್ದಂತೆಯೇ ಅವರಿಗೆ ಏನೋ ಸ್ಫುರಣೆಯುಂಟಾಯಿತು. ಹಾಸಿಗೆಯ ಮೇಲೆ ಎದ್ದು ಕುಳಿತರು. ತಮ್ಮ ಸ್ವಕ್ಕೆ ತ ವೇ ಆನಂದ ಪರವಶರಾಗುತ್ತಿದ್ದರು.—ಶ್ರೀ ದೇವಿ! ನಿನ್ನ ಮಾತಿನ ಅರ್ಥ ಈಗ ತಿಳಿಯಿತು. ಇದೂ ನಿನ್ನ ಅನುಗ್ರಹವೇ. ಈ ಜನ್ಮದಲ್ಲಿ ಕಾರ್ಯಸಾಧನೆಯಾಗುವುದಿಲ್ಲವೆಂಬ ನಿನ್ನ ಮಾತಿಗೆ ನಾನು ನಿರಾಶೆಯಿಂದಿದ್ದೆನು. ನಿಜ. ಈ ಜನ್ಮವೆಂದರೆ ಈ ಗೃಹಸ್ಥಜನ್ಮದಲ್ಲಿ ಅದು ಸಾಧ್ಯವಿಲ್ಲ.

ಸಂನ್ಯಾಸಾಶ್ರಮ ಸ್ವೀಕಾರಮಾಡುವುದರಿಂದ ಜನ್ಮಾಂತರವುಂಟಾದಹಾಗೆಂದು ಶಾಸ್ತ್ರಗಳಲ್ಲಿ ಉಕ್ತವಾಗಿದೆ. ಆದ್ದರಿಂದ ನಾನು ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ನನ್ನ ಕಾರ್ಯಸಾಧನೆ ಮಾಡಿಕೊಳ್ಳಬೇಕೆಂದು ತಿಳಿದಹಾಗಾಯಿತು. ತಾಯೀ! ನಿನ್ನ ಆಜ್ಞೆಯನ್ನು ಶಿರಸಾ ವಹಿಸಿದೆನು. ನಾನು ಸಂನ್ಯಾಸಿಯಾಗಿಯಾದರೂ ಜನತಾಸೇವೆ ಮಾಡುವೆನು. ಅಂಥ ಸಂನ್ಯಾಸಿಯ ಜನ್ಮವೇ ಶ್ರೇಷ್ಠವಲ್ಲವೆ!—ಎಂದು ಹೇಳಿಕೊಂಡು ಪುನಃ ಮಲಗಿದರು. ಅವರಿಗೆ ಆ ರಾತ್ರಿಯೆಲ್ಲಾ ನಿದ್ದೆ ಬರಲಿಲ್ಲ. ಸಂತೋಷದಿಂದ ಆಗಾಗ ಎದ್ದು ಹೊರಗೆ ಬರುತ್ತಿದ್ದರು. ಆಕಾಶದಲ್ಲಿ ಹೊಳೆಯುತ್ತಿದ್ದ ತಾರಾಮಂಡಲವನ್ನು ನೋಡುತ್ತ ನಿಂತು ಬಿಡುತ್ತಿದ್ದರು. ತಂಗಾಳಿಯ ಸೌರಭ್ಯವನ್ನು ಅನುಭವಿಸುತ್ತಿದ್ದರು. ಚಂದ್ರನು ಪುಟ್ಟ ಮೇಘಗಳೊಂದಿಗೆ ಚೆಲ್ಲಾಟವಾಡುತ್ತಿದ್ದಂತೆ ಕಾಣುತ್ತಿತ್ತು.—ಆಹಾ! ಪ್ರಕೃತಿ ಮಾತೆಯೇ! ಎಂಥ ನಿಷ್ಕಾಮ ಕರ್ಮಯೋಗಿಣಿಯಾಗಿರುವೆ! ತರುರಾಜಿಯಲ್ಲಿ ಬಿಡುವ ಫಲರೂಪವಾಗಿ ಲೋಕವನ್ನು ತೃಪ್ತಿಪಡಿಸುವೆ! ಲತೆಯ ಕೊನೆಯಲ್ಲಿ ಹೂವಾಗಿ ನಗುತ್ತ ಜಗತ್ತನ್ನು ನಗಿಸುವೆ. ಕಣ್ಬೆಳಕಾಗಿ ಮಾರ್ಗತೋರಿಸುವೆ. ಕಿರುತಾರೆಯಾಗಿ ಮಿರುಮಿರುಗುವೆ. ಬಿಳಿಬಾನುಮಾಲೆಯಾಗಿ ಅಂತರಿಕ್ಷದಲ್ಲಿ ಸುಳಿಯುತ್ತಿರುವೆ. ಎಳೆಗಾಳಿಯಾಗಿ ತಣಿಸುವೆ. ಬೆಳುದಿಂಗಳಾಗಿ ಆಹ್ಲಾದವನ್ನುಂಟುಮಾಡುವೆ. ಹಕ್ಕಿಯಾಗಿ ಹಾಡುವೆ. ಹೊನಲಾಗಿ ನಲಿಯುವೆ. ನಿನ್ನ ಮಡಿಲಲ್ಲಿ ವಿಶ್ವವನ್ನೇ ತೂಗುತ್ತಿರುವೆ. ನಿತ್ಯ ಯೌವನೆಯಾಗಿ ನೀನು ಚಿರಂಜೀವಿಯಾಗಿರುವೆಯಮ್ಮ! ಅಸಾಧ್ಯನಂತಳು ನೀನು! ಎಲ್ಲವೂ ನಿನ್ನ ನಿಯಮದಂತೆಯೇ ನಡೆಯಬೇಕಾಗಿದೆ. ನಾನು ಅಣುಮಾತ್ರದವನು. ಇನ್ನು ನಾನು ಸಂನ್ಯಾಸಿಯಾಗಿ ಸಂಸಾರವನ್ನು ಪರಿತ್ಯಜಿಸಿ ವಿಶ್ವ ಸೇವೆಗಾಗಿ ದುಡಿಯುವೆನು.—ಎಂದು ಹೇಳಿಕೊಳ್ಳುತ್ತ ಸ್ವಲ್ಪಹೊತ್ತು ಅತ್ತಿತ್ತ ಅಡ್ಡಾಡಿದರು. ಬೆಳಗಿನ ಜಾವ; ಕೋಳಿಗಳು ಕೂಗಿದುವು. ಅವರು ಶಿಷ್ಯರನ್ನು ಎಬ್ಬಿಸಿಕೊಂಡು ನದಿಯ ಸ್ನಾನಕ್ಕೆ ಹೊರಟರು.

ಅದೇದಿನಅವರು ತಮ್ಮ ಕುಟೀರಕ್ಕೆ ಪ್ರಯಾಣಮಾಡಿದರು. ಸುಮಾರು ಐದು ವರ್ಷಗಳಿಂದ ಅವರು ತಮ್ಮ ಸಂಸಾರವನ್ನು ಬಿಟ್ಟು ಪಂಪಾ ಕ್ಷೇತ್ರದಲ್ಲಿದ್ದರು. ಅವರು ಮುಂದೆ ವಿಧ್ಯುಕ್ತವಾಗಿ ಸದ್ಗುರುವಿನಿಂದ ಸಂನ್ಯಾಸಾ

ಶ್ರಮವನ್ನು ಕೈಗೊಳ್ಳಬೇಕಾಗಿದ್ದರೂ ಅಂದು ಅವರು ಮನಸ್ಸಿನಲ್ಲಿಯೇ ಸಂನ್ಯಾಸಾಶ್ರಮವನ್ನು ದೇವಿಯ ಸನ್ನಿಧಿಯಲ್ಲಿಯೇ ಸ್ವೀಕರಿಸಿದ್ದರು.

ಸಾಯಂಕಾಲದವೇಳೆಗೆ ಆ ಗುರು ಶಿಷ್ಯರು ಕುಟೀರದ ಸಮೀಪಕ್ಕೆ ಬಂದರು. ವೈತಿಹೋತ್ರಿಯು ಆಗತಾನೆ ಕುಟೀರ ಭೂಮಿಯಲ್ಲಿದ್ದ ಗಿಡಬಳ್ಳಿಗಳಿಗೆ ನೀರು ಹಾಕುತ್ತಿದ್ದಳು. ವಿದ್ಯಾರಣ್ಯರ ಪ್ರೀತಿಯಗೋವು ಗೌರಿ ಮರದ ನೆರಳಿನಲ್ಲಿ ಮೆಲಕು ಹಾಕುತ್ತಾ ಮಲಗಿತ್ತು. ಆದರ ಪಕ್ಕದಲ್ಲಿಯೇ ಆ ಗೋ ಸಂತಾನ ಗಂಗೆ, ತುಂಗೆ, ಗೌರಿ ಮತ್ತು ನಂದಿ—ಇವು ಆಡ್ಡಾಡುತ್ತ ಹಸುರು ಹುಲ್ಲನ್ನು ಮೇಯುತ್ತಿದ್ದುವು. ಕೃಷ್ಣೆ ಎಂಬ ಜಿಂಕೆ ದೂರದಲ್ಲಿ ಬರುತ್ತಿದ್ದವರನ್ನು ಯಾರೋ ಹೊಸಬರೆಂಬ ಗಾಬರಿಯಿಂದ ದೃಷ್ಟಿಸಿ ನೋಡುತ್ತಿತ್ತು. ವಿದ್ಯಾರಣ್ಯರು ಐದು ವರ್ಷದ ಹಿಂದೆ ಪರ್ಣ ಕುಟೀರವನ್ನು ಬಿಟ್ಟು ಹೋದಾಗ ಅದು ಇನ್ನೂ ಎಳೆಯಮರಿ. ಆಗ ಅದು ಕುಟೀರಕ್ಕೆ ಬಂದು ಒಂದು ತಿಂಗಳಾಗಿತ್ತು. ವಿದ್ಯಾರಣ್ಯರು ಒಂದು ದಿನ ಸಂಜೆ ಅರಣ್ಯಪ್ರಾಂತದಲ್ಲಿ ಶಿಷ್ಯರೊಂದಿಗೆ ತಿರುಗುತ್ತಿದ್ದಾಗ, ತಾಯಿಯನಗಲಿದ್ದ ಆ ಹುಲ್ಲೆಯ ಕರು ಒಂದು ಹೊದರಿನ ಬಳಿಯಲ್ಲಿ ಅವರ ಕೈಗೆ ಸಿಕ್ಕಿತ್ತು. ಅವರು ಅದನ್ನು ತಮ್ಮ ಕುಟೀರದಲ್ಲಿ ಬಹು ಪ್ರೀತಿಯಿಂದ ಸಾಕುತ್ತಿದ್ದರು. ಅದನ್ನು ಕೃಷ್ಣೆ ಎಂದು ಕರೆಯುತ್ತಿದ್ದರು. ಈಗ ಅದು ಪುಷ್ಟವಾಗಿ ಬೆಳದು ವೈತಿಹೋತ್ರಿಯ ಪ್ರೀತಿಯ ಗೆಳತಿಯಾಗಿತ್ತು. ಕುಟೀರದ ಮುಂಭಾಗದಲ್ಲಿ ವಿದ್ಯಾರಣ್ಯರೇ ನಟ್ಟಿದ್ದ ಅರಳಿಯ ಗಿಡ ದೊಡ್ಡದಾಗಿತ್ತು. ನೀರು ಸೇದಿ ಗಿಡಗಳಿಗೆ ಹಾಕಲು ಕುಟೀರದ ಪಕ್ಕದಲ್ಲಿದ್ದ ಬಾವಿಗೆ ಹೋಗಿದ್ದ ವೈತಿಹೋತ್ರಿಯೂ ಬಾಗಿಲಿಗೆ ಬಂದಳು. ವಿದ್ಯಾರಣ್ಯರೂ ಎದುರಾದರು. ಅವಳ ಸಂತೋಷಕ್ಕೆ ಎಣೆಯಿಲ್ಲ! ಆಕೆ ಕೊಡವನ್ನು ದಾರಿಯಲ್ಲಿಯೇ ಇಟ್ಟು, ಆನಂದ ಭಕ್ತಿಯಿಂದ ಬಂದು ಪತಿಯ ಪಾದಕ್ಕೆ ನಮಸ್ಕರಿಸಿದಳು. ವಿದ್ಯಾರಣ್ಯರು ಬಂದ ಸಮಾಚಾರವನ್ನು ಕೇಳಿ ವೃದ್ಧ ಮಾತೆ ಸಂತೋಷಪಟ್ಟಳು. ಅವರು ತಾಯಿಯ ಪಾದಮುಟ್ಟಿ ನಮಸ್ಕರಿಸಿದರು. ಸಾಯಣನು ಅಣ್ಣನಿಗೆ ಸಾಷ್ಟಾಂಗ ಪ್ರಣಾಮ ಮಾಡಿದನು. ಕುಟೀರ ಆನಂದಮಯವಾಯಿತು.

ಹೀಗೆ ಕೆಲವು ಕಾಲ ಕಳೆಯಿತು. ವಿದ್ಯಾರಣ್ಯರೂ ಸಾಯಣಾಚಾರ್ಯರೂ ಗ್ರಂಥಾವಲೋಕನದಲ್ಲಿ ಕಾಲ ಕಳೆಯುತ್ತಿದ್ದರು. ಶಾಸ್ತ್ರಪ್ರಸಂಗ

ಗಳನ್ನು ಮಾಡುತ್ತಿದ್ದರು. ವಿದ್ಯಾರಣ್ಯರ ತಪಃಪ್ರಭಾವವನ್ನು ಕೇಳಿ ಜನರು ಅವರ ದರ್ಶನಕ್ಕೆ ಬರುವುದು ಹೆಚ್ಚಾಯಿತು. ಆಗ ಪ್ರಸಿದ್ಧ ರಾಜಧಾನಿಗಳಾಗಿದ್ದ ದ್ವಾರಸಮುದ್ರ, ಓರಂಗಲ್ಲು ಮತ್ತು ಆನೆಗೊಂದಿ ಪಟ್ಟಣಗಳಿಂದ ಅನೇಕ ಶ್ರೀಮಂತರೂ, ಅಧಿಕಾರಿಗಳೂ ಪಂಡಿತರೂ ಆಗಾಗ ವಿದ್ಯಾರಣ್ಯರ ಸಂದರ್ಶನಕ್ಕೆ ಬರುತ್ತಿದ್ದರು.

ಆಗ ವಿದ್ಯಾರಣ್ಯರಿಗೆ ನಾಲ್ವತ್ತೈದು ವರ್ಷ ವಯಸ್ಸು. ಪರಿಪಕ್ವವಾದ ಲೋಕಾನುಭವ, ಕೂಲಂಕಷವಾದ ಶಾಸ್ತ್ರಾಭ್ಯಾಸ, ಪರಿಪೂರ್ಣವಾದ ಆತ್ಮಜ್ಞಾನ, ನಿರ್ದುಷ್ಟವಾದ ಆಲೋಚನಾಶಕ್ತಿ – ಇವು ಅವರಲ್ಲಿ ಕಾಣುತ್ತಿದ್ದುವು. ಅವರು ಸ್ವರಾಜ್ಯಸ್ಥಾಪನೆಯ ಸಮಯವನ್ನೇ ಸಾಧಿಸುತ್ತ – ಭುವನೇಶ್ವರಿಯ ಧ್ಯಾನದಲ್ಲಿ ನಿರತರಾಗುತ್ತಿದ್ದರು.

---

# ಮೂರನೆಯ ಅಧ್ಯಾಯ

## ಬಾಲ್ಯ, ವಿದ್ಯಾಭ್ಯಾಸ ಮತ್ತು ವಿವಾಹ

ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹವಿದ್ಯತೇ |
ತತ್ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ || —ಗೀತೆ.

ಹನ್ನೆರಡನೆಯ ಶತಮಾನ. ತುಂಗಭದ್ರಾ ನದಿಯ ದಕ್ಷಿಣ ತಟದಲ್ಲಿ ಪಂಪಾಕ್ಷೇತ್ರ ಸಮೀಪದಲ್ಲಿದ್ದ ಬ್ರಾಹ್ಮಣ ಅಗ್ರಹಾರದಲ್ಲಿ ಒಂದು ಬಡಸಂಸಾರ. ಮಾಯಣ ಎಂಬ ಶ್ರೋತ್ರಿಯನು ಶ್ರೀಮತೀದೇವಿ ಎಂಬ ಹೆಂಡತಿಯೊಂದಿಗೆ ಸಂಸಾರ ಮಾಡಿಕೊಂಡಿದ್ದನು. ಅವನು ದೊಡ್ಡ ವಿದ್ವಾಂಸನೂ ತತ್ತ್ವ ಜ್ಞಾನಿಯೂ ಆಚಾರನಿಷ್ಠನೂ ಆಗಿದ್ದನು. ಶ್ರೀಮತೀದೇವಿಯು ಅವನಿಗೆ ತಕ್ಕ ಸತಿಯಾಗಿ ಸಂಸಾರವನ್ನು ಬಡತನದಲ್ಲಿಯೇ ಸುಗಮವಾಗಿ ನಡಸುತ್ತಿದ್ದಳು. ಅವಳು ಎಂದೂ ಗಂಡನ ಮಾತಿಗೆ ಪ್ರತಿಯಾಗಿ ಏನನ್ನೂ ಹೇಳಿದವಳಲ್ಲ. ಇದ್ದುದರಲ್ಲಿಯೇ ಸಂತೋಷದಿಂದ ಕಾಲ ಕಳೆಯುತ್ತಿದ್ದಳು. ಆಕೆ ಸತ್ಕುಲಪ್ರಸೂತೆ; ಸಾಧ್ವೀಮಣಿ. ಮಾಯಣನಾದರೋ ಯಾವಾಗಲೂ ದೇವತಾಕಾರ್ಯಗಳನ್ನು ನಡಸುವುದರಲ್ಲಿಯೂ, ತೀರ್ಥಕ್ಷೇತ್ರಗಳನ್ನು ಸಂದರ್ಶಿಸುವುದರಲ್ಲಿಯೂ ಕಾಲ ಕಳೆಯುತ್ತಿದ್ದನು. ಅವನು ಘನಪಂಡಿತನಾಗಿದ್ದಂತೆಯೇ ಪರಮಗುಣಶಾಲಿಯೂ ಆಗಿದ್ದನು.

ಮಾಯಣನ ಹಿರಿಯರೂ ತುಂಬ ಪಂಡಿತರಾಗಿಯೇ ಇದ್ದರು. ಈ ದಂಪತಿಗಳಿಗೆ ಬಹಳ ಕಾಲ ಮಕ್ಕಳಾಗಲಿಲ್ಲ. ಅವರಿಬ್ಬರೂ ಸತ್ಸಂತಾನ ಪ್ರಾಪ್ತಿಗಾಗಿ ಪಂಪಾ ವಿರೂಪಾಕ್ಷಸ್ವಾಮಿಯನ್ನು ಭಕ್ತಿಯಿಂದ ಆರಾಧಿಸುತ್ತಿದ್ದರು. ಶ್ರೀಮತೀದೇವಿಯು ಗೌರೀವ್ರತವನ್ನು ಬಹಳ ಭಕ್ತಿ ನಿಯಮಗಳಿಂದ ಆಚರಿಸಿದಳು. ಮಾಯಣ – ಶ್ರೀಮತಿಯರ ಸೇವಾಕೈಂಕರ್ಯಗಳಿಗೆ ಸುಪ್ರೀತರಾದ ಶ್ರೀ ವಿರೂಪಾಕ್ಷ – ಸರ್ವಮಂಗಳಾ ದೇವಿಯರು ಅವರ ಅಭೀಷ್ಟವನ್ನು ನೆರವೇರಿಸಿದರು. ಭಗವದನುಗ್ರಹದಿಂದ ಲಭಿಸದ ಮನೋರಥವಿರುವದೆ! ಶ್ರೀಮತೀದೇವಿಯು ಗರ್ಭವತಿಯಾದಳು. ಮಾಯಣನಿಗೆ ನಾಲ್ವತ್ತು ವರುಷ ವಯಸ್ಸಿನಲ್ಲಿ ಶ್ರೀಮತೀದೇವಿಯು ಗಂಡುಮಗನನ್ನು ಪಡೆ

ದಳು. ಪುತ್ರಸಂತಾನ ಪ್ರಾಪ್ತಿಯಿಂದ ವಾಮಯಣ್ಣನು ಆನಂದತುಂದಿಲ ಹೃದಯನಾದನು. ಬಡತನದ ಬೇಗೆಯೇ ಅವನಿಗೆ ನೆಮ್ಮದಿಯ ಬೆಳುದಿಂಗಳಾಯಿತು. ವಂಶೋದ್ಧಾರಕನಾದ ಮಗನನ್ನು ನೋಡಿ ನೋಡಿ ಸಂತೋಷಪಡುತ್ತಿದ್ದನು. ಮಗನಿಗೆ ಮಾಧವನೆಂದು ಹೆಸರಿಟ್ಟರು. ಮಗು ದಿನದಿನಕ್ಕೆ ಬೆಳೆಯುತ್ತ ತಾಯಿತಂದೆಗಳ ಸಂತೋಷವನ್ನು ಹೆಚ್ಚಿಸುತ್ತಿತ್ತು. ತಾಯಿಯ ಕಣ್ಮಣಿಯಾಯಿತು. ತಂದೆಯ ಕೀರ್ತಿಕುಸುಮವಾಯಿತು. ಮನೆಯಂಗಳದ ಅರಗಿಣಿಯಾಯಿತು. ಸಂಸಾರದ ಮನೆದೀಪವಾಯಿತು. ತಂದೆಯ ಪಾಂಡಿತ್ಯ ರಸಾಲ ತರುವಿನ ವಸಂತಕೋಗಿಲೆಯಾಯಿತು. ತನಗೆ ಈ ಜನ್ಮದಲ್ಲಿಯೇ ಮಕ್ಕಳಾಗುವ ಸಂಭವವಿಲ್ಲವೆಂದು ತಿಳಿದು ಎಷ್ಟೋಸಾರಿ ನಿರಾಶೆಯಿಂದ ಕಣ್ಣೀರು ಹಾಕಿದ್ದ ತಾಯಿ ಶ್ರೀಮತೀದೇವಿಯ ಆನಂದಮೂರ್ತಿಯಾಯಿತು. ಮನೆಗೆಲಸಗಳನ್ನು ಉಲ್ಲಾಸದಿಂದ ಮಾಡುವಳು. ಮಗುವನ್ನು ಜತನದಿಂದ ಆರೈಕೆ ಮಾಡುತ್ತಿದ್ದಳು. ತಾನು ಬಂಜೆಯೆಂದು ಸರಿಹೆಂಗಸರು ಆಡಿಕೊಂಡಿದ್ದನ್ನು ಕಿವಿಯಾರೆ ಕೇಳಿ ದುಃಖಪಟ್ಟಿದ್ದಳು. ಇಂದು ತನ್ನ ಕಂದನ ಅಳು ಅವಳಿಗೆ ಗಾನಸುಧಾರಸ ಪ್ರಾಯವಾಗಿತ್ತು! ಮಗುವಿನ ನಗು ಗಂಗಾ ಲಹರಿಯಂತೆ ಆನಂದದಾಯಕವಾಗಿತ್ತು. ಹೀಗೆ ಮಗು ಬಾಲಲೀಲೆಗಳಿಂದ ದಿನದಿನಕ್ಕೆ ಪ್ರವರ್ಧಮಾನವಾಗುತ್ತ ತಾಯಿತಂದೆಗಳನ್ನು ಸಂತೋಷಪಡಿಸುತ್ತಿತ್ತು.

ಮಾಧವನು ಆ ಬ್ರಾಹ್ಮಣ ಅಗ್ರಹಾರದವರಿಗೆಲ್ಲ ಅಚ್ಚುಮೆಚ್ಚಾದನು. ಅವನಿಗೆ ಐದು ವರುಷ ತುಂಬಿತು. ಶುಭ ಲಗ್ನದಲ್ಲಿ ಓನಾಮ ಪೂಜೆಯನ್ನು ಮಾಡಿಸಿ, ಅಕ್ಷರಾಭ್ಯಾಸವನ್ನು ಪ್ರಾರಂಭಿಸಿದರು. ವೈದಿಕ ಪಾಠಶಾಲೆಯಲ್ಲಿಯೇ ವಿದ್ಯಾಭ್ಯಾಸಮಾಡುತ್ತಿದ್ದನು. ಅಮರವನ್ನು ಕಂಠಪಾಠ ಮಾಡುವುದರಲ್ಲಿ ಮಾಧವನನ್ನು ಮೀರಿಸಿದ ಬಾಲಕರೇ ಇರಲಿಲ್ಲ. ಶಿವಾನಂದಲಹರಿ ಸೌಂದರ್ಯಲಹರಿ, ದಕ್ಷಿಣಾಮೂರ್ತಿ ಸ್ತೋತ್ರ, ವಿಷ್ಣು ಸಹಸ್ರನಾಮ ಮತ್ತು ಹರಿಮೀಢೇ ಸ್ತೋತ್ರ ಮುಂತಾದ ಸ್ತೋತ್ರಪದ್ಯಗಳನ್ನು ಆಮೂಲಾಗ್ರವಾಗಿ ಶುದ್ಧವಾಗಿ ಹೇಳುತ್ತಿದ್ದನು. ಪಾಠಶಾಲೆಯ ಉಪಾಧ್ಯಾಯರನ್ನು ಕಂಡರಂತೂ ಮಾಧವನಿಗೆ ತುಂಬ ಭಕ್ತಿ. ಮನೆಯಿಂದ ಪಾಠಶಾಲೆಗೆ ಬರುವಾಗ ತಾಯಿ ತಂದೆಗಳ ಪಾದಕ್ಕೆ ನಮಸ್ಕರಿಸಿ ಮನೆಯ ದೇವ

ರಿಗೆ ವಂದಿಸಿ – ಹೊರಡುತ್ತಿದ್ದನು. ಮಠದಲ್ಲಿ ಉಪಾಧ್ಯಾಯರಿಗೆ ನಮಸ್ಕಾರ ಮಾಡಿ, ತನ್ನ ಪಾಠ ಪ್ರವಚನಗಳನ್ನು ಶ್ರದ್ಧಾಸಕ್ತಿಯಿಂದ ಕಲಿಯುತ್ತಿದ್ದನು. ಓರಗೆಯ ಹುಡುಗರಲ್ಲೆಲ್ಲಾ ಮಾಧವನು ಬಹಳ ಬುದ್ಧಿವಂತನೆನ್ನಿಸಿ ಕೊಂಡನು.

ಅವನಿಗೆ ಉಪನಯನವಾಯಿತು. ವೇದಾಭ್ಯಾಸವೂ ಪ್ರಾರಂಭವಾಯಿತು. ಹನ್ನೆರಡುವರುಷ ತುಂಬುವುದರೊಳಗಾಗಿಯೇ ಮಾಧವನು ಚತುರ್ವೇದಗಳನ್ನೂ ಅಲ್ಲದೆ, ಛಾಂದೋಗ್ಯ, ಬೃಹದಾರಣ್ಯಕ, ತೈತ್ತಿರೀಯ, ಐತರೇಯ, ಶ್ವೇತಾಶ್ವತರ, ಕೇನ, ಕಠ, ಈಶ, ಮುಂಡಕ – ಉಪನಿಷತ್ತುಗಳನ್ನೂ ಓದಿದನು. ಅವನು ಯಾವುದೊಂದು ಸೂತ್ರವನ್ನೇ ಆಗಲಿ ಉಪನಿಷದ್ವಾಕ್ಯವನ್ನೇ ಆಗಲಿ ಸ್ವತಂತ್ರ ಬುದ್ಧಿಯಿಂದ ಅರ್ಥಮಾಡಿ ವಿಮರ್ಶೆ ಮಾಡುತ್ತಿದ್ದನು.

ಮಾಧವನು ಐದು ವರ್ಷದ ಹುಡುಗನಾಗಿದ್ದಾಗಲೇ ಶ್ರೀಮತೀ ದೇವಿಯು ಇನ್ನೊಬ್ಬ ಮಗನನ್ನೂ ಪಡೆದಳು. ಅವನ ಹೆಸರು ಸಾಯಣ. ಇವನಿಗೆ ಮೂರು ವರುಷ ತುಂಬುವಾಗ, ಭೋಗನಾಥನೆಂಬ ಮಗನನ್ನೂ ಆಕೆ ಪಡೆದಳು. ಈ ಮೂವರು ಮಕ್ಕಳು ಅತ್ರಿ–ಅನಸೂಯಾ ದಂಪತಿಗಳ ಪರ್ಣಶಾಲೆಯಲ್ಲಿ ತ್ರಿಮೂರ್ತಿರೂಪರಾದ ಮೂವರು ಮಕ್ಕಳು ಬೆಳೆಯುತ್ತಿದ್ದಂತೆ ಕಾಣುತ್ತಿದ್ದರು. ಸಾಯಣನೂ ಅಣ್ಣನಂತೆಯೇ ಮೇಧಾವಿ, ಶ್ರದ್ಧಾವಂತ. ಭೋಗನಾಥನು ಅಷ್ಟೇನೂ ವಿದ್ಯಾಕಾಂಕ್ಷೆಯುಳ್ಳವನಂತೆ ಕಂಡು ಬರಲಿಲ್ಲ. ಅವನೂ ಕಷ್ಟಪಟ್ಟು ವಿದ್ಯಾಭ್ಯಾಸ ಮಾಡುತ್ತಿದ್ದನು. ವೃದ್ಧ ಮಾತಾ ಪಿತೃಗಳು ಈ ರತ್ನತ್ರಯವನ್ನು ಜತನದಿಂದ ಕಾಪಾಡುತ್ತಿದ್ದರು.

ಮಾಧವನಿಗೆ ಹದಿನಾರು ವರ್ಷ, ಸಾಯಣನಿಗೆ ಹನ್ನೆರಡು ವರ್ಷ. ಈ ಇಬ್ಬರೂ ಅಗ್ರಹಾರದ ಪಾಠಶಾಲೆಯಲ್ಲಿ ಕಲಿಯಬಹುದಾದ ಎಲ್ಲ ಶಾಸ್ತ್ರ ಪಾಠಗಳನ್ನೂ ಕಲಿತರು. ಅವರು ಬ್ರಹ್ಮಸೂತ್ರ, ಉಪನಿಷತ್ತು ಮತ್ತು ಭಗವದ್ಗೀತೆ – ಇವುಗಳನ್ನು ಶಾಸ್ತ್ರೀಯವಾಗಿ ಬೋಧಿಸಬಲ್ಲ ಸಮರ್ಥ ಗುರುವಿನ ಬಳಿ ಪಾಠವನ್ನು ಕಲಿಯಬೇಕೆಂದು ಆಲೋಚಿಸಿದರು. ವ್ಯಾಕರಣ, ಜ್ಯೋತಿಷ, ನಿರುಕ್ತ, ಕಲ್ಪ, ಛಂದಸ್ಸು, ಶಾಸ್ತ್ರಗಳಲ್ಲಿ ನಿಷ್ಣಾತರಾದರು.

ಪ್ರೌಢವಿದ್ಯಾ ವ್ಯಾಸಂಗಕ್ಕಾಗಿ ಗುರುಕುಲವಾಸವನ್ನು ಮಾಡಿ ಬಹು ಮುಖವಾದ ವಿದ್ವತ್ತೆಯನ್ನು ಸಾಧಿಸಬೇಕೆಂದು ಆ ಸಹೋದರರು ನಿಶ್ಚಯಿಸಿದರು.

ಆ ಕಾಲದಲ್ಲಿ ದಕ್ಷಿಣಾಪಥದಲ್ಲೆಲ್ಲಾ ಕಂಚಿ ಪಟ್ಟಣವು ಬಹಳ ಪ್ರಸಿದ್ಧವಾಗಿತ್ತು ; ವೈದಿಕ ವಿದ್ಯೆಯು ತವರುಮನೆಯಂತಿತ್ತು. ದಿಗ್ದಂತಿಗಳಾದ ಪಂಡಿತರು ಶಿಷ್ಯರಿಗೆ ಪಾಠ ಹೇಳುತ್ತ ಸನಾತನಧರ್ಮ ಸಂರಕ್ಷಕರಾಗಿದ್ದರು. ಅದ್ವೈತ, ದ್ವೈತ, ವಿಶಿಷ್ಟಾದ್ವೈತ ಸಿದ್ಧಾಂತಗಳಲ್ಲಿ ಅಸದೃಶರಾದ ಅನೇಕ ಪಂಡಿತರು ಅಲ್ಲಿದ್ದರು. ಅಂಥವರಲ್ಲಿ ಸರ್ವಜ್ಞ ವಿಷ್ಣುಭಟ್ಟರೆಂಬುವರೂ ಒಬ್ಬರು. ಅವರು ಮುಂದೆ ವಿದ್ಯಾತೀರ್ಥರೆಂಬ ಹೆಸರಿನಿಂದ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಕಂಚಿಯಲ್ಲಿರುವ ಕಾಮಕೋಟಿ ಪೀಠಾಧ್ಯಕ್ಷರಾಗಿಯೂ ಮತ್ತು ಶೃಂಗೇರಿಯ ಪೀಠಾಧೀಶ್ವರರಾಗಿಯೂ ಜಗದ್ಗುರುವೆನಿಸಿಕೊಂಡರು. ಅವರ ಬಳಿಯಲ್ಲಿ ಈ ಮೂವರು ಸಹೋದರರೂ ಶಿಷ್ಯರಾಗಿದ್ದುಕೊಂಡು ವಿವಿಧಶಾಸ್ತ್ರಗಳನ್ನು ಅಭ್ಯಾಸಮಾಡಿದರು. ಈ ಮಹಾ ಪಂಡಿತರೂ, ತಪಸ್ವಿಗಳೂ ಆದ ಗುರುವಿನ ಪ್ರಭಾವದಿಂದ ಶಿಷ್ಯರು ಸಮರ್ಥರೆನ್ನಿಸಿಕೊಂಡರು. ಮುಂದೆ ಒಂದು ಮಹಾ ಸಾಮ್ರಾಜ್ಯವನ್ನು ಸ್ಥಾಪಿಸುವುದರಲ್ಲಿ ನಿರತರಾದ ಮಾಧವ ಮತ್ತು ಸಾಯಣರಂಥ ರಾಜಕಾರಣ ಪುರುಷರನ್ನೂ, ಸನಾತನಧರ್ಮ ತ್ರಾಣರನ್ನೂ ಹದಗೊಳಿಸಿದ ಆ ಗುರುವಿನ ಜೀವನ ಚರಿತ್ರೆಯನ್ನು ಸ್ವಲ್ಪ ಮಟ್ಟಿಗೆ ತಿಳಿಯುವುದರಿಂದ ವಿದ್ಯಾರಣ್ಯರ ವ್ಯಕ್ತಿತ್ವ ಸ್ವರೂಪವನ್ನು ಅರಿಯಬಹುದು. ಒಂದು ವ್ಯಕ್ತಿಯ ಸಾಮರ್ಥ್ಯ ವೃದ್ಧಿಯಾಗಬೇಕಾದರೆ ಅವನಿಗೆ ಇರತಕ್ಕ ಸನ್ನಿವೇಶಗಳನ್ನು ಪರಿಗಣಿಸಬೇಕು. ಸನ್ನಿವೇಶಬಲದಿಂದ ವ್ಯಕ್ತಿಯ ಪ್ರಭಾ ಮಂಡಲ ದೇದೀಪ್ಯಮಾನವಾಗುತ್ತದೆ. "ಗುರುವಿನಂತೆ ಶಿಷ್ಯ" ಎಂಬ ಮಾತು ನಿಜ.

ವಿದ್ಯಾತೀರ್ಥರ ಸಮಗ್ರ ಜೀವನ ಪರಿಚಯ ಯಾವ ಗ್ರಂಥದಿಂದಲೂ ಸ್ಪಷ್ಟವಾಗಿ ಗೊತ್ತಾಗುವುದಿಲ್ಲ. ಕಂಚಿಯ ಮಠದ ಗುರುಪರಂಪರೆಯನ್ನು ಸ್ತುತಿಸಿರುವ "ಪುಣ್ಯಶ್ಲೋಕಮಂಜರಿ" ಯಿಂದಲೂ, ಮಾಧವರು (ವಿದ್ಯಾರಣ್ಯ) ರಚಿಸಿರುವ "ಸರ್ವದರ್ಶನ ಸಂಗ್ರಹ" ಎಂಬ ಗ್ರಂಥದಿಂದಲೂ ಕೆಲವು ಅಂಶಗಳು ತಿಳಿದುಬರುತ್ತವೆ. ಇವರ ಪೂರ್ವಾಶ್ರಮದ ಹೆಸರು ಸರ್ವಜ್ಞ ವಿಷ್ಣು. ತಂದೆಯ ಹೆಸರು ಶಾರ್ಙಪಾಣಿ. ಅವರ ಜನ್ಮಸ್ಥಳ ಬಿಲ್ವಾರಣ್ಯ.

ಕಂಚಿಯ ಪುರಾಧೀಶ್ವರರಾದ ಚಂದ್ರಶೇಖರ ಸ್ವಾಮಿಗಳಿಂದ ಇವರು ಸಂನ್ಯಾಸಾಶ್ರಮವನ್ನು ಸ್ವೀಕರಿಸಿದರು.

ವಿದ್ಯಾರಣ್ಯ ಇತಾರ್ಜವಾಣಿ ವಿನಯಃ ಸರ್ವಜ್ಞವಿಷ್ಣುಃ ಶ್ರಿಯನ್ ।
ಸಂನ್ಯಾಸಂ ಗುರು ಚಂದ್ರಶೇಖರ ಮುನೇರಾಸ್ಥಾಯ ಪೀಠೀಂ ಗುರೋಃ ॥
ಯೋಗೇಶಸ್ಯ ಚ ಚಕ್ರರಾಜವಸತೇರ್ದೇವ್ಯಾಶ್ಚ ಸಕ್ರೋಽರ್ಚನೆ ।
ಶ್ರೀಮನ್ಮಾಧವ ಬುಕ್ಕಭಾರತಿ ಯತಿ ವೃಷ್ಟ್ಯೈರ್ಮಹಿಷ್ಟ್ಯೈವೃತಃ ॥

ಎಂದು ಪುಣ್ಯಶ್ಲೋಕಮಂಜರಿಯ ಗ್ರಂಥದಿಂದ ತಿಳಿದುಬರುತ್ತದೆ. ಮಾಧವ ಬುಕ್ಕ ಭಾರತೀ ಯತಿಗಳಿಂದ ಸಂಪೂಜಿತರಾಗಿ ಶ್ರೀ ಚಕ್ರಾಧಿಷ್ಠಿತೆಯಾದ ತ್ರಿಪುರಸುಂದರೀ ದೇವಿಯ ಆರಾಧನೆಯನ್ನು ಮಾಡುತ್ತ ಪೀಠಾಧಿಕಾರವನ್ನು ನಡೆಯಿಸಿದರು.

ಇವರು ಪ್ರತಿವಾದಿಗಳನ್ನು ಜಯಿಸುವುದರಲ್ಲಿ ತರ್ಕಪ್ರವೀಣರಾಗಿದ್ದರು. ಕಾಮಕೋಟಿ ಪೀಠದ ಐವತ್ತೊಂದನೆಯ ಆಚಾರ್ಯರು. ಜನರು ಅವರನ್ನು ವಿದ್ಯೇಶ, ವಿದ್ಯಾನಂದ, ಸರ್ವಜ್ಞವಿಷ್ಣು, ವಿದ್ಯಾಶಂಕರ-ಎಂದು ಬೇರೆ ಬೇರೆ ಹೆಸರುಗಳಿಂದ ಸಂಬೋಧಿಸುತ್ತಿದ್ದರು. ಅವರ ಪಾಂಡಿತ್ಯ ವೈಭವವನ್ನು ಕಂಡು ವಿದ್ವಾಂಸರು ತಲೆದೂಗುತ್ತಿದ್ದರು. ಜಗದ್ಗುರು ರತ್ನಮಾಲಾ ಟೀಕೆಯಿಂದ ಇವರ ವಿಚಾರ ಸ್ವಲ್ಪ ಮಟ್ಟಿಗೆ ವ್ಯಕ್ತವಾಗುತ್ತದೆ. ಆಗಿನ ಕಾಲದಲ್ಲಿ ಕಂಚಿ ಕರ್ಣಾಟಕ ಸಮ್ರಾಟರ ಉಪರಾಜಧಾನಿಯಾಗಿತ್ತು. ವಿದ್ಯಾತೀರ್ಥರು ಶೃಂಗೇರಿಯ ಗುರುಪೀಠವನ್ನು ಆರೋಪಣಮಾಡಿ "ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ" ಎಂಬ ಬಿರುದನ್ನು ಆ ಗುರುಪರಂಪರೆಗೆ ಗಳಿಸಿಕೊಟ್ಟರು. ಇವರು ಹುಟ್ಟುಕನ್ನಡಿಗರೆಂದೂ, ಕರ್ಣಾಟಕದಲ್ಲಿ ವಿಶೇಷ ಅಭಿಮಾನಶಾಲಿಗಳೆಂದೂ ಇತಿಹಾಸದಿಂದ ಧ್ವನಿತವಾಗುತ್ತದೆ. ಇಂಥ ಗುರುವಿನ ಬಳಿಯಲ್ಲಿ ವಿದ್ಯಾಭ್ಯಾಸಮಾಡುತ್ತಿದ್ದ ಮಾಧವ, ಸಾಯಣರು ಸಹಜವಾಗಿಯೇ ದೇಶಾಭಿಮಾನಿಗಳಾಗುತ್ತಿದ್ದರು. ಅವರು ಎಲ್ಲಾ ಶಾಸ್ತ್ರಗಳನ್ನೂ ಶಿಷ್ಯರಿಗೆ ಕೂಲಂಕಷವಾಗಿ ಬೋಧಿಸುತ್ತಿದ್ದು, ಯತ್ಯಾಶ್ರಮ ಸ್ವೀಕಾರ ಮಾಡಿದಮೇಲೆ, ಅದ್ವೈತಸಿದ್ಧಾಂತವನ್ನು ಮಾಧವ ಸಾಯಣರಿಗೆ ಕಲಿಸಿದರು.

ವಿದ್ಯಾತೀರ್ಥರು ೭೩ ವರ್ಷಕಾಲ ಕಂಚಿಯ ಕಾಮಕೋಟಿ ಪೀಠಾಧ್ಯಕ್ಷರಾಗಿದ್ದರು. ಅವರು ಸನಾತನಧರ್ಮ ಪರಿಪಾಲನೆಗಾಗಿ ಎಂಟು ಮಂದಿ ಶಿಷ್ಯರುಗಳನ್ನು ಮಠದ ಆಡಳಿತಗಳಲ್ಲಿ ನಿಯಮಿಸಿ ಶಂಕರಾನಂದರೆಂಬ ಶಿಷ್ಯನೊಂದಿಗೆ ಹಿಮಾಲಯ ಪರ್ವತಕ್ಕೆ ಹೋಗಿ ಅಲ್ಲಿ ೧೫ ವರ್ಷಗಳ ಕಾಲ ಉಗ್ರ ತಪಸ್ಸನ್ನು ಮಾಡಿದರೆಂದು ಪುಣ್ಯಶ್ಲೋಕಮಂಜರಿಯಿಂದ ದೃಢಪಡುತ್ತದೆ.

ಮಾಧವರಿಗೆ ತಮ್ಮ ಗುರುವಿನಲ್ಲಿ ಅತ್ಯಂತ ಭಕ್ತಿ ಗೌರವಗಳಿದ್ದುವು. ತಾವು ಬರೆದಿರುವ ಅನೇಕ ಗ್ರಂಥಗಳಲ್ಲಿ ವಿದ್ಯಾತೀರ್ಥರನ್ನು ಬಹುವಾಗಿ ಪ್ರಶಂಸಿಸಿದ್ದಾರೆ. ಅವರು ಗುರುವನ್ನು ಸಾಕ್ಷಾತ್ ಪರಮೇಶ್ವರನೆಂದು ಭಾವಿಸಿ ಗೌರವಿಸುತ್ತಿದ್ದರು. ವೇದಗಳು ಯಾರನ್ನು ಅಂತರಾತ್ಮನೆಂದೂ, ಲೋಕಶಿಕ್ಷಕನೆಂದೂ ಸರ್ವಾಂತರ್ಯಾಮಿಯೆಂದೂ ಹೊಗಳುತ್ತಿವೆಯೋ ಅಂಥ ಮುಖ್ಯಗುರು ವಿದ್ಯಾತೀರ್ಥಮಹೇಶ್ವರನು ನಮ್ಮನ್ನು ಕಾಪಾಡಲಿ—ಎಂದು ವಿದ್ಯಾರಣ್ಯರು ತಮ್ಮ ಅನುಭೂತಿಪ್ರಕಾಶದಲ್ಲಿ ಬರೆದಿದ್ದಾರೆ.

ವಿದ್ಯಾರಣ್ಯರು ಗುರು ಶುಶ್ರೂಷೆಯನ್ನು ಮಾಡುವುದರಲ್ಲಿ ಎಲ್ಲ ಶಿಷ್ಯರಿಗಿಂತ ಮುಂದಾಗಿರುತ್ತಿದ್ದರು. "ವಿದ್ಯಾತೀರ್ಥ ಗುರುವಿನ ಶುಶ್ರೂಷೆಗಿಂತ ರುಚಿಯಾದುದು ಒಂದೂ ಇಲ್ಲ. ಆ ವಿದ್ಯಾತೀರ್ಥ ಪಾದಸೇವೆಯು ಈ ಮೂಲಕ ಆಗಲಿ" ಎಂದು ಅವರು ತಮ್ಮ ಒಂದು ಗ್ರಂಥದಲ್ಲಿ ಗುರುಭಕ್ತಿಯನ್ನು ಸಮರ್ಪಿಸಿದ್ದಾರೆ. ದೇವರಲ್ಲಿ ಅಚಲವಾದ ಭಕ್ತಿಭಾವವನ್ನಿಟ್ಟುಕೊಂಡಿರುವಂತೆಯೇ ಗುರುವಿನಲ್ಲಿಯೂ ಭಕ್ತಿಯಿಟ್ಟಿರಬೇಕು. ದೇವರನ್ನು ಪೂಜಿಸುವಂತೆ ಗುರುವನ್ನು ಪೂಜಿಸಬೇಕು. ಭೋಗ ಮತ್ತು ಮೋಕ್ಷಗಳನ್ನು ಸಾಧಿಸಲು ಆಚರಿಸಬೇಕಾದ ಎಲ್ಲ ಸತ್ಕ್ರಿಯೆಗಳಿಗೂ ಗುರುವೇ ಮೂಲ. ಆದ್ದರಿಂದ ಮೋಕ್ಷಾಪೇಕ್ಷಿಗಳು ಯಾವಾಗಲೂ ಗುರುವನ್ನು ಆಶ್ರಯಿಸಿ ಅವನ ಸೇವೆಯಿಂದ ಕೃತಾರ್ಥರಾಗಬೇಕು. ಗುರುವೇ ಬ್ರಹ್ಮ, ಗುರುವೇ ವಿಷ್ಣು, ಗುರುವೇ ಮಹೇಶ್ವರ – ಗುರುವೇ ಸಾಕ್ಷಾತ್ ಪರಬ್ರಹ್ಮ. ಆದ್ದರಿಂದ ಆ ಶ್ರೀ ಗುರುವನ್ನು ಶರಣುಹೋಗಬೇಕು. ಗುರುವಿನ ಅನುಗ್ರಹದಿಂದ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವು. ಪತ್ನಿಗೆ ಪತಿಯೇ ಪರದೈವಸ್ವರೂಪ. ಹಾಗೆಯೇ ಶಿಷ್ಯನಿಗೆ ಗುರುವೇ ದೇವತಾ ಸ್ವರೂಪ. ನಮ್ಮ

ಅಜ್ಞಾನವನ್ನು ದೂರಮಾಡಿ ನಮ್ಮ ಜ್ಞಾನಚಕ್ಷುವನ್ನು ತೆರಳಿಸಿ ನಮ್ಮನ್ನು ಉದ್ಧಾರಮಾಡುವ ಶಕ್ತನಾಗಿದ್ದಾನೆ ಆ ಗುರು. ಗುರುವಿನ ಶಕ್ತಿ ಅನ್ಯಾದೃಶವಾದುದು. ಗುರು ತಂದೆಗೆ ಸಮಾನ. ಅವನು ಭವಸಾಗರೋತ್ತಾರಕನು. ಶಿಷ್ಯನಲ್ಲಿರುವ ಪಾಶವೀ ಶಕ್ತಿಯನ್ನು ದೈವಶಕ್ತಿಯಾಗಿ ಮಾರ್ಪಡಿಸಿ–ಭಗವಂತನ ನಿಜಸ್ವರೂಪವನ್ನು ಬೋಧಿಸತಕ್ಕವನು ಗುರುವೇ–ಎಂದು ವಿದ್ಯಾರಣ್ಯರು ಗುರುವಿನ ಮಹತ್ವವನ್ನು ಚೆನ್ನಾಗಿ ತಿಳಿದಿದ್ದರಲ್ಲದೆ–ತಮ್ಮ ಸಹಪಾಠಿಗಳಿಗೆ ಆಗಾಗ ಗುರುಭಕ್ತಿಯನ್ನು ಕುರಿತು ಬೋಧಪ್ರದವಾದ ಉಪದೇಶವನ್ನು ಮಾಡುತ್ತಿದ್ದರು. ವಿದ್ಯಾತೀರ್ಥರು ವಿದ್ಯಾರಣ್ಯರಿಗೆ ಮುಖ್ಯ ಗುರುವಾಗಿದ್ದಂತೆಯೇ ಭಾರತೀ ಕೃಷ್ಣತೀರ್ಥರು ಎರಡನೆಯ ಗುರುವಾಗಿದ್ದರು. ಅವರನ್ನು ಜನರು ಭಾರತೀ ತೀರ್ಥರೆಂದೂ ಆನಂದಾತ್ಮ ಸರಸ್ವತೀ ಎಂದೂ ಕರೆಯುತ್ತಿದ್ದರು.

ಭಾರತೀ ತೀರ್ಥರು ಘನ ವಿದ್ವಾಂಸರು; ಅಸಾಧಾರಣ ವಾಗ್ಮಿಗಳು, ಮಹಾ ಪಂಡಿತರು. ಅವರು ವೇದಾಂತ ಪಂಚದಶೀ, ವೈಯಾಸಿಕ ನ್ಯಾಯಮಾಲೆ ಮತ್ತು ದೃಗ್ದೃಶ್ಯ ವಿವೇಕ – ಎಂಬ ಗ್ರಂಥಗಳನ್ನು ಬರೆದಿದ್ದಾರೆ. ಇಂಥ ಸಮರ್ಥರಾದ ಗುರುಗಳಲ್ಲಿ ವಿದ್ಯಾರಣ್ಯರು ವಿದ್ಯಾಭ್ಯಾಸಮಾಡಿದ್ದರಿಂದಲೇ ಅವರು ಉತ್ತಮೋತ್ತಮ ಪಾಂಡಿತ್ಯವನ್ನು ಗಳಿಸಿ ಪ್ರಸಿದ್ಧರಾದರು.

ಮೂರನೆಯವರಾದ ಶ್ರೀ ಶಂಕರಾನಂದರು ವಿದ್ಯಾರಣ್ಯರ ಗುರು. ಅವರು ಮಹಾ ತಪಸ್ವಿಗಳು; ದೊಡ್ಡ ಪಂಡಿತರು. ಇವರ ಪೂರ್ವಾಶ್ರಮದ ಹೆಸರು ಮಹೇಶ. ಇವರು ತಂಜಾವೂರು ಜಿಲ್ಲೆಯಲ್ಲಿರುವ ತಿರುವಡೈಮರದೂರ್ ಎಂದರೆ ಮಧ್ಯಾರ್ಜುನ ಎಂಬ ಗ್ರಾಮದಲ್ಲಿ ಹುಟ್ಟಿದರು. ಅವರ ತಂದೆಯ ಹೆಸರು ಬಾಲಚಂದ್ರಮುಖಿ. ಅವರು ವಿದ್ಯಾತೀರ್ಥರ ಪಟ್ಟಶಿಷ್ಯರು. ಅವರ ಆಪ್ತ ಶಿಷ್ಯರೂ ಆಗಿದ್ದರು. ಕೊನೆಗೆ ಅವರಿಂದಲೇ ಸಂನ್ಯಾಸವನ್ನು ಸ್ವೀಕರಿಸಿ – ಅವರ ಸಂಗಡ ಹಿಮಾಲಯಕ್ಕೆ ಹೋಗಿದ್ದರು. ವಿದ್ಯಾತೀರ್ಥರ ತರುವಾಯ ಕಂಚಿಯ ಕಾಮಕೋಟಿ ಪೀಠಕ್ಕೆ ಇವರೇ ಗುರುಗಳಾದರು. ಇವರು ವಿದ್ಯಾತೀರ್ಥರ ಅಪ್ಪಣೆಯಮೇರೆಗೆ ಕರ್ನಾಟಕದಲ್ಲಿ ಅದ್ವೈತಮತ ಪ್ರಚಾರಕ್ಕಾಗಿ ಸಚ್ಚಿದಾನಂದರೇ ಮೊದಲಾದ ಎಂಟುಮಂದಿಗಳನ್ನು ಬೇರೆ ಬೇರೆ ಮಠಗಳಿಗೆ ನಿಯಮಿಸಿ ತಾವು ಕಂಚಿಯ ಮಠದಲ್ಲಿದ್ದು

ಕೊಂಡು ಈ ಅಷ್ಟಮಠಗಳ ಒಡೆಯರಾಗಿದ್ದರು. ಅವರು ಶಿವ ವಿಷ್ಣು ಅಭೇದವನ್ನು ಜನರಿಗೆ ಬೋಧಿಸುತ್ತಿದ್ದರು. ಅಲ್ಲದೆ ಅವರು ತಮ್ಮ ಯೋಗ ಬಲದಿಂದ ಕಂಚಿಯ ವರದರಾಜ ವಿಗ್ರಹವನ್ನು ಶಿವನರೂಪವಾಗಿ ಕಾಣಿಸುವಂತೆ ಮಾಡಿದರೆಂದು ಅನೂಚಾನವಾಗಿ ಬಂದ ಸಂಗತಿಯೊಂದಿದೆ. ಇವರು ಅನೇಕ ಉದ್ಗ್ರಂಥಗಳನ್ನು ಬರೆದಿದ್ದಾರೆ. ಅವುಗಳಲ್ಲಿ ವಿವೇಕಸಾರ ಮತ್ತು ಗೀತಾವ್ಯಾಖ್ಯಾನ – ಇವು ಮುಖ್ಯ. ಇವರು ವೇದಾಂತ ಶಾಸ್ತ್ರದಲ್ಲಿ ಸಂಪೂರ್ಣ ಪಾಂಡಿತ್ಯವನ್ನು ಗಳಿಸಿದ್ದರು.

ಶ್ರೀಕಂಠನಾಥ ಎಂಬುವರು ವಿದ್ಯಾರಣ್ಯರ ಗುರುವರ್ಗದಲ್ಲಿ ಒಬ್ಬರು. ಇವರು ಅದ್ವೈತ ವಿದ್ವಾಂಸರು. ವಿದ್ಯಾರಣ್ಯರ ತಮ್ಮ ಭೋಗನಾಥನು ತನ್ನ 'ಮಹಾಗಣಪತಿಸ್ತವ'ದಲ್ಲಿ ಶ್ರೀಕಂಠನಾಥರನ್ನು ಧ್ಯಾನಿಸಿದ್ದಾನೆ. ಈ ಗುರುವಿನಲ್ಲಿ ವಿದ್ಯಾರಣ್ಯ ಸಹೋದರರು ಶೈವಧರ್ಮ ಸ್ವರೂಪವನ್ನು ಕೂಲಂಕಷವಾಗಿ ತಿಳಿದುಕೊಂಡರು. ಹೀಗೆ, ವಿದ್ಯಾತೀರ್ಥರು, ಭಾರತೀ ತೀರ್ಥರು, ಶಂಕರಾನಂದರು ಮತ್ತು ಶ್ರೀಕಂಠನಾಥರು – ಎಂಬ ಈ ಗುರುಗಳ ಬಳಿಯಲ್ಲಿ ವಿದ್ಯಾರಣ್ಯ, ಸಾಯಣ ಮತ್ತು ಭೋಗನಾಥರು ವಿವಿಧಶಾಸ್ತ್ರಗಳನ್ನು ಕರತಲಾಮಲಕವಾಗಿ ಅಭ್ಯಾಸ ಮಾಡಿ ಪಂಡಿತರಾದರು. ಈ ಮೂವರು ಸಹೋದರರೂ ಗುರುಕುಲವಾಸದಲ್ಲಿದ್ದಾಗ ಶಾಸ್ತ್ರಾಭ್ಯಾಸವನ್ನು ಮಾಡುವುದರಲ್ಲಿ ಆಸಕ್ತರಾಗಿದ್ದಾಗ್ಯೂ ದೇಶದ ಪರಿಸ್ಥಿತಿಯನ್ನು ಅರಿತು ಕೊಳ್ಳುತ್ತಿದ್ದರು. ಆ ಕಾಲದಲ್ಲಿ ವಿಧರ್ಮಿಗಳಿಂದ ಆಗಾಗ ಹಿಂದೂಗಳಿಗೆ ಒದಗುತ್ತಿದ್ದ ತೊಂದರೆಗಳನ್ನು ನಿವಾರಿಸುವುದರಲ್ಲಿ ಮಾಧವರು ವೀರನಂತೆ ಮುಂದೆ ನುಗ್ಗುತ್ತಿದ್ದರು. ಒಂದು ಸಂಧ್ಯಾಕಾಲದಲ್ಲಿ ಅಂತೇವಾಸಿಗಳು ಕಂಚಿ ಪಟ್ಟಣದ ಸಮೀಪದ ಬಯಲಿನಲ್ಲಿ ಆಡುತ್ತಿದ್ದಾಗ ನಾಲ್ಕೈದುಜನ ವಿಧರ್ಮೀಯರು ಒಬ್ಬ ಹಿಂದೂ ಯುವತಿಯನ್ನು ಸುತ್ತುಗಟ್ಟಿಕೊಂಡು ಅವಳನ್ನು ಅಪಹರಿಸಿಕೊಂಡು ಹೋಗಲು ಹವಣಿಸುತ್ತಿದ್ದರು. ಕಾಗೆಗಳ ಗುಂಪಿನಲ್ಲಿ ಸಿಕ್ಕಿದ್ದ ಕೋಗಿಲೆಯ ಮರಿಯಂತೆ ಆಕೆ ರೋದನಮಾಡುತ್ತ ಗಟ್ಟಿಯಾಗಿ ಕೂಗಿಕೊಳ್ಳುತ್ತಿದ್ದಳು. ಅವಳ ರೋದನ ಧ್ವನಿಯು ಮಾಧವರಿಗೆ ಕೇಳಿಸಿತು. ಅವರು ಕೂಡಲೇ ತಮ್ಮ ಸಹಪಾಠಿಗಳೊಂದಿಗೆ ಆ ಎಡೆಗೆ ಧಾವಿಸಿಬಂದರು. ತಾವು ಉಟ್ಟಿದ್ದ ಪಂಚೆಯನ್ನು ಎತ್ತಿಕಟ್ಟಿ, ತಮ್ಮ ಉತ್ತರೀಯವನ್ನು ತಲೆಗೆ

ಸುತ್ತಿ ತೊಡೆಯನ್ನು ತಟ್ಟುತ್ತ ಆ ಪಾಪಿಗಳ ಮಧ್ಯೆ ತುಪಾಕಿಯ ಗುಂಡು ನುಗ್ಗಿದಂತೆ ನುಗ್ಗಿಯೇ ಬಿಟ್ಟರು. ಅವರಲ್ಲಿ ಒಬ್ಬನನ್ನು ಹಿಡಿದು ಬೆನ್ನಿನ ಮೇಲೆ ಗುದ್ದಿ ಕೆಳಕ್ಕೆ ತಳ್ಳಿ ಉಳಿದ ನಾಲ್ವರನ್ನು ಹಿಂದಕ್ಕೆ ನೂಕಿ ಆ ಹೆಂಗಸಿಗೆ ಅಡ್ಡವಾಗಿ ನರಸಿಂಹನಂತೆ ನಿಂತರು. ಆ ತುರುಷ್ಕರು ಆ ಬ್ರಾಹ್ಮಣನನ್ನು ಕಂಡು ನಗುತ್ತ — ಮೇಲ್ಬಾಯ್ದು ಬಂದರು. ಮಾಧವರಿಗೆ ಬಲವಾದ ಪೆಟ್ಟುಗಳನ್ನು ಕೊಟ್ಟರು. ಅವರು ಆ ಏಟುಗಳಿಗೆ ಅಂಜದೆ, ತಮ್ಮ ಶಕ್ತಿಯನ್ನೆಲ್ಲ ಪ್ರಯೋಗಿಸಿ ಗೊತ್ತು ಗುರಿಯಿಲ್ಲದೆ ಆ ಧೂರ್ತರಿಗೆ ಬಿಸಿ ಮುಟ್ಟಿಸಿದರು. ಆ ಐದು ಜನಗಳನ್ನು ಎದುರಿಸಿ ಒಬ್ಬರೇ ಎಷ್ಟುಹೊತ್ತು ಹೊಡೆದಾಡಿಯಾರು! ಆ ವೇಳೆಗೆ ಸಾಯಣನೂ ಇನ್ನುಳಿದ ಸ್ನೇಹಿತರೂ ಓಡಿ ಬಂದು ಮಾಧವರಿಗೆ ಬೆಂಬಲವಾಗಿ ನಿಂತರು. ಬ್ರಾಹ್ಮಣರ ಪೆಟ್ಟು ಬಲವಾಯಿತು. ತುರುಷ್ಕರು ಪಲಾಯನಸೂತ್ರವನ್ನು ಪಠಿಸಿದರು. ಹಿಂದೂ ಹೆಂಗಸಿನ ಮಾನ ಉಳಿಯಿತು. ಈ ಸುದ್ದಿ ಊರಲ್ಲೆಲ್ಲಾ ಹಬ್ಬಿತು. ಅನೇಕ ಹಿಂದುಗಳು ಮಠದ ಹತ್ತಿರಕ್ಕೆ ಬಂದು ಮಾಧವರ ಸಾಹಸವನ್ನು ಕೊಂಡಾಡಿ ಬ್ರಾಹ್ಮಣರಾದರೂ ಇಂಥ ವೀರಬ್ರಾಹ್ಮಣರಾಗಿರಬೇಕು - ಎಂದು ಪ್ರಶಂಸಿಸುತ್ತ ಹೊರಟುಹೋದರು. ವಿದ್ಯಾತೀರ್ಥರಿಗೂ ಈ ಸಮಾಚಾರ ತಿಳಿಯಿತು. ಅವರು ಸಂತೋಷಪಟ್ಟರು. ಮರುದಿನ ಸಂಜೆ ಪಾಠಹೇಳುತ್ತಿದ್ದಾಗ, ವಿದ್ಯಾತೀರ್ಥರು —

ಮಾಧವ, ನೀನು ನಿನ್ನೆಯದಿನ ಆ ಅನಾಥ ಹಿಂದೂ ಯುವತಿಯನ್ನು ಕುಲಘಾತುಕರ ಹಿಡಿತದಿಂದ ಬಿಡಿಸಿ, ಅವಳ ಮಾನಸಂರಕ್ಷಣೆ ಮಾಡಿದ್ದು ಒಳ್ಳೆಯದಾಯಿತು. ಕರ್ನಾಟಕದಲ್ಲಿ ದಿನಬೆಳಗಾದರೆ ಇಂಥ ದುಷ್ಪ್ರಸಂಗಗಳು ನಡೆಯುತ್ತಲೇ ಇರುತ್ತವೆ. ಹಿಂದುಗಳು ನಿರ್ವೀರ್ಯರಾಗಿ ಹೋಗಿದ್ದಾರೆ. ತಮ್ಮ ಹೆಂಗಸರು ಮಕ್ಕಳ ಮಾನ ಪ್ರಾಣಗಳನ್ನು ಕಾಪಾಡಿಕೊಳ್ಳಲು ಶಕ್ತಿಯಿಲ್ಲದ ಹೇಡಿಗಳಾಗಿದ್ದಾರೆ. ನೀನು ಬ್ರಾಹ್ಮಣನಾದರೂ ಧೈರ್ಯದಿಂದ ಆ ಧಾಂಡಿಗರಮೇಲೆ ಬಿದ್ದು ನಿರ್ಭಯನಾಗಿ ಹೊಡೆದಾಡಿದುದನ್ನು ಕೇಳಿ ನನಗೆ ತುಂಬ ಸಂತೋಷವಾಯಿತು. ಎಂದಿನವರೆಗೆ ನಮ್ಮ ಧರ್ಮ, ಸಂಸ್ಕೃತಿ ಮತ್ತು ಸ್ತ್ರೀಯರ ಮಾನ ಗೌರವಗಳನ್ನು ಉಳಿಸುವುದರಲ್ಲಿ ನಾವು ಉದಾಸೀನರಾಗಿರುತ್ತೇವೆಯೋ ಅಂದಿನವರೆಗೂ ನಮ್ಮ ಉದ್ಧಾರ

ವಾಗುವುದಿಲ್ಲ. ನಿನ್ನಂಥ ತೇಜಸ್ವಿಯಾದ ಹಿಂದೂ ಯುವಕರು ದೇಶ ಸೇವೆಗೆ ನಿಲ್ಲಬೇಕು.

ಶ್ರೀಕಂಠನಾಥರು:—ಮಾಧವನೇನು ಸಾಮಾನ್ಯನಲ್ಲ. ಬ್ರಹ್ಮ ತೇಜಸ್ಸು, ಕ್ಷತ್ರಿಯ ಬಲ—ಇವೆರಡೂ ಮಾಧವನಲ್ಲಿ ತುಂಬಿವೆ. ದ್ವಾಪರ ಯುಗದ ದ್ರೋಣಾಚಾರ್ಯರಂತೆ ಮಾಧವನು ರಾಜಕಾರಣಜ್ಞನೇ ಅಲ್ಲದೆ ಬಲಶಾಲಿಯೂ ಆಗಿದ್ದಾನೆ. ತರುಣರ ಶಕ್ತಿಯನ್ನು ಒಮ್ಮುಖವಾಗಿ ತಿರು ಗಿಸಿ ಯಾವ ಕೆಲಸವನ್ನಾದರೂ ಸರಿಯೆ ಯುಕ್ತಿಯಿಂದ ಸಾಧಿಸಬಲ್ಲ ಚತುರನೂ ಆಗಿದ್ದಾನೆ. ಪರರ ಸಂಕಟಗಳನ್ನು ಪರಿಹರಿಸುವುದರಲ್ಲಿ ಅವ ನಿಗೆ ಅತ್ಯಾನಂದ. ನಿನ್ನೆಯ ದಿನ ತಾನೊಬ್ಬನೇ ಆ ಯವನರ ಮೃಗಗಳ ಮಧ್ಯೆ ನುಗ್ಗಿ ಪ್ರಾಣಭಯವೇ ಇಲ್ಲದ ಹಾಗೆ ಹೊಡೆದಾಡಿದ್ದರಿಂದಲೇ ಇನ್ನುಳಿದ ಬ್ರಾಹ್ಮಣ ಸಹಚಾರಿಗಳೂ ಧೈರ್ಯವಾಗಿ ನುಗ್ಗಿ ಆ ಕಿರಾತರನ್ನು ಹೊಡೆ ದೋಡಿಸಿದರು. ಮತ್ತು ಆ ಯುವತಿಯ ಮಾನಸಂರಕ್ಷಣೆ ಮಾಡಿದರು.

ಮಾಧವ:—ಅದಲ್ಲವೂ ಗುರುಗಳಾದ ನಿಮ್ಮ ಆಶೀರ್ವಾದ ಬಲ. ನನ್ನಿಂದ ಏನೂ ಸಹಾಯವಾಗಿಲ್ಲ. ಸನಾತನಧರ್ಮಪ್ರಾಣರಾದ ತಮ್ಮಿಂದ ಇಂದು ನಮ್ಮ ಧರ್ಮ ಉಳಿಯಬೇಕಾಗಿದೆ.

ವಿದ್ಯಾತೀರ್ಥರು:—ತಪೋನಿಷ್ಠರಾದ ಬ್ರಾಹ್ಮಣರ ಆಶೀರ್ವಾದಬಲ ದಿಂದ ಸಪ್ತಸಮುದ್ರಗಳನ್ನು ಆಪೋಶನ ಮಾಡಬಹುದು. ಸಪ್ತಕುಲ ಪರ್ವತಗಳನ್ನು ಅಲ್ಲಾಡಿಸಬಹುದು. ಸಪ್ತಋಷಿಮಂಡಲವನ್ನು ಸ್ಥಾನ ಪಲ್ಲಟ ಮಾಡಬಹುದು. ಶ್ರೀಕಂಠನಾಥರೇ! ನೀವು ಹೇಳಿದಹಾಗೆ ನಮ್ಮ ಚಿರಂಜೀವಿ ಮಾಧವನ ಮತ್ತು ಅವನ ಸಂಗಡಿಗರಾದ ಜಯತೀರ್ಥ ಮತ್ತು ವೇದಾಂತ ದೇಶಿಕ—ಇವರೆಲ್ಲರ ಶಕ್ತಿ ಸಾಹಸಗಳನ್ನು ಎಷ್ಟು ಹೊಗಳಿದರೂ ಸಾಲದು. ಬ್ರಾಹ್ಮಣಪುತ್ರರಾದ ಇವರು ಎಷ್ಟೊಂದು ಧೈರ್ಯದಿಂದ ಆ ದುಷ್ಕರ್ಮಿಗಳನ್ನು ಎದುರಿಸಿರುವರು! ನಮ್ಮ ಕನ್ನಡಿಗರಲ್ಲಿ ಸಾಹಸವಿಲ್ಲ ವೆಂದು ಹೇಳುವಂತಿಲ್ಲ. ಸದ್ಗುಣಗಳಿಲ್ಲವೆಂದು ಹೇಳುವಂತಿಲ್ಲ. ಕಾಲ ಮಹಿಮೆಯಿಂದ ಇವರು ಅಂತಃಕಲಹಗಳಿಗೆ ಗುರಿಯಾಗಿ ಹೀನಸ್ಥಿತಿಗೆ ಬಂದಿರುವರು. ಇವರಲ್ಲಿ ಒಗ್ಗಟ್ಟು, ಅಭಿಮಾನ, ದೈವಭಕ್ತಿ – ಮೊದಲಿ ನಂತೆಯೇ ಮೂಡಿದರೆ ಸಾಕು, ಅವರನ್ನು ಎದುರಿಸಿ ನಿಲ್ಲಬಲ್ಲವರೇ ಇರಲಾ

ರರು. ಮಾಧವನು ಮುಂದೆ ಮಹಾನಾಯಕನಾಗಿ ನಿಲ್ಲುವ ಪ್ರಸಂಗ ಬಂದರೂ ಬರಬಹುದು. ಅವನು ಕರ್ಣಾಟಕ ಸಾಮ್ರಾಜ್ಯವನ್ನು ಕಟ್ಟಲೂ ಬಹುದು. ಆದರೆ ಇಂಥ ಗುರುತರವಾದ ಕಾರ್ಯವನ್ನು ಸಾಧಿಸಬೇಕಾದರೆ ಮಾಧವನು ತಪಸ್ಸನ್ನಾಚರಿಸಿ ಚಿತ್ತಸಂಯಮವನ್ನು ಸಾಧಿಸಬೇಕು.

ಮಾಧವ :—ಗುರುವಿನ ಅಪ್ಪಣೆಯಂತೆ ನಾನು ತಪಸ್ಸನ್ನು ಆಚರಿಸಿ ಆತ್ಮಬಲವನ್ನು ಪಡೆಯುವೆನು.

ಶ್ರೀಕಂಠನಾಥರು :—ತಪಸ್ಸಿನಿಂದ ಸಾಧಿಸಲಾರದ ಇಷ್ಟಾರ್ಥವೇನಿರುವುದು! ತಪಸ್ಸಿನ ಪ್ರಭಾವದಿಂದ ಬ್ರಹ್ಮನು ಸೃಷ್ಟಿಕ್ರಮವನ್ನು ಅರಿತನು. ನಾರಾಯಣನು ದಶಾವತಾರಗಳನ್ನು ಎತ್ತಿ ದಾನವರನ್ನು ಸಂಹಾರ ಮಾಡಿದನು. ಮಹೇಶ್ವರನು ಗಿರಿಜಾದೇವಿಯನ್ನು ಪಡೆದನು. ವಿಶ್ವಾಮಿತ್ರನು ಪ್ರತಿಸೃಷ್ಟಿಯನ್ನು ಮಾಡಲು ಶಕ್ತನಾದನು. ತಪಸ್ಸಿನ ಶಕ್ತಿಯನ್ನು ಅರಿಯಲು ಸಾಧ್ಯವೆ! ಈಗ ಮಾಧವನಾದರೂ ತಪಸ್ಸನ್ನಾಚರಿಸಿ ಆತ್ಮತೇಜೋಬಲದಿಂದ ಕರ್ಣಾಟಕವನ್ನು ಉದ್ಧರಿಸಬಹುದು.

ವಿದ್ಯಾತೀರ್ಥರು :—ಕನ್ನಡಿಗರಲ್ಲಿ ದಿನದಿನಕ್ಕೆ ಹೆಚ್ಚುತ್ತಿರುವ ನೀಚಸ್ವಾರ್ಥಪರತೆ ಹೇಡಿತನ, ಸ್ವಾಭಿಮಾನ ಶೂನ್ಯತೆ, ಆಲಸ್ಯ, ಸ್ವಚ್ಛಂದ ವೃತ್ತಿ ಮುಂತಾದ ಆತ್ಮಘಾತಕಗುಣಗಳನ್ನು ಹೋಗಲಾಡಿಸಿ ಅವರಲ್ಲಿ ಶೌರ್ಯ ಅಭಿಮಾನಗಳನ್ನು ತುಂಬಿಸಲು ಮಾಧವನು ಸರ್ವಶಕ್ತನಾಗಿದ್ದಾನೆ.

ಮಾಧವ :—ಗುರುಗಳು ತಿಳಿಸಿದಂತೆ ನಡೆಯುತ್ತೇನೆ.

ವಿದ್ಯಾತೀರ್ಥರು :—ಮಾಧವ, ವಿಚಾರವಂತನಾದವನು ಪರಧರ್ಮಗಳನ್ನು ಎಂದೂ ನಿಂದಿಸಬಾರದು. ಎಲ್ಲ ಧರ್ಮಗಳೂ ಜೀವರ ಉದ್ಧಾರಕ್ಕಾಗಿಯೇ ಉದಯಿಸಿರುತ್ತವೆ. ಅವುಗಳ ಮೂಲ ತತ್ತ್ವ ಒಂದೇ ಆದರೂ ದೇಶ ಕಾಲ ಪರಿಸ್ಥಿತಿಗಳಿಗನುಸರಿಸಿ ಅವುಗಳ ಬಾಹ್ಯಸ್ವರೂಪಗಳು ಮಾತ್ರ ಭಿನ್ನವಾಗಿರುತ್ತವೆ. ಲೋಕಹಿತವನ್ನು ಸಾಧಿಸಬಯಸುವವನು ಪರಧರ್ಮಸಹಿಷ್ಣುವಾಗಿರಬೇಕು. ಅದರಿಂದ ಲೋಕಕ್ಕೆ ಶುಭವಾಗುವದು. ಈ ಮಾತನ್ನು ನೀನು ಸದಾ ಜ್ಞಾಪಕದಲ್ಲಿಡಬೇಕು.

ಶ್ರೀಕಂಠನಾಥರು :—ಪೂಜ್ಯರೇ, ಈ ಕಂಚೀಪಟ್ಟಣ ಕರ್ಣಾಟಕದ ಉಪರಾಜಧಾನಿಯಾಗಿರುವುದರಿಂದ, ನಮಗೆ ಆಗಾಗ ರಾಜಕೀಯ ಸ್ಥಿತಿಗತಿ

ಗಳು ತಿಳಿಯುತ್ತಲೇ ಇವೆ. ಅಲ್ಲದೆ ಶೃಂಗೇರಿಯಿಂದ ಬರುವ ವರ್ತಮಾನ ಗಳಿಂದಲೂ ನಾಡಿನ ಭೀಕರ ಪರಿಸ್ಥಿತಿಯು ಗೊತ್ತಾಗುತ್ತದೆ. ದೆಹಲಿಯ ಸಮ್ರಾಟನಾದ ಮಹಮದ್ ತೊಗಲಕನ ಹಾವಳಿಯಿಂದ ಕರ್ಣಾಟಕ ರಾಜ ಮನೆತನಗಳು ನಿರ್ಬಲವಾಗಿರುವುವು. ಅವನ ಅಣ್ಣನ ಮಗನಾದ ಬಹಾ ಉದ್ದೀನನು ದಂಗೆ ಎದ್ದು ಅವನನ್ನು ದ್ವೇಷಿಸುತ್ತಿರುವನಲ್ಲದೆ, ಅವನು ಈಗ ಆನೆಗೊಂದಿಯ ಪ್ರಭು ಜಂಬುಕೇಶ್ವರರಾಯನ ಮರೆಹೊಕ್ಕಿರುವನು. ಇನ್ನು ಯಾವಹೊತ್ತಿಗೆ ಏನು ವಿಪತ್ತು ಆ ತೊಗಲಕನಿಂದ ಆನೆಗೊಂದಿ ರಾಜ್ಯಕ್ಕೆ ಸಂಭವಿಸುತ್ತದೆಯೋ ದೇವರೇ ಬಲ್ಲ.

ವಿದ್ಯಾತೀರ್ಥರು :—ಕ್ಷಾತ್ರತೇಜೋಬಲಕ್ಕೆ ಬ್ರಹ್ಮತೇಜಸ್ಸನ್ನು ಜೊತೆ ಗೂಡಿಸಿ ರಾಜ್ಯವಿಪ್ಲವವನ್ನು ತಡೆಗಟ್ಟಿ ರಾಷ್ಟ್ರೋನ್ನತಿಯನ್ನು ಸಾಧಿಸಲು ಮಾಧವನು ಸರ್ವಯೋಗ್ಯನಾಗಿದ್ದಾನೆ. ಮಾಧವಾ, ಧರ್ಮರಕ್ಷಣಕಾರ್ಯಕ್ಕೆ ಉದ್ಯುಕ್ತನಾಗು. ತಪಸ್ಸನ್ನಾಚರಿಸಿ ಆತ್ಮಬಲವನ್ನು ಹೊಂದು. ಕರ್ಣಾಟಕ ಮಾತೆಯಾದ ಶ್ರೀ ಭುವನೇಶ್ವರೀದೇವಿಯನ್ನು ಆರಾಧಿಸಿ ಕೃತಕಾರ್ಯನಾಗು. ಸಕಲ ಶಾಸ್ತ್ರಗಳನ್ನೂ ನೀನು ಕಲಿತಾಯಿತು. ನಿನ್ನ ಸಹೋದರರಿಬ್ಬರೂ ನಿನಗೆ ಬಾಹುದ್ವಯವಾಗಿರುವರು. ನಿನಗೆ ಶುಭವಾಗಲಿ.

ಮಾಧವ :—ಪೂಜ್ಯರೆ, ಅನುಗೃಹೀತನಾದೆನು. ಸಕಾಲದಲ್ಲಿ ನಾನು ಗುರುದಕ್ಷಿಣೆಯನ್ನು ತಮ್ಮ ಪಾದಸನ್ನಿಧಿಯಲ್ಲಿ ಸಮರ್ಪಿಸುವೆನು.

ವಿದ್ಯಾತೀರ್ಥರು :—ವತ್ಸಾ ! ನೀನು ಕೀರ್ತಿಶಾಲಿಯಾಗಿ ಬಾಳುವುದೇ ನನಗೆ ಗುರುದಕ್ಷಿಣೆ.

ಅಷ್ಟು ಹೊತ್ತಿಗೆ ಸಂಜೆಯಾಯಿತು. ಆ ರಾತ್ರಿಯೆಲ್ಲಾ ಮಾಧವನ ಮನಸ್ಸಿನಲ್ಲಿ ಏನೇನೋ ಯೋಚನೆಗಳು ತಲೆದೋರಿದುವು. ತಮ್ಮ ಸಾಯಣ ನೊಂದಿಗೆ ಮುಂದಿನ ಜೀವನರೀತಿಗಳನ್ನು ಸ್ಥೂಲವಾಗಿ ಗೊತ್ತುಮಾಡಿಕೊಂ ಡನು. ಅಲ್ಲಿಗೆ ಗುರುಕುಲವಾಸ ಮುಗಿಯುತ್ತ ಬಂತು. ತನ್ನ ಬಾಲ್ಯ ಸ್ನೇಹಿತರಾದ ವೇದಾಂತದೇಶಿಕ ಮತ್ತು ಜಯತೀರ್ಥರನ್ನು ಬಿಟ್ಟುಹೋಗ ಬೇಕೆಂದು ಆತನು ಬಹಳವಾಗಿ ಮರುಗಿದನು. ಕಳೆದ ಹನ್ನೆರಡು ವರ್ಷ ಗಳಿಂದಲೂ ಅವರು ಅಣ್ಣತಮ್ಮಂದಿರಂತೆ ನಡೆದುಕೊಂಡಿದ್ದರು. ಅವರೆಲ್ಲರೂ ಸ್ವಮತ ಸಿದ್ಧಾಂತಗಳನ್ನೂ ಚೆನ್ನಾಗಿ ಅರಿತು ವಿದ್ಯಾಪಾರಂಗತರಾಗಿದ್ದರು.

ಅವರೆಲ್ಲರೂ ಇನ್ನು ಕೆಲವು ದಿನಗಳಲ್ಲಿಯೇ ತಮ್ಮ ತಮ್ಮ ಸ್ವಸ್ಥಾನಗಳಿಗೆ ಹೋಗಬೇಕಾಗಿತ್ತು.

ಮಾಧವನು ಗುರುಗಳ ಅಪ್ಪಣೆಯನ್ನು ಪಡೆದು ತಮ್ಮಂದಿರೊಂದಿಗೆ ಪಂಪಾ ಕ್ಷೇತ್ರಕ್ಕೆ ಹಿಂದಿರುಗಿಹೋಗಬೇಕಾದ ದಿನವೂ ಬಂತು. ಅವನು ಆ ಓಸ ಗುರುಗಳ ಪಾದಕ್ಕೆ ನಮಸ್ಕಾರ ಮಾಡಿ, ಅವರಿಂದ ಆಶೀರ್ವಾದವನ್ನು ಪಡೆದು ಸಾಯಣ – ಭೋಗನಾಥರ ಸಂಗಡ ಸ್ವಗ್ರಾಮಾಭಿಮುಖವಾಗಿ ಹೊರಟನು. ಲೌಕಿಕ ವ್ಯಾಪಾರಗಳಿಗೆ ಸಿಕ್ಕದೆ ವೈರಾಗ್ಯಸಂಪನ್ನರಾಗಿದ್ದ ವಿದ್ಯಾತೀರ್ಥರು ಪ್ರಿಯಶಿಷ್ಯರ ಅಗಲುವಿಕೆಯಿಂದ ಕಣ್ಣಿನಲ್ಲಿ ನೀರು ತಂದುಕೊಂಡರು. "ಮುಂದೆ ಯಾವಾಗಲಾದರೂ ಅವಶ್ಯಕತೆಯೊದಗಿದರೆ ತಮ್ಮನ್ನು ಪಂಪಾಕ್ಷೇತ್ರಕ್ಕೆ ಬಿಜಯಂಗೈಸಿಕೊಳ್ಳುವೆನು" ಎಂದು ಮಾಧವನು ವಿದ್ಯಾತೀರ್ಥರಿಗೆ ತಿಳಿಸಿ – ಎಲ್ಲ ಗುರುಗಳ ಅನುಮತಿಯನ್ನೂ ಪಡೆದು ಹೊರಟು ಬಂದನು.

ಆ ಸಹೋದರರು ದಾರಿಯಲ್ಲಿ ಅನೇಕ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ ಅಲ್ಲಿ ದೇವತಾಕೈಂಕರ್ಯಗಳನ್ನು ನೆರವೇರಿಸುತ್ತ, ಅನೇಕ ವಿದ್ವಾಂಸರೊಂದಿಗೆ ಸುಖಸಂಕಥಾಗೋಷ್ಠಿಗಳಲ್ಲಿ ಕಾಲಕಳೆಯುತ್ತ ಪ್ರಯಾಣ ಮಾಡುತ್ತಿದ್ದರು. ಮಾರ್ಗದಲ್ಲಿ ಸಿಕ್ಕಿದ ಪುಣ್ಯತೀರ್ಥಗಳಲ್ಲಿಯೂ ಪುಣ್ಯನದಿಗಳಲ್ಲಿಯೂ ಮಿಂದು ಆತ್ಮೋಲ್ಲಾಸವನ್ನು ಪಡೆಯುತ್ತಿದ್ದರು. ಹೀಗೆ ಅವರು ಸುಮಾರು ಒಂಬತ್ತು ತಿಂಗಳಕಾಲ ಪ್ರಯಾಣಮಾಡಿ ಪಂಪಾಕ್ಷೇತ್ರವನ್ನು ಸೇರಿದರು.

ವಿದ್ಯಾಭೂಷಿತರಾಗಿ ಬಂದ ಮಕ್ಕಳನ್ನು ಕಂಡು ವೃದ್ಧ ಮಾತಾಪಿತೃಗಳು ಅತ್ಯಾನಂದಪಟ್ಟರು. ಆಗ ಮಾಧವನಿಗೆ ಸುಮಾರು ಮೂವತ್ತೆರಡು ವರ್ಷ ವಯಸ್ಸು. ಸಂಸಾರದಲ್ಲಿ ದಾರಿದ್ರ್ಯ ತುಂಬಿತ್ತು. ತಂದೆ ಮಾಯಣನಿಂದ ಸಂಪಾದನೆ ಮಾಡುವುದಕ್ಕೆ ಸಾಧ್ಯವಿರಲಿಲ್ಲ. ಹಿರಿಯ ಮಗ ಮಾಧವನೇ ಕುಟುಂಬ ರಕ್ಷಣೆಯ ಭಾರವನ್ನು ವಹಿಸಬೇಕಾಯಿತು. ವಿದ್ಯಾವ್ಯಾಸಂಗವೇನೋ ಸಾಂಗೋಪಾಂಗವಾಗಿ ನಡೆಯಿತು. ಆದರೇನು ! ಆ ವಿದ್ಯೆಯಿಂದ ಅವನು ಜೀವನೋಪಾಯವನ್ನು ಕಲ್ಪಿಸಿಕೊಳ್ಳಲು ಅನುಕೂಲವಾಗಲಿಲ್ಲ. ಅವನು ಕಲಿತ ವಿದ್ಯೆಗೆ ಪ್ರೋತ್ಸಾಹವೇ ಇರಲಿಲ್ಲ. "ವಿನಾಶ್ರಯೇಣ ನ ಶೋಭಂತೆ ಪಂಡಿತಾ ವನಿತಾ ಲತಾಃ" ಎಂಬಂತೆ ಆಶ್ರಯದಾತ

ರಿಲ್ಲದಮೇಲೆ ಪಾಂಡಿತ್ಯವೂ, ಲತೆಯೂ, ಸ್ತ್ರೀಯೂ ಶೋಭಿಸುವುದಿಲ್ಲ. ಹೊಟ್ಟೆ ಬಟ್ಟೆಗಳಿಗೆ ನೆರವಾಗದ ವಿದ್ಯೆ ಒಂದು ಖಂಡುಗವಷ್ಟು ಇದ್ದರೇನು ಇಲ್ಲದಿದ್ದರೇನು ? ಅವನು ತನ್ನ ಸ್ವಂತ ಸುಖಕ್ಕಾಗಿ ಕ್ಷಣಕಾಲವೂ ಯೋಚಿಸಿದವನಲ್ಲ. ಆದರೆ ತನ್ನ ಜನ್ಮದಾತರಾದ ಜನನೀಜನಕರ ಸಂರಕ್ಷಣೆ ಮಾಡುವ ಉಪಾಯವೇ ತೋರದೆ ಚಿಂತಿಸುತ್ತಿದ್ದನು. ಈ ಚಿಕ್ಕ ಸಂಸಾರವನ್ನು ನಿರ್ವಹಿಸಲು ಶಕ್ತಿ ಇಲ್ಲದೆ ಪರಿತಪಿಸುತ್ತಿದ್ದ ಮಾಧವನು ಇನ್ನು ಬೃಹತ್ಸಂಸಾರವನ್ನು ಕಟ್ಟಿಕೊಳ್ಳಲು ಸಾಧ್ಯವೆ ? ಯಾರಾದರೊಬ್ಬ ರಾಜನ ಆಶ್ರಯವನ್ನು ಹೊಂದಿ ತನ್ನ ಪಾಂಡಿತ್ಯಪ್ರಭಾವದಿಂದ ಜೀವನವನ್ನು ಸಾಗಿಸಬಹುದೆಂದರೆ ಆ ಕಾಲದಲ್ಲಿ ಪಾಂಡಿತ್ಯವನ್ನು ಮನ್ನಿಸಿ ರಾಜಾಶ್ರಯವನ್ನು ನೀಡಬಲ್ಲ ಸಮರ್ಥರಾದ ಕರ್ಣಾಟಕ ರಾಜರುಗಳೇ ಇರಲಿಲ್ಲ. ಎಲ್ಲೆಲ್ಲೂ ರಾಜ್ಯವಿಪ್ಲವ ; ಜನಕ್ಷೋಭೆ—ತುಂಬಿದ್ದವು. ಈ ಕಷ್ಟ ಕಾರ್ಪಣ್ಯಗಳಲ್ಲಿ ಸಂಸಾರವನ್ನು ಸಾಗಿಸುತ್ತಿದ್ದರೂ, ಮಾಧವನು ಯಾರೊಬ್ಬರನ್ನೂ ಯಾಚಿಸುವ ಸ್ವಭಾವದವನಾಗಿರಲಿಲ್ಲ. ಸ್ವಾಭಿಮಾನಿಯಾದವನು ಪರರನ್ನು ಯಾಚಿಸಲು ನಾಚಿಕೆಪಡುತ್ತಾನೆ. ದಾನವನ್ನು ಸ್ವೀಕರಿಸುವ ಅಧಿಕಾರ ವೇದಾಧ್ಯಯನ ಸಂಪನ್ನನಾದ ಬ್ರಾಹ್ಮಣನಿಗಿರುವುದಾದರೂ ಭಿಕ್ಷಾವೃತ್ತಿಯನ್ನು ಮಾಡಬೇಕೆಂಬ ನಿಯಮವಂತೂ ಇಲ್ಲ.

ಹೀಗೆಯೇ ಕೆಲವು ಕಾಲ ಕಳೆಯಿತು. ಆ ಸಮಯದಲ್ಲಿ ಚಾಲುಕ್ಯ ರಾಜನ ಮಂತ್ರಿಯಾಗಿದ್ದ ವೀತಿಹೋತ್ರಿಯು ತನ್ನ ಮಗಳಾದ ವೈತಿಹೋತ್ರಿಯನ್ನು ಮಾಧವನಿಗೆ ಕೊಟ್ಟು ವಿವಾಹ ಮಾಡಿದನು. ಹೆಂಡತಿಯೂ ಮನೆಗೆ ಬಂದಳು. ಅವಳ ಜೊತೆಯಲ್ಲಿ ಯಾವುದೊಂದು ಭಾಗ್ಯವೂ ಮನೆಗೆ ಬರಲಿಲ್ಲ. ಸಂಸಾರ ಜೀವನದಲ್ಲಿ ಹೆಂಡತಿಯೂ ಬಂದು ಸೇರಿದ್ದರಿಂದ ಮಾಧವನಿಗೆ ಇದ್ದ ಚಿಂತೆ ದ್ವಿಗುಣವಾಯಿತು. ಹಾಗೂ ಹೀಗೂ ಬಡತನದಲ್ಲಿಯೇ ಸಂಸಾರ ನಡೆಯುತ್ತಿತ್ತು.

ಒಂದೆರಡು ವರ್ಷಗಳು ಕಳೆದವು ಸತ್ಕುಲಪ್ರಸೂತೆಯಾದ ಕನ್ಯೆಯನ್ನು ತಂದು ಮಾಧವನು ತಮ್ಮ ಸಾಯಣನಿಗೂ ಮದುವೆ ಮಾಡಿದನು. ದಿನದಿನಕ್ಕೆ ಸಂಸಾರ ಹೆಚ್ಚುತ್ತ ಬಂತು. ಕಾಲಕ್ರಮದಲ್ಲಿ ಸಾಯಣನಿಗೆ ಕೆಂಪಣ್ಣ, ಮಾಯಣ್ಣ, ಶಿಂಗಣ್ಣ ಎಂಬ ಮೂವರು ಗಂಡುಮಕ್ಕಳಾದರು.

ಸಂಸಾರದಲ್ಲಿ ಬಡತನವಿದ್ದರೂ, ಸದಾಚಾರ ಮತ್ತು ಸತ್ಕರ್ಮನಿಷ್ಠೆಗಳು ತುಂಬಿದ್ದುವು. ಅಣ್ಣತಮ್ಮಂದಿರು ಯಾವಾಗಲೂ ಶಾಸ್ತ್ರಾಭ್ಯಾಸ, ವೇದಾಂತ ಪರಿಚಯ, ವಿದ್ವಜ್ಜನ ಗೋಷ್ಠಿಗಳಲ್ಲಿ ಕಾಲ ಕಳೆಯುತ್ತ ಅನೇಕ ಗ್ರಂಥ ಗಳನ್ನೂ ಬರೆಯುತ್ತಿದ್ದರು. ಸಾರಸ್ವತ ಸಂಪತ್ತು ಅಭ್ಯುದಯವಾಗುತ್ತಿತ್ತು. ಅವರು ಅನೇಕ ಶಿಷ್ಯರಿಗೆ ಪಾಠ ಹೇಳುತ್ತಿದ್ದರು. ಅವರ ಮನೆ ಗುರುಕುಲ ವಾಗಿತ್ತು.

ಹೀಗಿರಲು ತಂದೆ ಮಾಯಣನು ಕಾಲವಾದನು. ಇದರಿಂದ ಸಂಸಾ ರಕ್ಕೆ ಬರಸಿಡಿಲು ಬಡಿದಂತಾಯಿತು. ವೃದ್ಧ ಮಾತೆ ಶ್ರೀಮತೀದೇವಿ ವಿಧವೆಯಾದಳು. ಇಷ್ಟೊಂದು ಕಷ್ಟಗಳ ಮಧ್ಯದಲ್ಲಿ ಸಿಕ್ಕಿ ತೊಂದರೆ ಪಡು ತ್ತಿದ್ದರೂ, ಮಾಧವನ ಮನಸ್ಸು ಸದಾ ದೇಶೋನ್ನತಿಯ ವಿಚಾರದಲ್ಲಿಯೇ ಲೀನವಾಗಿತ್ತು.

ಕಿರಿಯ ತಮ್ಮ ಭೋಗನಾಥನು ಒಳ್ಳೆಯ ರಸಿಕ: ಶೃಂಗಾರಪ್ರಿಯ. ಅವನು ಯಾವಾಗಲೂ ಆನಂದಮಯ ಜೀವಿಯಾಗಿದ್ದನು. ತನಗಿಂತ ಹಿರಿ ಯರಾದ ಇಬ್ಬರು ಅಣ್ಣಂದಿರು ಸಂಸಾರ ಭಾರವನ್ನು ನಿರ್ವಹಿಸುವ ಹೊರೆ ಯನ್ನು ಹೊತ್ತಿದ್ದುದರಿಂದ ಅವನು ಕವಿಶೇಖರನಂತೆ ಕಾಲಕಳೆಯುತ್ತಿದ್ದನು. ಅವನಿಗೂ ಮದುವೆಯಾಗಿತ್ತು. ಒಂದೇ ಕುಟುಂಬದಲ್ಲಿ ವಾಸಿಸುತ್ತಿದ್ದರು. ವೈತಿಹೋತ್ರೀ ದೇವಿಯು ಮೈದುನರನ್ನೂ ಓರಗಿತ್ತಿಯರನ್ನೂ ಪ್ರೀತಿಯಿಂದ ಕಾಣುತ್ತಿದ್ದಳು. ಅವಳು ಗೃಹಲಕ್ಷ್ಮಿಯಂತೆ ಪತಿಸೇವಾಪರಾಯಣಳಾಗಿ ಮಾಧವನ ಮನೋವಲ್ಲಭೆಯಾಗಿದ್ದಳು.

ಮಾಧವನು ಶ್ರೀ ಭುವನೇಶ್ವರೀ ದೇವಿಯನ್ನು ಕುರಿತು ತಪಸ್ಸು ಮಾಡಿ ದನು. ಆದರೂ ಅವನ ಇಷ್ಟಾರ್ಥ ನೆರವೇರಲಿಲ್ಲ. ಕಾಲಚಕ್ರದ ತಿರುವಿ ನಲ್ಲಿ ವರ್ಷಗಳ ಮೇಲೆ ವರ್ಷಗಳು ಕಳೆದುಹೋದುವು ! ಅವನಿಗೆ ಅರು ವತ್ತುಮೂರು ವರ್ಷ ವಯಸ್ಸಾಯಿತು. ಅವನ ಸಂಕಲ್ಪ ಕನಸಾಗಿಯೇ ಉಳಿಯಿತು. ಕ್ರಿ. ಶ. ೧೩೩೧ನೆಯ ಇಸವಿ. ಶಾಲಿವಾಹನಶಕ ೧೨೫೩ನೆಯ ವರ್ಷ. ಕಾರ್ತೀಕ ಮಾಸ ; ಪೂರ್ಣಿಮೆಯ ದಿನ ಅವನು ರಾತ್ರಿ ಹೇಮ ಕೂಟಾಚಲದಲ್ಲಿ ಭಾವಸಮಾಧಿ ಮಗ್ನನಾಗಿದ್ದಾಗ ದಿವ್ಯ ಸಂದರ್ಶನ ದೃಶ್ಯ ವೊಂದನ್ನು ಕಂಡನು ಅಂದಿನಿಂದ ಅವನು ಸಂಸಾರದಲ್ಲಿ ವಿರಕ್ತನಾದನು.

ಸಂನ್ಯಾಸಾಶ್ರಮವನ್ನು ಸ್ವೀಕರಿಸಬೇಕೆಂದು ನಿಶ್ಚಯಿಸಿದನು.

ಆ ಕಾಲದಲ್ಲಿ ವಿದ್ಯಾತೀರ್ಥರು ಕಂಚಿಯ ಕಾಮಕೋಟಿ ಪೀಠಾಧ್ಯಕ್ಷರಾಗಿಯೂ ಶೃಂಗೇರಿಯ ಪೀಠಾಧೀಶ್ವರರಾಗಿಯೂ ಇದ್ದರೆಂದು ಹಿಂದೆಯೇ ಹೇಳಿದೆಯಷ್ಟೆ. ಆ ಉಭಯ ಮಠಗಳ ಆಡಳಿತವನ್ನು ತಾವೊಬ್ಬರೇ ನಿರ್ವಹಿಸಲು ಸಾಧ್ಯವಾಗದೆಯಿದ್ದುದರಿಂದ ಶೃಂಗೇರಿಯ ಪೀಠಾಧಿಕಾರವನ್ನು ಭಾರತೀ ತೀರ್ಥರಿಗೆ ವಹಿಸಿದ್ದರು. ಅವರು ಇನ್ನೂ ಜೀವಂತರಾಗಿರುವಾಗಲೇ ಆ ಪೀಠ ತುಂಬ ಹೀನಸ್ಥಿತಿಯಲ್ಲಿತ್ತು. ವಿದ್ಯಾತೀರ್ಥರು ಮಾಧವನ ಪಾಂಡಿತ್ಯವನ್ನೂ ಪ್ರತಿಭೆಯನ್ನೂ ಕಂಡು ಅವನನ್ನು ಶೃಂಗೇರಿಯ ಪೀಠಕ್ಕೆ ಗುರುವಾಗಬೇಕೆಂದು ಕೇಳಿದರು. ಗುರುವಿನ ಆಜ್ಞಾಬದ್ಧನಾಗಿ ಮಾಧವನು ಸಂನ್ಯಾಸಾಶ್ರಮವನ್ನು ಸ್ವೀಕರಿಸಿದನು. ಆತನು ಆಶ್ರಮಸ್ವೀಕಾರ ಮಾಡಿದ ಮೇಲೆ ವಿದ್ಯಾರಣ್ಯರೆಂಬ ಹೆಸರಿನಿಂದ ಪ್ರಸಿದ್ಧರಾದರು. ಭಾರತೀತೀರ್ಥರು ಮುಖ್ಯಗುರುವಾಗಿ ಶೃಂಗೇರಿಯಲ್ಲಿದ್ದಾಗ ವಿದ್ಯಾರಣ್ಯರು ಯುವ ಸ್ವಾಮಿಗಳಾಗಿದ್ದುಕೊಂಡು ಪಂಪಾಕ್ಷೇತ್ರದಲ್ಲಿಯೇ ಹೆಚ್ಚುಕಾಲ ಕಳೆಯುತ್ತಿದ್ದರು. ಆಗಾಗ ಶೃಂಗೇರಿಗೆ ಹೋಗಿಬರುತ್ತಿದ್ದರು.

ವಿದ್ಯಾರಣ್ಯರು ಸಂಸಾರ ನಿರ್ಲಿಪ್ತರಾಗಿ ಪರಿವ್ರಾಜಕರಾದರು. ಅವರಿಗೆ ಆಗ ಅರುವತ್ತುಮೂರು ವರ್ಷ ತುಂಬಿತ್ತು. ಆ ಇಳಿವಯಸ್ಸಿನಲ್ಲಿಯೂ ಅವರ ಮುಖದಮೇಲ ತೇಜಸ್ಸು ತಾಂಡವವಾಡುತ್ತಿತ್ತು. ಕಾವಿಯ ವಸ್ತ್ರಗಳಿಂದ ಅಲಂಕೃತವಾಗಿದ್ದ ಅವರ ದೇಹ ಸುವರ್ಣ ಸಂಪುಟದಂತೆ ಕಾಣುತ್ತಿತ್ತು. ಅವರು ಸಂಸಾರವನ್ನು ಬಿಟ್ಟು ತಮ್ಮ ಇಬ್ಬರು ಶಿಷ್ಯರೊಂದಿಗೆ ಶ್ರೀ ಭುವನೇಶ್ವರೀ ದೇವಾಲಯದ ಬಳಿಯಲ್ಲಿಯೇ ಮತ್ತೊಂದು ಪರ್ಣಶಾಲೆಯಲ್ಲಿ ತಪಸ್ಸು ಮಾಡುತ್ತಿದ್ದರು.

ಒಂದು ದಿನ ವಿದ್ಯಾರಣ್ಯರು ತಪೋವನದಲ್ಲಿ ಕುಳಿತುಕೊಂಡು ಶಿಷ್ಯರಿಗೆ ಧರ್ಮಶಾಸ್ತ್ರ ಪಾಠವನ್ನು ಬೋಧಿಸುತ್ತಿದ್ದರು. ಆ ಸಮಯಕ್ಕೆ ಸರಿಯಾಗಿ ಇಬ್ಬರು ರಾಜಭಟರು ಆ ಮಾರ್ಗವಾಗಿ ಹೋಗುತ್ತ ಶ್ರೀ ಭುವನೇಶ್ವರಿಯ ದರ್ಶನಮಾಡಲು ಅಲ್ಲಿಗೆ ಬಂದರು. ವಿದ್ಯಾರಣ್ಯರ ಪರ್ಣಶಾಲೆಯೂ ಆ ದೇವಾಲಯಕ್ಕೆ ಸಮೀಪವಾಗಿಯೇ ಎದುರುಗಡೆಯಲ್ಲಿದ್ದಿತು. ದೇವಾಲಯಕ್ಕೆ ಬಂದು ಹೋಗಬಹುದಾದವರೆಲ್ಲರೂ ಪರ್ಣಶಾಲೆಯ ಮುಂಭಾಗದ

ಆಲದ ಮರದ ಕಟ್ಟೆಯಮೇಲೆ ಮಂಡಿಸಿ ಪಾಠಹೇಳುತ್ತಿದ್ದ ವಿದ್ಯಾರಣ್ಯರಿಗೆ ಕಾಣಿಸುತ್ತಿದ್ದರು. ಆ ಇಬ್ಬರೂ ಕುದುರೆಯ ಸವಾರರು. ಅವರು ತಮ್ಮ ಕುದುರೆಗಳನ್ನು ಅಲ್ಲಿಯೇ ಒಂದು ಮರದ ನೆರಳಿನಲ್ಲಿ ಕಟ್ಟಿಹಾಕಿ, ಅಲ್ಲಿ ಬೆಳೆದಿದ್ದ ಎಳೆ ಗರಿಕೆಯ ಹುಲ್ಲನ್ನು ಕಿತ್ತು ಅವುಗಳ ಮುಂದೆ ಹಾಕಿದ್ದರು. ದೇವಿಯ ದರ್ಶನಮಾಡಿಕೊಂಡು ಹಿಂತಿರುಗುವಾಗ ಅವರು ಎದುರಾಗಿ ಪರ್ಣಶಾಲೆಯ ಮುಂಭಾಗದಲ್ಲಿ ಕುಳಿತಿದ್ದ ವಿದ್ಯಾರಣ್ಯರನ್ನೂ ಅವರ ಶಿಷ್ಯರನ್ನೂ ಕಂಡು ಭಕ್ತಿಯಿಂದ ಆಯೆಡೆಗೆ ಹೋಗಿ ಆ ತಪಸ್ವಿಯ ಮುಂದೆ ಅಡ್ಡಬಿದ್ದರು.

ವಿದ್ಯಾರಣ್ಯರು :—ಅಯ್ಯಾ, ಎಲ್ಲಿಂದ ಬಂದಿರಿ. ನಿಮಗೆ ಶುಭವಾಗಲಿ.

ರಾಜಭಟ :—ಗುರುದೇವ ! ನಾವು ಆನೆಗೊಂದಿಯಿಂದ ಬಂದವು. ಈಗ ದ್ವಾರಸಮುದ್ರಕ್ಕೆ ಹೋಗುತ್ತಿದ್ದೇವೆ.

ವಿದ್ಯಾರಣ್ಯರು :—ಅಂಥ ರಾಜಕಾರ್ಯವೇನೆಂಬುದನ್ನು ನಾವು ಕೇಳಿ ತಿಳಿಯಬಹುದೆ ?

ರಾಜಭಟ :—ಸ್ವಾಮಿ ! ನಾವು ಒಂದು ಗುರುತರವಾದ ರಾಜಕಾರ್ಯಕ್ಕಾಗಿಯೇ ಹೊರಟಿರುವೆವು. ಸರ್ವಸಂಗ ಪರಿತ್ಯಾಗಿಗಳಾದ ತಮಗೆ ಅದನ್ನು ಬಿನ್ನವಿಸುವುದರಿಂದ ಪ್ರಮಾದವೇನೂ ಆಗಲಾರದಷ್ಟೆ !

ವಿದ್ಯಾರಣ್ಯರು :—ಕಾಷಾಯಾಂಬರವನ್ನು ಧರಿಸಿ ಕೈಯಲ್ಲಿ ಯೋಗದಂಡ, ಜಪಮಾಲೆಗಳನ್ನು ಹಿಡಿದಿರುವ ನಮ್ಮಂಥ ಬ್ರಾಹ್ಮಣರಿಗೆ ಹೇಳುವುದರಿಂದ ನಿಮಗೆ ಯಾವುದೊಂದು ಅಪಾಯವೂ ಆಗಲಾರದು.

ರಾಜಭಟ :—ಗುರುದೇವ ! ಆನೆಗೊಂದಿಯ ಜಂಬುಕೇಶ್ವರರಾಯನು ಈಗ ಒಂದು ವಿಪತ್ತಿಗೆ ಒಳಗಾಗಿರುವನು. ಉತ್ತರದ ಕಡೆಯಿಂದ ಮುಸಲ್ಮಾನರ ದಂಡು ಬಂದು ಆನೆಗೊಂದಿಯನ್ನು ಮುತ್ತಿ ಯುದ್ಧ ಹೂಡಬಹುದಾದ ಸಂದರ್ಭವಿದೆ. ಈ ಸಮಯದಲ್ಲಿ ನೆರವಾಗುವಂತೆ ನಮ್ಮ ಪ್ರಭು ದ್ವಾರಸಮುದ್ರದ ಅರಸರಿಗೆ ಪತ್ರಬರೆದುಕೊಟ್ಟಿದ್ದಾರೆ. ಆ ಪತ್ರವನ್ನು ತೆಗೆದುಕೊಂಡು ನಾವು ಈಗ ಬಲ್ಲಾಳ ಭೂಪಾಲನ ಬಳಿಗೆ ಹೋಗುತ್ತಿದ್ದೇವೆ.

ವಿದ್ಯಾರಣ್ಯರು :—ಜಂಬುಕೇಶ್ವರ ರಾಯನಿಗೆ ಸಾಕಾದಷ್ಟು ಸೈನ್ಯ

ಬಲವಿರುವದಾಗಿ ನಾವು ಕೇಳಿದ್ದೇವೆ. ಅಲ್ಲದೆ ಮುಸಲ್ಮಾನರು ಇಷ್ಟುದೂರದ ವರೆಗೂ ಬಂದು ಆನೆಗೊಂದಿ ರಾಜ್ಯವನ್ನು ಹಿಡಿಯಲು ಯೋಚಿಸಿರುವರೆ!

ರಾಜಭಟ :—ಆ ಸಂಸ್ಕೃತಿಹೀನರಿಗೆ ದೂರವೇನು? ಹತ್ತಿರವೇನು? ನಮ್ಮ ರಾಜ್ಯದಲ್ಲಿ ಸುಸಜ್ಜಿತವಾದ ಸೈನ್ಯವೇನೋ ಸಿದ್ಧವಾಗಿದೆ. ಆದರೆ, ಇಡಿಯ ದಕ್ಷಿಣಾಪಥವನ್ನೆಲ್ಲಾ ಜಯಿಸಬೇಕೆಂಬ ಹೆಬ್ಬಯಕೆಯಿಂದ ಪ್ರವಾಹ ದಂತೆ ನುಗ್ಗಿಬರುವ ಆ ದಂಡನ್ನು ಎದುರಿಸಬೇಕಾದರೆ ಅಗಾಧವಾದ ಸಿದ್ಧತೆ ಯನ್ನು ಮುಂದಾಗಿಯೇ ಮಾಡಿಕೊಂಡಿರಬೇಕು.

ವಿದ್ಯಾರಣ್ಯರು :—ಅದು ರಾಜನೀತಿಯೇ ಸರಿ. ಇಂಥ ಸಮಯದಲ್ಲಿ ಎಲ್ಲ ಕನ್ನಡ ದೊರೆಗಳೂ ಒಂದಾಗಿ ನಿಂತರೆ ಶತ್ರುವನ್ನು ಹಣ್ಣುಮಾಡ ಬಹುದು.

ರಾಜಭಟ :—ಅಯ್ಯೋ! ಏನು ಹೇಳಲಿ. ನಮ್ಮವರಲ್ಲಿ ಐಕಮತ್ಯ ವಿಲ್ಲದೆ ಆ ಶತ್ರುಗಳಿಗೆ ಬಲಿಯಾಗುತ್ತಿರುವರು. ಹಿಂದೂ ಧರ್ಮವೇ ಅಳಿಸಿ ಹೋಗುವಂತೆ ಕಾಣುವುದು.

ವಿದ್ಯಾರಣ್ಯರು :—ಈಗ ದೆಹಲಿಯ ಸಮ್ರಾಟರಾಗಿರುವವರು ಯಾರು?

ರಾಜಭಟ :—ಮಹಮ್ಮದ್ ತೊಗಲಕನು. ಅವನು ಬಹಳ ಕ್ರೂರಿ. ಅವನ ಕ್ರೌರ್ಯವನ್ನು ಸಹಿಸಲಾರದೆ ಅವನ ಅಣ್ಣನ ಮಗ ಬಹಾಉದ್ದೀನ್ ಎಂಬುವನೇ ದಂಗೆಯೆದ್ದು ತಿರುಗಿಬಿದ್ದಿದ್ದಾನೆ. ಅವನು ಈಗ ನಮ್ಮ ಜಂಬು ಕೇಶ್ವರ ರಾಯನನ್ನು ಶರಣುಹೋಗಿದ್ದಾನೆ. ಆನೆಗೊಂದಿಯಲ್ಲಿ ತಲೆ ಮರೆ ಯಿಸಿಕೊಂಡಿದ್ದಾನೆ.

ವಿದ್ಯಾರಣ್ಯರು :—ಅವನು ನಿಜವಾಗಿಯೂ ಆಶ್ರಯವನ್ನು ಅಪೇಕ್ಷಿಸಿ ಬಂದಿದ್ದಾನೆಯೆ? ಮುಂದೆ ರಾಜದ್ರೋಹಿಯಾದಾನು! ಅವನ ಚಲನವಲನ ಗಳನ್ನು ಕಣ್ಣಿಟ್ಟು ನೋಡುತ್ತಿರಬೇಕು. ಅವನನ್ನು ಬಲವಾದ ನಿರ್ಬಂಧ ದಲ್ಲಿಯೇ ಇಟ್ಟಿರಬೇಕು.

ರಾಜಭಟ :—ನಮ್ಮ ನಾಡಿನ ಸೇನಾಪತಿಯಾದ ದೇವರಾಯನು ಬಹಾ ಉದ್ದೀನನನ್ನು ಬಹಳ ಎಚ್ಚರಿಕೆಯಿಂದ ನೋಡಿಕೊಳ್ಳುವಂತೆ ಬಲಿಷ್ಠರಾದ ವೈಗಾವಲಿನವರನ್ನು ನೇಮಿಸಿರುವನು.

ವಿದ್ಯಾರಣ್ಯರು :—ಜಂಬುಕೇಶ್ವರರಾಯನಿಗೆ ಗಂಡು ಮಕ್ಕಳಿರುವರೆ ? ಅವರೆಲ್ಲರೂ ಯುದ್ಧಕುಶಲರಾಗಿರುವರೆ ?

ರಾಜಭಟ :—ನಮ್ಮ ಪ್ರಭುವಿಗೆ ಗಂಡುಮಕ್ಕಳಿಲ್ಲ. ಒಬ್ಬಳೇ ಮಗಳಿರುವಳು. ಆಕೆ ಪರಮಸುಂದರಿ; ರಾಜಯೋಗ್ಯವಾದ ಶಿಕ್ಷಣವನ್ನು ಪಡೆದಿರುವಳು. ಕುದುರೆಯ ಸವಾರಿ ಮಾಡುವುದರಲ್ಲಿ ಬಹಳ ಚತುರಳು. ಎಷ್ಟು ದೂರ ಬೇಕಾದರೂ ಅನಾಯಾಸವಾಗಿ ಕುದುರೆಸವಾರಿ ಮಾಡಬಲ್ಲಳು. ಕತ್ತಿ ಕಾಳಗದಲ್ಲಿ ಅವಳು ಅದ್ವಿತೀಯಳು. ಈಜುವುದರಲ್ಲಿ ಬಲು ಗಟ್ಟಿಗಳು. ಆಕೆ ಇನ್ನೂ ಹದಿನಾಲ್ಕು ವರ್ಷದ ತರುಣಿಯಾಗಿದ್ದಾಗ ತುಂಗಭದ್ರಾನದಿಯ ಪೂರ್ಣಪ್ರವಾಹವನ್ನು ಈಜಿಕೊಂಡೇ ದಾಟಿದಳು. ಅದನ್ನು ಕಂಡು ಜಂಬುಕೇಶ್ವರರಾಯನು ತನ್ನ ಮಗಳೊಬ್ಬಳಿದ್ದರೆ ಹತ್ತು ಮಂದಿ ಗಂಡುಮಕ್ಕಳಿದ್ದಂತೆ ಎಂದು ಆ ದಿನ ತುಂಬಿದ ಸಭೆಯಲ್ಲಿ ಹೇಳಿದನು.

ವಿದ್ಯಾರಣ್ಯರು :—ಆ ಶತ್ರುಗಳು ತುಂಬ ಪ್ರಬಲರೆಂದಮೇಲೆ ಜಂಬುಕೇಶ್ವರರಾಯನು ಏಕಾಂಗಿಯಾಗಿ ನಿಲ್ಲಲು ಸಾಧ್ಯವೆ ?

ರಾಜಭಟ :— ನಮ್ಮ ರಾಜನ ಬೆಂಬಲಕ್ಕಾಗಿ ಕಂಪಿಲರಾಯನೂ, ಬಲ್ಲಾಳರಾಜನೂ, ಮಾಂಡಲಿಕರೂ ನಿಂತಿರುವರು.

ವಿದ್ಯಾರಣ್ಯರು :—ನಿಮ್ಮ ಪ್ರಯತ್ನದಲ್ಲಿ ಯಶಸ್ಸು ಲಭಿಸಲಿ. ಜಾಗರೂಕತೆಯಿಂದ ರಾಜಕಾರ್ಯಗಳನ್ನು ಮಾಡುತ್ತಿರಬೇಕು.

ಎಂದು ಆಶೀರ್ವದಿಸಿ ಆ ರಾಜಭಟರನ್ನು ಬೀಳ್ಕೊಟ್ಟರು. ಕರ್ಣಾಟಕಕ್ಕೆ ಒದಗಿದ್ದ ವಿಪತ್ತನ್ನು ನಿವಾರಿಸುವುದಕ್ಕಾಗಿ ಜನತೆಯಲ್ಲಿ ಐಕಮತ್ಯವನ್ನು ಉಂಟುಮಾಡಬೇಕೆಂದೂ, ಜನಬಲದಿಂದಲೇ ರಾಷ್ಟ್ರನಿರ್ಮಾಣವಾಗುವುದೆಂತಲೂ ವಿದ್ಯಾರಣ್ಯರು ಆಲೋಚಿಸುತ್ತ ಕಾಲ ಕಳೆಯುತ್ತಿದ್ದರು.

ಚೈತ್ರಮಾಸ ಬಂತು. ಹಂಪೆಯ ವಿರೂಪಾಕ್ಷಸ್ವಾಮಿಯ ರಥೋತ್ಸವ ವೈಭವದಿಂದ ನಡೆಯಬೇಕಾಗಿದೆ. ಎಲ್ಲ ಸಿದ್ಧತೆಗಳೂ ತ್ವರಿತದಿಂದಲೇ ಆಗುತ್ತಿದ್ದುವು. ಪದ್ಧತಿಯಂತೆ ಆ ವರ್ಷವೂ ಕನ್ನಡ ನಾಡಿನ ನಾನಾ ಭಾಗಗಳಿಂದಲೇ ಅಲ್ಲದೆ ತೆಲುಗು ಪ್ರಾಂತಗಳಿಂದಲೂ ಜನರು ರಥೋತ್ಸವ ಸಮಯಕ್ಕೆ ಹಂಪೆಗೆ ಬಂದು ಸೇರುತ್ತಿದ್ದರು. ನಾನಾವಿಧವಾದ ವಸ್ತುಗಳನ್ನು ವ್ಯಾಪಾರಮಾಡುವ ಸಣ್ಣ ಪುಟ್ಟ ವ್ಯಾಪಾರಿಗಳೂ, ಹಾವಾಡಿಗರೂ, ದೊಂಬಿ

ದಾಸರೂ, ಹಗಲು ವೇಷಗಾರರೂ ಒಂದೆರಡು ದಿನ ಮುಂಚಿತವಾಗಿಯೇ ಬಂದರು. ಜನಸಂದಣಿ ಹೆಚ್ಚಾಗುತ್ತಲೇ ಬಂತು. ಪೂರ್ಣಿಮೆಯ ದಿನ ರಥೋತ್ಸವ. ಆ ದಿನ ಪ್ರಾತಃಕಾಲದಿಂದಲೇ ಎಲ್ಲ ದೇವತಾಕಾರ್ಯಗಳೂ ವೇದೋಕ್ತವಾಗಿ ನಡೆದುವು. ವಾದ್ಯಗಳು ಮೊಳಗುತ್ತಿದ್ದುವು. ಶ್ರೀ ವಿದ್ಯಾ ರಣ್ಯರು ಆ ದಿನ ಸಂಜೆ ಶ್ರೀ ವಿರೂಪಾಕ್ಷಸ್ವಾಮಿಯ ದೇವಾಲಯದ ಮುಂಭಾ ಗದ ವಿಶಾಲವಾದ ಮೈದಾನದಲ್ಲಿ ನೆರೆದಿದ್ದ ಜನಸ್ತೋಮವನ್ನು ಕುರಿತು ವೀರ ವಾಣಿಯಿಂದ 'ಕರ್ಣಾಟಕ ವೈಭವ' ಎಂಬ ವಿಚಾರವಾಗಿ ಮಾತನಾಡಿದರು.

"ವೀರ ಕನ್ನಡಿಗರೆ, ಅಖಂಡ ಕರ್ಣಾಟಕದ ಬಲವಿಂದು ಕುಗ್ಗಿಹೋಗಿದೆ. ನಿರ್ವೀರ್ಯರಾದ ನಾವು ನಮ್ಮ ಹಿಂದಿನ ವೈಭವವನ್ನು ಮರೆತುಹೋಗುತ್ತಿ ದ್ದೇವೆ. ಅಲಸರಾಗಿರುವ ನಾವು ಮತ್ತೊಮ್ಮೆ ಕಾರ್ಯೋನ್ಮುಖರಾಗಬೇಕು. ಶ್ರೀ ವಿರೂಪಾಕ್ಷಸ್ವಾಮಿಯನ್ನು ಆರಾಧಿಸುತ್ತಿರುವ ನಾವು ಅವನ ಅಂಕಿತ ದಿಂದಲೇ ನಮ್ಮ ರಾಜ್ಯವನ್ನು ಕಟ್ಟಬೇಕು. ತ್ರಿಪುರಸಂಹಾರಕನಾದ ಮಹಾ ರುದ್ರನೇ ಈ ವಿರೂಪಾಕ್ಷಸ್ವಾಮಿ! ಪ್ರಪಂಚದ ಕ್ಷೇಮಕ್ಕಾಗಿಯೇ ಆತನು ಆ ರಾಕ್ಷಸರನ್ನು ಸಂಹಾರ ಮಾಡಿದನು. ಇಂದು ಕರ್ಣಾಟಕಕ್ಕೆ ಒದಗಿರುವ ರಾಕ್ಷಸ ಸದೃಶ ಶತ್ರುಗಳನ್ನು ನಿರ್ಮೂಲಮಾಡಿ ನಮ್ಮ ನಾಡಿನ ಕಲ್ಯಾಣವನ್ನು ಸಾಧಿಸಲು ನಾವು ಆ ರುದ್ರಾಂಶ ತೇಜಃಪುಂಜರಾಗಿ ನಿಲ್ಲಬೇಕು. ಬ್ರಹ್ಮ, ವಿಷ್ಣು, ಮಹೇಶ್ವರ – ಈ ತ್ರಿಮೂರ್ತಿಗಳೂ ಏಕೈಕಬಲರಾಗಿ ನಿಂತು ತ್ರಿಪುರ ಗಳನ್ನು ಸುಟ್ಟು ಭಸ್ಮಮಾಡಿದರು. ಈಗ ನಾವು ಸತ್ವರಜಸ್ತಮೋಗುಣ ಗಳನ್ನು ಹುರಿಗೊಳಿಸಿ ಆ ತ್ರಿಮೂರ್ತಿಗಳ ಅಂಶಗಳಿಂದ ಪ್ರೇರಿತರಾಗಿ ಶತ್ರು ಸಂಹಾರ ಮಾಡಲು ಅನುವಾಗಬೇಕು. ಕರ್ಣಾಟಕದ ಅಭಿಮಾನದೇವತೆ ಯಾಗಿರುವ ಶ್ರೀ ಭುವನೇಶ್ವರೀ ದೇವಿಯ ಆರಾಧಕರಾದ ನಾವು ಹೇಡಿಗಳಾಗ ಬಾರದು. ಪರಾಶಕ್ತಿ ಸ್ವರೂಪಿಣಿಯಾದ ದೇವಿಯ ಉಗ್ರಸ್ವರೂಪ ಇಂದು ನಮ್ಮಲ್ಲಿ ಪ್ರತಿಬಿಂಬಿಸಬೇಕು. ಶುಂಭ, ನಿಶುಂಭ, ಮಹಿಷಾಸುರ, ರಕ್ತ ಬೀಜಾಸುರ ಮುಂತಾದ ರಾಕ್ಷಸರನ್ನು ಸದೆಬಡಿದು ಪ್ರಪಂಚವನ್ನು ಉದ್ಧರಿಸಿದ ಆ ಮಹಾದೇವಿಯ ಅನುಗ್ರಹಬಲದಿಂದ ನಾವು ಈಗ ನಮ್ಮ ನಾಡಿನಮೇಲೆ ನುಗ್ಗಿಬರುತ್ತಿರುವ ನರರಾಕ್ಷಸರನ್ನು ನಿಗ್ರಹಿಸಬೇಕು. ಶ್ರೀ ವಿರೂಪಾಕ್ಷ ಸ್ವಾಮಿಯ ಈ ಮಹೋತ್ಸವ ನಮ್ಮ ಮುಂದಿನ ರಾಷ್ಟ್ರಾಭ್ಯುದಯಸೂಚಕ

ಮಂಗಳಮಹೋತ್ಸವವೆಂದು ಭಾವಿಸಿರಿ. ಇಂದು ಮೊಳಗಿದ ಮಂಗಳವಾದ್ಯಗಳೇ ನಮ್ಮ ಮುಂದಿನ ವೀರಘೋಷವನ್ನು ಸೂಚಿಸಲಿ! ನಮ್ಮ ಹೃದಯದಲ್ಲಿ ಶ್ರೀ ರುದ್ರನ ಅಂಶ – ಶ್ರೀ ದೇವಿಯ ಶಕ್ತಿ ತುಂಬಿ ತುಳುಕುತ್ತಿರಲಿ.

ಕನ್ನಡಿಗರಾದ ನಾವು ಯಾವ ದುರವಸ್ಥೆಗೆ ಇಳಿದಿದ್ದೇವೆಂಬುದನ್ನು ಕ್ಷಣಕಾಲ ನಿಮ್ಮ ಮನಸ್ಸಿನಲ್ಲಿ ಚಿತ್ರಿಸಿಕೊಳ್ಳಿರಿ. ರಣಪರಾಕ್ರಮಿಗಳ ನಾಡು ಈಗ ಹೇಡಿಗಳ ನೆಲೆವೀಡಾಗಿದೆ. ನಮ್ಮಲ್ಲಿ ಐಕಮತ್ಯವಿಲ್ಲ; ದೇಶಾಭಿಮಾನವಿಲ್ಲ. ಉತ್ತರದಲ್ಲಿ ಓರಂಗಲ್ಲು ರಾಜ್ಯ ನುಚ್ಚು ನೂರಾಯಿತು. ದಕ್ಷಿಣದಲ್ಲಿ ದ್ವಾರಸಮುದ್ರ ಕಂಗೆಟ್ಟು ನಿಂತಿತು. ಸಣ್ಣ ಪುಟ್ಟ ಕನ್ನಡ ರಾಜರು ಅಂತಃಕಲಹಗಳಲ್ಲಿ ಮಗ್ನರಾಗಿದ್ದಾರೆ. ಕಂಪಿಲರಾಜ್ಯ ಕಂಪಿಸುತ್ತಿದೆ; ಆನೆಗೊಂದಿ ಅಲ್ಲಾಡುತ್ತಿದೆ. ಮುಂದೇನುಗತಿಯೆಂಬುದನ್ನು ನೀವು ಯೋಚಿಸಿರಿ. ನಮ್ಮ ಧರ್ಮ ಸಂಸ್ಕೃತಿ, ಮಾನ ಮರ್ಯಾದೆಗಳನ್ನು ಉಳಿಸಿಕೊಳ್ಳಬೇಡವೆ? ಹೇಡಿಗಳಂತೆ ತಲೆತಗ್ಗಿಸಿ ಬದುಕಲು ಸಾಧ್ಯವೆ!

ನಮ್ಮ ಸ್ವಶಕ್ತಿಯನ್ನು ನಾವು ಮರೆತುಬಿಟ್ಟದ್ದೇವೆ. ಕ್ಷಾತ್ರಧರ್ಮಕ್ಕೆ ಬ್ರಹ್ಮತೇಜೋಬಲವನ್ನು ಅನುಗೊಳಿಸಿ ನಾವು ಕಾರ್ಯೋನ್ಮುಖರಾಗಬೇಕು. ಪರಧರ್ಮೀಯರು ನಮ್ಮ ಮನೆಮಠಗಳನ್ನು ಹಾಳುಗೆಡವಿ ನಮ್ಮ ಧರ್ಮವನ್ನು ನಾಶಮಾಡುತ್ತಿರುವಾಗ ನಾವು ಸುಮ್ಮನೆ ಕುಳಿತರೆ ಮುಂದಿನ ಕನ್ನಡ ನಾಡಿನ ಸಂತಾನ ನಮ್ಮನ್ನು ಗೌರವಿಸುವದೆ? ಈಗೇನು ಮಾಡಬೇಕೆಂಬುದನ್ನು ಬಲ್ಲಿರಾ! ದೈವಾನುಕೂಲ ಒದಗಿಬಂದರೆ ಇಲ್ಲಿಯೇ – ಈ ಪಂಪಾ ವಿರೂಪಾಕ್ಷಸ್ವಾಮಿಯ ಸನ್ನಿಧಿಯಲ್ಲಿಯೇ – ಕನ್ನಡಿಗರಾದ ನಾವು ನೂತನ ಸಾಮ್ರಾಜ್ಯವೊಂದನ್ನು ನಿರ್ಮಿಸಬೇಕು. ಆ ಮಹಾಕಾರ್ಯದಲ್ಲಿ ನಾವು ನಮ್ಮ ಪ್ರಾಣಗಳನ್ನು ಬೇಕಾದರೂ ಅರ್ಪಿಸಲು ಸಿದ್ಧರಾಗಬೇಕು. ಈ ದಿನವೇ ನೀವೆಲ್ಲರೂ ಈ ಶುಭಸಮಯದಲ್ಲಿ ಸತ್ಯಪ್ರತಿಜ್ಞೆಯನ್ನು ಮಾಡಿರಿ. ಸತ್ತರೆ ಸ್ವರ್ಗ, ಇದ್ದರೆ ಭೋಗ – ಎಂಬ ಧ್ಯೇಯವಿರಬೇಕು. ದೇಶಹಿತಸಾಧನೆಗಾಗಿ ನೀವೆಲ್ಲರೂ ಮುಂದೆ ಬರಬೇಕು.

ಕಾಡಿನಲ್ಲಿರುವ ನರಿಗಳು ಸದಾ ಮಂದೆ ಮಂದೆಯಾಗಿಯೇ ಸಂಚರಿಸುತ್ತವೆ. ಅವು ಒಂದೆಡೆಯಲ್ಲಿ ಕುಳಿತುಕೊಳ್ಳುತ್ತವೆ; ಒಂದೇ ಸ್ಥಳದಲ್ಲಿ ನಿಲ್ಲುತ್ತವೆ; ಜೊತೆಯಲ್ಲಿ ಕೂಗಿಕೊಳ್ಳುತ್ತವೆ. ಕುರಿಗಳೂ ಹಾಗೆಯೇ.

ಹಿಂಡಿನಲ್ಲಿರುತ್ತವೆ ; ಗುಂಪಾಗಿ ಚಲಿಸುತ್ತವೆ ; ಒಂದೆಡೆಯಲ್ಲಿ ಮಲಗುತ್ತವೆ. ಆದರೇನು ! ಅವು ಶತ್ರುವನ್ನು ಎದುರಿಸಿ ಕಾದಾಡಬಲ್ಲುವೆ ! ಎಂದಿಗೂ ಇಲ್ಲ. ಸಿಂಹಗಳ ವಿಚಾರ ಹಾಗಲ್ಲ. ಅವು ಯಾವಾಗಲೂ ಹಿಂಡು ಹಿಂಡಾಗಿರುವುದಿಲ್ಲ. ಅವು ಎಂದಿಗೂ ಒಟ್ಟಿಗೆ ಸಂಚರಿಸುವುದಿಲ್ಲ. ಅವು ಗುಂಪು ಕೂಡುವುದಿಲ್ಲ. ಹಿಂಡಿನಲ್ಲಿರುವುದಿಲ್ಲ. ಗಿಡುಗ ಪಕ್ಷಿಯಾದರೂ ಹಾಗೆಯೇ. ಒಂಟಿಯಾಗಿಯೇ ಇರುತ್ತದೆ. ಮನಬಂದ ಕಡೆಯಲ್ಲಿ ಹಾರಾಡುತ್ತದೆ. ಸಣ್ಣಪುಟ್ಟ ಇತರ ಜಾತಿಯ ಹಕ್ಕಿಗಳು ಮಾತ್ರವೇ ಗುಂಪುಗುಂಪಾಗಿ ಹಾರುವುದು. ಏಕೆಂದರೆ ನರಿ, ಕುರಿ, ಹಕ್ಕಿ ಮುಂತಾದ ನೀಚ ಪ್ರಾಣಿಗಳಲ್ಲಿ ಸ್ವಶಕ್ತಿಯಿಲ್ಲ. ಅವು ಶತ್ರುವನ್ನು ಎದುರಿಸಲಾರವು. ಸಿಂಹ ಒಂಟಿಯಾಗಿದ್ದರೂ ಆನೆಯ ಹಿಂಡನ್ನು ಚದುರಿಸಬಲ್ಲುದು. ಆನೆಗೆ ಆತ್ಮಬಲವಿಲ್ಲ. ಸಿಂಹಕ್ಕೆ ಆತ್ಮಶಕ್ತಿಯುಂಟು. ಆತ್ಮಶಕ್ತಿಯಿಂದ ನಾವು ಅಜೇಯರಾಗುತ್ತೇವೆ. ಆತ್ಮಶಕ್ತಿಯಿಲ್ಲದ ಜನ ಎಷ್ಟುಕೋಟಿಯಿದ್ದರೇನು ! ಸ್ವಶಕ್ತಿಯಿಂದ ಬದುಕುವುದೇ ಮಾನವ ಜೀವಿತದ ಗುರಿಯಾಗಿರಬೇಕು. ನಾವು ಮಾನವರು ; ಪ್ರಾಣಿಕೋಟಿಯಲ್ಲಿ ಸರ್ವೋತ್ತಮರು. ಇಂಥ ನಾವು ನರಿ, ಕುರಿ ಮೊದಲಾದ ಕ್ಷುದ್ರಪ್ರಾಣಿಗಳಂತೆ ಬದುಕಬಾರದು. ಸಿಂಹದಂತೆ ಪ್ರಚಂಡ ಶಕ್ತಿವಂತರಾಗಿ ಬಾಳಬೇಕು. ನಮ್ಮ ಸ್ವಶಕ್ತಿಯನ್ನು ನಾವು ಅರಿಯಬೇಕು. ಹಾಗೆ ನಮ್ಮ ಶಕ್ತಿಯ ಅರಿವು ನಮಗೆ ಉಂಟಾಯಿತೆಂದರೆ ಸಾಕು, ನಾವು ಪ್ರತಿಸ್ವರ್ಗವನ್ನು ಸೃಷ್ಟಿಸಬಲ್ಲೆವು. ಕನ್ನಡಿಗರೇನು ಸಾಮಾನ್ಯರೆ ! ನಮ್ಮ ಹಿರಿಯರು ಅಸಹಾಯಶೂರರಾಗಿ ಬಾಳಿದರು. ಸಿಂಹಸ್ವರೂಪರಾಗಿ ನಿಂತರು. ನಮ್ಮಲ್ಲಿಯೂ ಅಂಥ ಶಕ್ತಿಯಿದೆ. ಅದನ್ನು ನಾವು ಅರಿಯುತ್ತಿಲ್ಲ. ಈ ಸಂದರ್ಭದಲ್ಲಿ ಒಂದು ಮಾತನ್ನು ನಾನು ನಿಮಗೆ ತಿಳಿಸಬೇಕಾಗಿದೆ. ಸೀತಾಮಾತೆಯನ್ನು ಅರಸಲು ಹೊರಟ ಕಪಿವೀರರು ಸಮುದ್ರತೀರದಲ್ಲಿ ಕುಳಿತು ಆಲೋಚಿಸಿದರಂತೆ. ಅಪಾರವಾದ ಸಾಗರವನ್ನು ದಾಟಲು ಯಾರು ಶಕ್ತರು? ಎಂಬುದೇ ಅವರ ಯೋಚನೆಗೆ ಕಾರಣವಾಗಿತ್ತು. "ನಾನು ಇನ್ನೂ ಚಿಕ್ಕವನು. ನನಗೆ ಆ ಶಕ್ತಿಯಿಲ್ಲ" ಎಂದು ಅಂಗದನೂ "ನಮಗೆ ಆ ಅಭ್ಯಾಸವೇ ಇಲ್ಲ, ಭಯವಾಗುತ್ತದೆ" ಎಂದು ನಳ, ನೀಲ ಮುಂತಾದ ಯೋಧರೂ ತಿಳಿಸಿದರು. "ನನಗೇನೋ ಸಾಧ್ಯವಾದೀತು ! ಆದರೆ ನಾನು ಮುದುಕ"

ಎಂದು ಜಾಂಬವಂತ ಹೇಳಿದನು. "ನನ್ನಿಂದ ತಾನೇ ಸಾಧ್ಯವಾದೀತೆ?—ಎಂದು ಹನುಮಂತನೂ ಹೇಳಿದನು. ಅದನ್ನು ಕೇಳಿ ವೃದ್ಧ ಜಾಂಬವಂತನು "ಅಯ್ಯಾ ವೀರಹನುಮಾನ್, ನೀನು ಮಹಾಪರಾಕ್ರಮಿಯೆಂಬುದನ್ನು ಮರೆಯಬೇಡ. ನಿನ್ನಲ್ಲಿ ಆತ್ಮಪೌರುಷವುಂಟು. ಬಾಹುಬಲವುಂಟು. ನೀನು ಈ ಸಾಗರವನ್ನು ಲಂಘಿಸಬಲ್ಲೆ. ಸಿದ್ಧನಾಗು. ಹೇಡಿಯಂತೆ ಹಿಮ್ಮುಖನಾಗಬೇಡ" ಎಂದು ಹನುಮಂತನ ಬೆನ್ನು ತಟ್ಟಿ ಪ್ರೋತ್ಸಾಹಿಸಿದನು. ಆ ಮಾತಿನಿಂದ ಉತ್ಸಾಹಗೊಂಡ ಹನುಮಂತನು ಪುಟನೆಗೆದು ಅಬ್ಬರಿಸಿ ಸಮುದ್ರವನ್ನು ವಾಯುವೇಗದಿಂದ ಹಾರಿ ದಾಟಿಯೇ ಬಿಟ್ಟನು. ಇದರಿಂದ ಏನು ತಿಳಿಯುತ್ತದೆ! ನಮ್ಮ ಶಕ್ತಿಯನ್ನು ನಾವು ಅರಿಯಬೇಕು. ನಮಗೆ ಅವಕಾಶವಿಲ್ಲದೆ ಇದುವರೆಗೂ ಸೋಮಾರಿಗಳಂತಿದ್ದೆವು. ಈಗ ಕಾಲ ಒದಗಿದೆ. ನೀವು ಒಬ್ಬೊಬ್ಬರೂ ವೀರ ಹನುಮಂತನಂತಾಗಬೇಕು. ಹನುಮಂತನಾದರೂ ನಮ್ಮ ಕನ್ನಡ ನಾಡಿನ ವೀರನೇ. ಇದೋ! ಅಲ್ಲಿ ಕಾಣುವ ಕಿಷ್ಕಿಂಧಾ ನಗರದಲ್ಲಿಯೇ ಹುಟ್ಟಿ ಬೆಳೆದನು. ಅಂಥ ವೀರ ಸಂತಾನ ನಾವು. ಈ ಹೊತ್ತು ನಮ್ಮ ಸ್ವಾತಂತ್ರ್ಯ ಸೀತಾದೇವಿಯನ್ನು ಅಪಹರಿಸಿದ್ದಾರೆ ಮುಸಲ್ಮಾನರು! ಆ ದೇವಿಯನ್ನು ಅರಸುತ್ತ ರಾಮ ಲಕ್ಷ್ಮಣರೂಪದಲ್ಲಿ ನಮ್ಮ ಭಾಗ್ಯವಶದಿಂದ ಯಾರಾದರೂ ರಾಜವಂಶೀಯರು ಮುಂದೆ ಬಂದಾರು! ಆಗ ನಾವು ಸ್ವಾತಂತ್ರ್ಯದೇವಿಯ ಪಾದತಲದಲ್ಲಿ ಆತ್ಮಾರ್ಪಣೆಮಾಡಲು ಸಿದ್ಧರಾಗಬೇಕು. ದೇವರು ನಿಮಗೆಲ್ಲಾ ಶುಭವನ್ನುಂಟುಮಾಡಲಿ" ಎಂದು ಸಿಂಹ ಕಂಠದಿಂದ ಹೇಳಿದ ವೀರಸಂದೇಶವನ್ನು ಕೇಳಿ ಜನರು ತಮ್ಮ ಅವನತಿಯ ಸ್ವರೂಪವನ್ನು ಮನಗಂಡರು. ಅವರ ರಕ್ತ ಕುದಿಯುತ್ತಿತ್ತು. ಸ್ವರಾಜ್ಯ ಸ್ಥಾಪನೆಗಾಗಿ ಪ್ರಾಣವನ್ನು ಬೇಕಾದರೂ ಕೊಡುತ್ತೇವೆ ಎಂಬ ಮೊಳಗು ಜನಸಮೂಹದ ಎಲ್ಲ ಕಡೆಯಿಂದಲೂ ಎದ್ದು ಮುಗಿಲು ಮುಟ್ಟಿತು. ವಿದ್ಯಾರಣ್ಯರು ಹರ್ಷವದನರಾಗಿ ಅವರನ್ನು ಹರಸಿ, ಸ್ವಾಮಿಯ ದರ್ಶನಕ್ಕೆ ಗುಡಿಯೊಳಕ್ಕೆ ಹೋದರು.

ಹೀಗೆ ವಿದ್ಯಾರಣ್ಯರು ಜನಶಕ್ತಿಯನ್ನು ಸಂಘಟಿಸುತ್ತ ಜನರಲ್ಲಿ ಸ್ವದೇಶ ಪ್ರೇಮ ಲಹರಿಯನ್ನು ಉಕ್ಕಿಸುತ್ತಿದ್ದರು. ಆ ವೀರ ಸಂನ್ಯಾಸಿ ನಾಡಿನ ಹಿತಸಾಧನೆಯನ್ನೇ ಅನವರತವೂ ಚಿಂತಿಸುತ್ತಿದ್ದರು.

# ನಾಲ್ಕನೆಯ ಅಧ್ಯಾಯ

## ಕನ್ನಡ ನಾಡಿನ ಇತಿಹಾಸ, ಸಿಂಹಾವಲೋಕನ

ಉದ್ಯೋಗಿನಂ ಪುರುಷಸಿಂಹಮುಪೈತಿ ಲಕ್ಷ್ಮೀಃ
ದೈವೇನದೇಯಮಿತಿ ಕಾಪುರುಷಾವದಂತಿ
ದೈವಂನಿಹತ್ಯ ಕುರುಪೌರುಷಮಾತ್ಮಶಕ್ತ್ಯಾ
ಯತ್ನೇ ಕೃತೇಯದಿ ನಸಿಧ್ಯತಿ ಕೋಽತ್ರದೋಷಃ

—ಹಿತವಾಣಿ.

ಶ್ರೀ ವಿದ್ಯಾರಣ್ಯರ ಕಾರ್ಯಮಹತ್ವವನ್ನೂ ಅವರ ವ್ಯಕ್ತಿತ್ವಶಕ್ತಿಯನ್ನೂ ಅರಿಯಬೇಕಾದರೆ ಕರ್ನಾಟಕದ ಪರಿಸ್ಥಿತಿಯನ್ನು ಸಿಂಹಾವಲೋಕನಮಾಡಿ ತಿಳಿಯಬೇಕಾದುದು ಆವಶ್ಯಕ. ಅವರ ಕಾಲದವರೆಗೆ ಬೆಳೆದುಕೊಂಡು ಬಂದಿದ್ದ ರಾಜಕೀಯಚರಿತ್ರೆ, ಜನಜೀವನ, ಧಾರ್ಮಿಕಪ್ರಗತಿ, ಸಂಸ್ಕೃತಿ ವೈಭವ ಮತ್ತು ಆಗಾಗ ನಮ್ಮ ನಾಡಿಗೆ ಒದಗಿದ್ದ ದುರ್ಭರಘಟನೆ ಇವುಗಳನ್ನು ತಿಳಿಯುವುದರಿಂದ ಆಗ ಇದ್ದ ಸನ್ನಿವೇಶಬಲವನ್ನೂ ದೇಶದ ಪರಿಸ್ಥಿತಿಯನ್ನೂ ಮನಗಾಣಬಹುದು. ಅಂಥ ಸಂದರ್ಭಗಳಲ್ಲಿ ಅವರು ತಮ್ಮ ಧೀಶಕ್ತಿಯನ್ನೂ ತಪಶ್ಶಕ್ತಿಯನ್ನೂ ಉಪಯೋಗಿಸಿ – ಆಯಾ ಸನ್ನಿವೇಶಗಳನ್ನು ಸುಮುಖವಾಗಿಸಿಕೊಂಡು ಹೇಗೆ ಕರ್ನಾಟಕದ ವೈಭವವನ್ನು ಮತ್ತೊಮ್ಮೆ ನೆಲೆಗೊಳಿಸಲು ಸಹಾಯಕರಾದರೆಂಬುದನ್ನೂ ನಾವು ತಿಳಿಯಬಹುದು.

ಭರತಖಂಡದ ಬೇರೆ ಬೇರೆ ಪ್ರಾಂತಗಳ ಇತಿಹಾಸವೇ ಒಂದು ರೀತಿ ; ಕರ್ನಾಟಕದ ಇತಿಹಾಸವೇ ಒಂದು ರೀತಿ. ಕರ್ನಾಟಕದ ಚರಿತ್ರೆಯನ್ನು ಅವಲೋಕಿಸಿದರೆ ಈ ವೈಶಿಷ್ಟ್ಯ ಚೆನ್ನಾಗಿ ಗೊತ್ತಾಗುತ್ತದೆ. ಇಲ್ಲಿ ಎಲ್ಲ ಧರ್ಮಗಳ ಸಮನ್ವಯ ಕಾಣುತ್ತದೆ ; ಎಲ್ಲ ಸಂಸ್ಕೃತಿಗಳ ಸಂಮ್ಮೇಳನ ತುಂಬಿದೆ. ಇಲ್ಲಿ ಆಳಿದ ರಾಜರು ರಾಜಕೀಯ ನಿಪುಣರಾಗಿದ್ದಂತೆಯೇ ಧಾರ್ಮಿಕ ಮನೋಭಾವವುಳ್ಳವರೂ ಆಗಿದ್ದರು. ಸನಾತನಧರ್ಮ ಮತ್ತು ಸಂಸ್ಕೃತಿಗಳಿಗೆ ಆಘಾತ ಒದಗಬಹುದಾಗಿದ್ದ ಎಲ್ಲ ಸಂದರ್ಭಗಳಲ್ಲಿಯೂ ಕರ್ನಾಟಕ ಜನಪದ ಅವುಗಳನ್ನು ಅಚಲವಾಗಿ ಉಳಿಸಿಕೊಂಡು ಬಂದಿದೆ. ರಾಜ್ಯತಂತ್ರದಲ್ಲಿ ಕನ್ನಡಿಗರಿಗೆ ಆದಷ್ಟು ಅನುಭವ ಭರತಖಂಡದ ಇನ್ನುಳಿದ

ಭಾಗಗಳಲ್ಲಿರುವ ಜನರಿಗೆ ಆಗಲಿಲ್ಲ. ಕರ್ಣಾಟಕದಲ್ಲಿ ಏಕಚ್ಛತ್ರಾಧಿಪತ್ಯವೇ ದೀರ್ಘಕಾಲದವರೆಗೂ ನಡೆದುಕೊಂಡು ಬರದೇ ಇದ್ದರೂ, ದೊಡ್ಡ ದೊಡ್ಡ ಚಕ್ರಾಧಿಪತ್ಯಗಳು ಹುಟ್ಟಿ ಕೀರ್ತಿಗೊಂಡವು. ಅವು ಸಣ್ಣ ಸಣ್ಣ ರಾಜ್ಯಗಳ ವ್ಯಕ್ತಿತ್ವವನ್ನು ನಾಶಮಾಡದೆ ಅವುಗಳೊಂದಿಗೆ ಸಮರಸವಾಗಿಯೇ ವರ್ತಿಸಿ ಕೊಂಡು ಬರುತ್ತ ಅಖಿಲ ಕರ್ಣಾಟಕದ ಏಳಿಗೆಯನ್ನು ಸಾಧಿಸಿದುವು. ಇಲ್ಲಿ ಅನೇಕ ಸಲ ರಾಜಕೀಯ ಪರೀಕ್ಷಾ ಪ್ರಯೋಗಗಳು ನಡೆದಿವೆ. ಜನರು ನಿರಂತರ ದೇಶಪ್ರೇಮದಿಂದ ಪ್ರೇರಿತರಾಗಿ, ತಾವು ಬೇರೆ ಬೇರೆ ರಾಜರುಗಳ ಆಡಳಿತಗಳಲ್ಲಿದ್ದರೂ, ಸಮಗ್ರ ಕರ್ಣಾಟಕದ ಉನ್ನತಿಯನ್ನು ಸಾಧಿಸುವ ಪ್ರಯತ್ನದಲ್ಲಿ ಮಡಿದಿದ್ದಾರೆ. ಕರ್ಣಾಟಕದಲ್ಲಿ ಹುಟ್ಟಿಬೆಳೆದ ಪ್ರತಿಯೊಂದು ರಾಜವಂಶವೂ ಅನೂಚಾನವಾಗಿ ನಡೆದುಬಂದ ಉದಾರ ಸಂಪ್ರದಾಯಗ ಳನ್ನೂ, ಧರ್ಮ ಸಂಸ್ಕೃತಿಗಳನ್ನೂ ಅಚ್ಚಳಿಯದಂತೆ ಕಾಪಾಡಿಕೊಂಡು ಬಂದಿರುತ್ತಾರೆ. ಈ ದೃಷ್ಟಿಯಿಂದ ನೋಡಿದರೆ ಕರ್ಣಾಟಕದ ಚರಿತ್ರೆಯಲ್ಲಿ ಧೀರರೂ, ಧೀಮಂತರೂ, ಉದಾರಿಗಳೂ, ಸಾಹಸಿಗಳೂ, ದೇಶಪ್ರೇಮಿಗಳೂ, ರಾಜನಿಷ್ಠರೂ ಕಾಲಕಾಲಕ್ಕೆ ಉದಯಿಸಿ ಯಶೋವಂತರಾಗಿದ್ದಾರೆ.

ಕನ್ನಡನಾಡು ಗೋದಾವರೀ ನದಿಯಿಂದ ಕಾವೇರೀನದಿಯವರೆಗೆ ಹಬ್ಬಿ ದ್ದಿತೆಂದು ರಾಜಕವಿ ನೃಪತುಂಗನೂ, ನಂಜುಂಡಕವಿಯೂ ಹೇಳಿದ್ದಾರೆ. ಕ್ರಿಸ್ತಶಕದ ಆರಂಭಕಾಲಕ್ಕೆ ಕೆಲವು ಶತಮಾನಗಳ ಹಿಂದೆಯೇ ಕನ್ನಡ ನಾಡಿನಲ್ಲಿ ಸುವ್ಯವಸ್ಥಿತವಾದ ರಾಜ್ಯಾಡಳಿತ ಕ್ರಮವು ಏರ್ಪಟ್ಟಿದ್ದಿತೆಂದು ಇತಿಹಾಸದಿಂದ ಗೊತ್ತಾಗುತ್ತದೆ. ನಂದರು ಕನ್ನಡ ನಾಡನ್ನು ಆಳುತ್ತಿದ್ದರೆಂದು ಗೊತ್ತಾಗುತ್ತದೆ. ಮೌರ್ಯರು ಸುಮಾರು ಮುನ್ನೂರುವರ್ಷ ಈ ನಾಡಿನಲ್ಲಿ ತಮ್ಮ ಆಧಿಪತ್ಯವನ್ನು ನಡಸಿದರು. ಆಗ ಕನ್ನಡ ನಾಡಿನಲ್ಲಿ ಸ್ವತಂತ್ರ ರಾಜ್ಯಾಂಗವ್ಯವಸ್ಥೆ ರೂಪುಗೊಂಡಿತು. ಶಾತವಾಹನರು ಕನ್ನಡ ನಾಡನ್ನು ವಿಸ್ತರಿಸಿದರು. ಅವರ ತರುವಾಯ ನಾಡು ಹರಿದುಹಂಚಿಹೋಗುವ ಸಂಭವ ವಿತ್ತು. ಆಗ ಕದಂಬರು, ಬಾಣರು, ಆಳುಪರು, ನಳರು, ಸೇಂದ್ರಕರು ಮತ್ತು ಪುನ್ನಾಟರು ಬಹುಮುಖವಾಗಿ ಪ್ರಯತ್ನಿಸಿ ನಾಡು ಒಡೆದುಹೋಗ ದಂತೆ ತಡೆದರು.

ಶಾತವಾಹನರು ಬಹಳ ಪ್ರಬಲರಾಗಿದ್ದರು. ಇವರ ವಂಶದಲ್ಲಿ ಹುಟ್ಟಿದ ಶಾಲಿವಾಹನ ಎಂಬುವನು ಪ್ರಸಿದ್ಧನು. ಇವನ ರಾಜಧಾನಿ ಪೈಠಣ. ಅವನನ್ನು ಕುಂತಳಾಧೀಶ್ವರನೆಂದು ರಾಜಶೇಖರನೆಂಬ ಕವಿ ತನ್ನ ಕಾವ್ಯ ಮೀಮಾಂಸದಲ್ಲಿ ಹೇಳಿದ್ದಾನೆ. ಇವನ ತರುವಾಯ ಬಂದವರಲ್ಲಿ ಗೌತಮೀಪುತ್ರ ಶಾತಕರ್ಣಿ ಎಂಬುವನು ಬಹಳ ಪರಾಕ್ರಮಿಯಾಗಿದ್ದನು. ಇವನ ಕಾಲದಲ್ಲಿ ಕರ್ಣಾಟಕಕ್ಕೆ ಹೆಚ್ಚು ಸಂಬಂಧ ಬೆಳೆಯಿತು. ಶಾತವಾಹನರ ಮಾಂಡಲಿಕರಲ್ಲಿ ತುಂಬ ಪ್ರಸಿದ್ಧರಾದ ಚುಟು ವಂಶದವರು ಬನವಾಸಿಯಲ್ಲಿ ರಾಜ್ಯವಾಳಿ ಕನ್ನಡನಾಡಿನ ಸಂಸ್ಕೃತಿಯನ್ನು ಅವಿಚ್ಛಿನ್ನವಾಗಿ ಉಳಿಸಿಕೊಂಡು ಬಂದರು. ಇವರಂತೆಯೇ ಅನೇಕ ರಾಜವಂಶದವರೂ ಕನ್ನಡ ನಾಡಿನ ಕೀರ್ತಿಯನ್ನು ಹೆಚ್ಚಿಸಿದರು. ಬಾಣರು ಅತ್ಯಂತ ಪುರಾತನ ವಂಶದವರು. ಇವರು ಬಲಿಚಕ್ರವರ್ತಿಯ ಸಂತಾನವೆಂದು ಹೇಳಿಕೊಂಡಿದ್ದಾರೆ. ಬಲಿಯ ಹಿರಿಯಮಗನೇ ಬಾಣಾಸುರ. ಅವನು ತನ್ನ ಸಹಸ್ರಬಾಹುಗಳಿಂದ ಪರಶಿವನನ್ನು ಆರಾಧಿಸಿ, ಶಿವನ ಕೃಪೆಯನ್ನು ಪಡೆದನೆಂದೂ, ಶಿವನನ್ನು ತನ್ನ ಅರಮನೆಯ ದ್ವಾರಪಾಲಕನನ್ನಾಗಿ ಮಾಡಿಕೊಂಡನೆಂದೂ ಪುರಾಣಗಳಲ್ಲಿ ಉಕ್ತವಾಗಿದೆ. ಬಾಣರಿಗೂ ಕದಂಬರಿಗೂ ನಿಕಟಸಂಬಂಧವಿತ್ತು. ಈ ವಂಶದ ಬಾಣವಿದ್ಯಾಧರನೆಂಬುವನು ಗಂಗವಂಶದ ಇಮ್ಮಡಿ ಶಿವಮಾರನ ಮಗಳಾದ ಕುಂದಾದೇವಿಯನ್ನು ಮದುವೆಯಾದನು. ಇದರಿಂದ ಗಂಗರ ಬೆಂಬಲವೂ ಬಾಣರಿಗೆ ಒದಗಿತು. ಈಗಿನ ಕೋಲಾರ ಪ್ರಾಂತದಲ್ಲಿ ಬಾಣರ ರಾಜ್ಯವಿತ್ತು. ಹತ್ತನೆಯ ಶತಮಾನದ ವೇಳೆಗೆ ಬಾಣರು ತಮ್ಮ ಸ್ವಾತಂತ್ರ್ಯವನ್ನು ನೀಗಿಕೊಂಡರು.

ಆಳುಪರು ಪಶ್ಚಿಮ ಕರಾವಳಿಯ ಪ್ರಾಂತದಲ್ಲಿ ಆಳುತ್ತಿದ್ದರು. ಇವರು ಕ್ರಿ. ಶ. ಒಂದನೆಯ ಶತಮಾನದಿಂದ ಪ್ರಾರಂಭಿಸಿ ಸುಮಾರು ೧೫೦೦ ವರ್ಷ ಕಾಲ ರಾಜ್ಯಭಾರ ಮಾಡಿದರು. ಚಿತ್ರವಾಹನ ಎಂಬುವನು ಇವರಲ್ಲಿ ಬಹಳ ಪ್ರಸಿದ್ಧನಾಗಿದ್ದನು. ಭಾರತೀ ತೀರ್ಥರು ಶೃಂಗೇರಿಯ ಪೀಠಾಧಿಕಾರಿಗಳಾಗಿದ್ದಾಗ ಈ ವಂಶದ ವೀರಕುಲಶೇಖರದೇವ ಎಂಬ ದೊರೆ ಶೃಂಗೇರಿಗೆ ಹೋಗಿ ಆ ಗುರುಗಳಿಗೆ ತನ್ನ ಭಕ್ತಿ ಕಾಣಿಕೆಯನ್ನು ಅರ್ಪಿಸಿದನು. ಅಲ್ಲದೆ ಮಠದ ಸೇವಕರಿಗಾಗಿ ಕೆಲವು ದತ್ತಿಗಳನ್ನು ಕೊಟ್ಟು ಶಾಸನ ಬರೆಯಿಸಿದನು. ಇವರಂತೆಯೇ ನಾಗವಂಶದ ಸೇಂದ್ರಕರೂ ಪ್ರಾಚೀನ ಮನೆತನಕ್ಕೆ ಸೇರಿದ

ವರು. ಇವರು ಈಗಿನ ಶಿವಮೊಗ್ಗ ಪ್ರಾಂತದಲ್ಲಿ ಆಳುತ್ತಿದ್ದರು. ಇವರು ಬಹಳಕಾಲ ಗುಜರಾತ್ ಪ್ರಾಂತದಲ್ಲಿಯೂ ರಾಜ್ಯಭಾರ ಮಾಡುತ್ತಿದ್ದರೆಂದು ತಿಳಿದು ಬರುತ್ತದೆ. ಕ್ರಿ. ಶ. ಒಂಭತ್ತನೆಯ ಶತಮಾನದ ಹೊತ್ತಿಗೆ ಸೇಂದ್ರಕರ ಹೆಸರೇ ಇಲ್ಲದಂತಾಯಿತು.

ಕನ್ನಡ ನಾಡಿನ ಪುಟ್ಟ ರಾಜವಂಶಗಳಲ್ಲಿ ನಳರು ಪ್ರಸಿದ್ಧರಾಗಿದ್ದಾರೆ. ಇವರು ಈಗಿನ ಬಳ್ಳಾರಿ ಪ್ರಾಂತದಲ್ಲಿ ಆಳುತ್ತಿದ್ದರು. ಪ್ರಬಲರಾದ ಚಾಳುಕ್ಯರ ಏಟಿನಿಂದ ಇವರು ಹನ್ನೊಂದನೆಯ ಶತಮಾನದಲ್ಲಿ ಕಣ್ಮರೆಯಾದರು. ಪುನ್ನಾಡ ಮನೆತನ ಈಗಿನ ಮೈಸೂರು ಪ್ರಾಂತದಲ್ಲಿ ಕಪಿಲಾ ನದಿಯ ತೀರದಲ್ಲಿರುವ ಕೀರ್ತಿಪುರದಲ್ಲಿ ಆಳುತ್ತಿತ್ತು. ಜೈನಗುರು ಭದ್ರಬಾಹು ಈ ಪುನ್ನಾಡಿಗೆ ಬಂದಿದ್ದನೆಂದು ಪ್ರತೀತಿಯಿದೆ. ಕ್ರಿ. ಶ. ಮೂರನೆಯ ಶತಮಾನದಲ್ಲಿ ಕದಂಬರ ಮಯೂರವರ್ಮ ಈ ನಾಡನ್ನು ಜಯಿಸಿದನು. ಗಂಗವಂಶದ ಅವಿನೀತನು ಪುನ್ನಾಡು ರಾಜ ಸ್ಕಂದವರ್ಮನ ಮಗಳನ್ನು ಮದುವೆಯಾಗಿದ್ದನು. ಕೊನೆಗೆ ಈ ಸೀಮೆ ಗಂಗರಾಜ್ಯದಲ್ಲಿಯೇ ಸೇರಿಹೋಯಿತು. ಈ ಪುನ್ನಾಡು ಸೀಮೆಯ ಹದಿನಾಡು ರಾಜ್ಯವನ್ನು ಮೈಸೂರಿನ ಕಂಠೀರವ ನರಸರಾಜ ಒಡೆಯರು ಪಡೆದರು. ಹೀಗೆ ಮೈಸೂರಿಗೂ ಪುನ್ನಾಡಿಗೂ ಇತಿಹಾಸದಲ್ಲಿ ಸಂಬಂಧವಿದೆ.

ಕನ್ನಡ ನಾಡಿನಲ್ಲಿ ಕ್ರಿ. ಶ. ಮೂರನೆಯ ಶತಮಾನದಲ್ಲಿ ಕದಂಬರು ಮುಂದೆ ಬಂದರು. ಇವರು ಹುಟ್ಟುಕನ್ನಡಿಗರೆಂದೂ ಬನವಾಸಿಯ ಸ್ಥಳದವರೆಂದೂ ನಿರ್ಧರಿಸಿ ಹೇಳಬಹುದು. ಅವರ ರಾಜಮುದ್ರೆಯಲ್ಲಿ ಸಿಂಹ, ಧ್ವಜದಲ್ಲಿ ವಾನರ ಇವೆ. ಬನವಾಸಿಯ ಮಧುಕೇಶ್ವರನೇ ಅವರ ಮನೆದೇವರು. ಮೊದಲು ಮೊದಲು ಅವರು ಮೈಸೂರಿನ ವಾಯವ್ಯ ಪ್ರಾಂತದಲ್ಲಿ ಆಳುತ್ತಿದ್ದರು. ಇವರಲ್ಲಿ ಮೊದಲನೆಯ ಇತಿಹಾಸಪುರುಷ ಮಯೂರವರ್ಮ. ಇವನು ಬ್ರಾಹ್ಮಣನಾದರೂ ರಣಪರಾಕ್ರಮಿಯಾಗಿದ್ದನು. ಇವನು ತನ್ನ ಸಾಹಸದಿಂದ ಪಲ್ಲವರನ್ನು ಸೋಲಿಸಿ ವಿಸ್ತಾರವಾದ ಚಕ್ರಾಧಿಪತ್ಯವನ್ನು ಸ್ಥಾಪಿಸಿದನು. ಅಶ್ವಮೇಧ ಯಾಗವನ್ನು ಮಾಡಿ ಕೀರ್ತಿಶಾಲಿಯಾದನು. ಇವನ ತರುವಾಯ ಆಳಿದ ರಾಜರುಗಳಲ್ಲಿ ಕಾಕುತ್ಸ್ಥವರ್ಮ, ಮೃಗೇಶವರ್ಮ ಮುಂತಾದವರು ಪ್ರಸಿದ್ಧರಾಗಿದ್ದರು. ವಿಜಯನಗರ ಸಾಮ್ರಾಜ್ಯ ತಲೆ

ಎತ್ತುವವರೆಗೂ ಕದಂಬರು ಅಲ್ಲಲ್ಲಿ ರಾಜ್ಯವಾಳುತ್ತಲೇ ಇದ್ದರು. ಈ ವಂಶದವರು ಸುಮಾರು ಒಂದು ಸಾವಿರವರ್ಷ ಕಾಲ ರಾಜ್ಯವಾಳಿದರು.

ಕನ್ನಡ ನಾಡಿನ ಸಾಹಿತ್ಯ ಮತ್ತು ಸಂಸ್ಕೃತಿಗಳನ್ನು ಅಭಿವೃದ್ಧಿಗೆ ತಂದವರಲ್ಲಿ ಗಂಗವಂಶದವರು ವಿಶಾಲಕೀರ್ತಿಯನ್ನು ಗಳಿಸಿದರು. ಇವರು ಬಹು ಪ್ರಾಚೀನವಂಶಕ್ಕೆ ಸೇರಿದವರು. ಇವರಲ್ಲಿ ಮೊಟ್ಟಮೊದಲಿನ ಐತಿಹಾಸಿಕ ಪುರುಷರು ಮಾಧವ ಮತ್ತು ದಡಿಗ. ಸಿಂಹನಂದಿ ಎಂಬ ಜೈನಗುರುವಿನ ಸಹಾಯದಿಂದ ರಾಜ್ಯಸ್ಥಾಪನೆ ಮಾಡಿದರು. ಇವರು ಮೊದಲು ಕುವಲಾಲ ಪುರ (ಕೋಲಾರ) ದಲ್ಲಿ ರಾಜ್ಯವಾಳುತ್ತಿದ್ದು ಆಮೇಲೆ ತಲಕಾಡಿನಲ್ಲಿ ನೆಲಸಿದರು. ಇವರು ಜೈನಮತಾನುಯಾಯಿಗಳಾಗಿದ್ದು ಅನಂತರ ವೈಷ್ಣವ ಮತವನ್ನು ಅವಲಂಬಿಸಿದರು. ಈ ಮನೆತನದ ದುರ್ವಿನೀತನೆಂಬುವನು ಭಾರವಿಯ 'ಕಿರಾತಾರ್ಜುನೀಯ' ಕಾವ್ಯದ ಹದಿನೈದನೆಯ ಸರ್ಗಕ್ಕೆ ವ್ಯಾಖ್ಯಾನವನ್ನು ಬರೆದಿದ್ದಾನೆ. ಶ್ರೀ ಪುರುಷನ ಕಾಲದಲ್ಲಿ ಗಂಗರಾಜ್ಯ ಅತ್ಯಂತ ಅಭಿವೃದ್ಧಿಗೆ ಬಂತು. ಈತನು ಮಾನ್ಯಪುರವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ದರ್ಪದಿಂದ ರಾಜ್ಯವಾಳಿದನು. ಸುಮಾರು ಹನ್ನೊಂದನೆಯ ಶತಮಾನದಲ್ಲಿ ಗಂಗರಾಜ್ಯಕ್ಕೆ ಚೋಳರ ಪೆಟ್ಟು ಬಲವಾಗಿ ಬಿತ್ತು. ಕಾಲಕ್ರಮದಲ್ಲಿ ಗಂಗರು ವಿಜಯನಗರ ಸಾಮ್ರಾಜ್ಯದಲ್ಲಿ ಸೇರಿಹೋದರು. ಗಂಗರು ಕಳಿಂಗದಲ್ಲಿಯೂ ನೇಪಾಳದಲ್ಲಿಯೂ ರಾಜ್ಯವಾಳಿ ಕರ್ಣಾಟಕದ ಕೀರ್ತಿ ಪ್ರತಿಷ್ಠೆಗಳನ್ನು ಹೆಚ್ಚಿಸಿದರು.

ಬಾದಾಮಿಯ ಚಾಳುಕ್ಯರು, ರಾಷ್ಟ್ರಕೂಟರು, ಕಲ್ಯಾಣಿಯ ಪಶ್ಚಿಮ ಚಾಳುಕ್ಯರು, ಯಾದವರು ಮತ್ತು ಹೊಯ್ಸಳರು ಕರ್ಣಾಟಕದ ವೈಭವವನ್ನೂ ಪ್ರಭಾವವನ್ನೂ ಹೆಚ್ಚಿಸಿದರು. ಬಾದಾಮಿಯ ಚಾಳುಕ್ಯರಲ್ಲಿ ಒಂದನೆಯ ಪುಲಿಕೇಶಿ ಅತ್ಯಂತ ಪ್ರಸಿದ್ಧನಾಗಿದ್ದಾನೆ. ಹಾಗೆಯೇ ಎರಡನೆಯ ಪುಲಿಕೇಶಿಯ ಹೆಸರೂ ಚರಿತ್ರೆಯಲ್ಲಿ ಶಾಶ್ವತವಾಗಿ ನಿಂತಿದೆ.

ಪಶ್ಚಿಮ ಚಾಳುಕ್ಯರ ತೈಲಪನ ಕಾಲದಲ್ಲಿ ಕನ್ನಡ ನಾಡಿಗೆ ಪ್ರಬಲಶಕ್ತಿಯುಂಟಾಯಿತು. ಇವರಲ್ಲಿ ಆರನೆಯ ವಿಕ್ರಮಾದಿತ್ಯ ಎಂಬುವನು ಪ್ರಸಿದ್ಧನು. ಈ ಕಾಲದಲ್ಲಿ ಹೊಯ್ಸಳ ಮತ್ತು ಕಲಚೂರಿ ವಂಶದವರು ತಲೆಯೆತ್ತಿದರು. ಹತ್ತನೆಯ ಶತಮಾನದಲ್ಲಿ ಕರ್ಣಾಟಕರ ಜನಜೀವನ ಪೌರುಷ

ಮಯವಾಗಿತ್ತು. ಆ ವೇಳೆಗಾಗಲೆ, ಕನ್ನಡಿಗರು ಯುದ್ಧ ವಿದ್ಯಾ ಪ್ರ
ಣರೂ, ಸಾಹಿತ್ಯ ಸಂಸ್ಕೃತಿ ಪರಿಪೋಷಕರೂ ಆಗಿದ್ದರು. ಕನ್ನಡ ನಾ
ಇತಿಹಾಸ ಉಜ್ವಲವಾಗಿತ್ತು.

ಇನ್ನು ಯಾದವ ಮತ್ತು ಹೊಯ್ಸಳ ವಂಶದ ರಾಜಮನೆತನಗಳ
ಹಾಸವನ್ನು ಅರಿಯಬೇಕು. ಹಿಂದಿನಿಂದಲೂ ಅನೂಚಾನವಾಗಿ ಬ
ಕನ್ನಡಿಗರ ಪೌರುಷ ಪ್ರತಾಪಗಳನ್ನೂ ಧರ್ಮ ಸಂಸ್ಕೃತಿಗಳನ್ನೂ ಯಾ
ವರೂ ಮತ್ತು ಹೊಯ್ಸಳರೂ ಅಚ್ಚಳಿಯದಂತೆ ಉಳಿಸಿಕೊಂಡು ಬಂದ
ಈ ಉಭಯ ರಾಜಮನೆತನಗಳ ಆಶ್ರಯದಲ್ಲಿ ಕನ್ನಡ ರಾಜ್ಯ ಮತ್ತೆ
ಗಟ್ಟಿಕೊಂಡು ಚೇತೋವಿಹಾರಿಯಾಗಿ ನಲಿಯುವಂತಾಯಿತು. ಈ ರಾ
ಗಳು ಹದಿನಾಲ್ಕನೆಯ ಶತಮಾನದಲ್ಲಿ ಮುಸಲ್ಮಾನರ ಹಾವಳಿಯಿಂದ ರೂ
ಗೆಟ್ಟರೂ ಮುಂದೆ ವಿಜಯನಗರ ಸಾಮ್ರಾಜ್ಯದಲ್ಲಿ ರೂಪುಗೊಂಡವೆಂ
ಧಾರಾಳವಾಗಿ ಹೇಳಬಹುದು. ಅಷ್ಟೇ ಏಕೆ! ಇನ್ನು ಕನ್ನಡನಾಡಿ
ಏಕೈಕರಾಜ ಮನೆತನವಾಗಿ ಅಭಿವೃದ್ಧಿಯನ್ನು ಹೊಂದುತ್ತಿರುವ ಮೈಸೂ
ಯದುವಂಶದ ಅಂತಶ್ಶಕ್ತಿಗಳಾಗಿಯೂ ನಿಂತವು.

ಒಟ್ಟಿನಲ್ಲಿ ಹೇಳುವುದಾದರೆ, ಹದಿಮೂರನೆಯ ಶತಮಾನದಿಂದ
ಕರ್ಣಾಟಕ ಸಾಮ್ರಾಜ್ಯದ ಶಕ್ತಿ ಬಲವಾಗುತ್ತಿತ್ತು. ರಾಜಕೀಯ ಮ
ಧಾರ್ಮಿಕ ಕ್ರಾಂತಿಗಳಿಂದ ಜನರು ದಿಕ್ಕುಗೆಟ್ಟಂತಾಗಿದ್ದರು. ನಾಡಿ
ಅರಾಜಕತೆ ತುಂಬಿತ್ತು. ಅಖಂಡ ಕರ್ಣಾಟಕವನ್ನು ಒಟ್ಟುಗೂಡಿಸಿ ರಾ
ಶಕ್ತಿಯನ್ನು ಒಮ್ಮುಖವಾಗಿ ತಿರುಗಿಸಿ ಹಿಡಿಯಬಲ್ಲ ಸಾಮ್ರಾಜ್ಯವೇ
ದಂತಾಯಿತು. ಆಗ ಉತ್ತರಭಾಗದಲ್ಲಿ ದೇವಗಿರಿಯ ಯಾದವ
ದಕ್ಷಿಣಭಾಗದಲ್ಲಿ ದ್ವಾರಸಮುದ್ರದ ಹೊಯ್ಸಳರೂ ಕೆಲವು ಕಾಲ ಪ್ರ
ರಾಗಿದ್ದರು. ದೇವಗಿರಿಯ ಸಂಘಣ ಭೂಪಾಲನೂ ದ್ವಾರಸಮುದ್ರ
ಇಮ್ಮಡಿ ವೀರ ಬಲ್ಲಾಳನೂ ಪರಾಕ್ರಮದಿಂದಲೇ ರಾಜ್ಯವಾಳಿದರು.

ಹದಿನಾಲ್ಕನೆಯ ಶತಮಾನದ ಪ್ರಾರಂಭದಲ್ಲಿ ಕರ್ಣಾಟಕದ ಪ್ರ
ಶಕ್ತಿ ಕುಗ್ಗಿತು. ಎಲ್ಲೆಲ್ಲೂ ಅಂತಃಕಲಹಗಳೂ ಸಣ್ಣ ಪುಟ್ಟ ಯು
ಗಳೂ ನಡೆಯುತ್ತಿದ್ದುವು. ಪ್ರಜಾನೆಮ್ಮದಿಗೆ ಭಂಗ ಬಂತು. ರಾ
ಧರ್ಮ ಕಾಡುಪಾಲಾಯಿತು. ಹಿಂದಿನ ವೈಭವವೆಲ್ಲ ಕಣ್ಮರೆಯಾಗ

ಬಂತು. ಅಲ್ಲೊಂದು ಇಲ್ಲೊಂದು ಹೆಸರಿಗೆ ಮಾತ್ರ ನಿಂತಿದ್ದ ಕನ್ನಡ ರಾಜ ಮನೆತನಗಳು ಶಕ್ತಿಹೀನವಾಗಿದ್ದುವು. ಉತ್ತರದ ಕಡೆಯಿಂದ ಝಂಝಾ ಮಾರುತದಂತೆ ನುಗ್ಗಿ ಬರುತ್ತಿದ್ದ ವಿಧರ್ಮೀಯರನ್ನು ತಡೆದು ನಿಲ್ಲಿಸುವಷ್ಟು ಪ್ರಬಲ ರಾಜ್ಯಗಳೇ ಇರಲಿಲ್ಲ. ಅಷ್ಟೇಕೆ! ಪರಕೀಯರ ಪದಾಘಾತದಿಂದ ಕನ್ನಡ ನಾಡು ಕತ್ತರಿಸಿ ಹೋಯಿತು. ಎದೆಗೆಟ್ಟು ನಿಂತಿತು. ತನ್ನ ಧರ್ಮ, ಸಂಸ್ಕೃತಿಗಳು ಉಳಿಯುತ್ತವೆಯೋ ಅಳಿಯುತ್ತವೆಯೋ ಎಂದು ನಾಡು ನಡುಗಿತು; ಜನತೆ ಕಂಗೆಟ್ಟಿತು.

ರಾಜ್ಯದಾಹದಿಂದ ಪೀಡಿತರಾದ ಮುಸಲ್ಮಾನರು ಆವರೆಗಾಗಲೇ ಭರತ ಖಂಡಕ್ಕೆ ಕಾಲಿಟ್ಟು, ಉತ್ತರ ಭಾರತದ ಬಹುಭಾಗವನ್ನು ಆಕ್ರಮಿಸಿಕೊಂಡಿದ್ದರು. ಅವರ ಕ್ರೂರದೃಷ್ಟಿ ಕ್ರಮೇಣ ದಕ್ಷಿಣದ ಕಡೆಗೆ ಹೊರಳಿತು. ಅವರು ಮೊಟ್ಟಮೊದಲು ದಕ್ಷಿಣಾಪಥಕ್ಕೆ ನುಗ್ಗಿ ಬಂದುದು ಹದಿಮೂರನೆಯ ಶತಮಾನದಲ್ಲಿ. ಎಲ್ಲಕ್ಕಿಂತ ಮೊದಲು ಆ ಹಿಂಸಕರ ಕೈಹಿಡಿತಕ್ಕೆ ಸಿಕ್ಕಿ ತೊಂದರೆ ಪಟ್ಟುದು ಕರ್ಣಾಟಕವೇ. ಆಗಿದ್ದ ಕನ್ನಡ ನಾಡಿನ ಪರಿಸ್ಥಿತಿಯು ಪರಕೀಯರಿಗೆ ಅನುಕೂಲವಾಗಿಯೇ ಇತ್ತು.

ಆಗ ದೇವಗಿರಿಯಲ್ಲಿ ಯಾದವರು ರಾಜ್ಯವಾಳುತ್ತಿದ್ದರು. ಓರಂಗಲ್ಲು ಮತ್ತು ದ್ವಾರಸಮುದ್ರಗಳಲ್ಲಿ ಹೊಯ್ಸಳರು ಆಳುತ್ತಿದ್ದರು. ತೀರ ದಕ್ಷಿಣದಲ್ಲಿ ಪಾಂಡ್ಯರು ಮಧುರೆಯಲ್ಲಿ ರಾಜ್ಯವಾಳುತ್ತಿದ್ದರು. ಈ ರಾಜ್ಯಗಳಿಗೆ ಸೇರಿದ ಅನೇಕ ಸಣ್ಣ ಸಣ್ಣ ಮಾಂಡಲಿಕರು ಬೇರೆಬೇರೆ ಭಾಗಗಳಲ್ಲಿ ದೊರೆತನ ಮಾಡುತ್ತಿದ್ದರು. ಈ ಎಲ್ಲ ರಾಜ್ಯಗಳೂ ನಿರ್ಬಲವಾಗಿದ್ದುವು. ಅವರಲ್ಲಿ ಒಗ್ಗಟ್ಟಿರಲಿಲ್ಲ. ಇಂಥ ಸಮಯದಲ್ಲಿ ಮುಸಲ್ಮಾನರು ದಕ್ಷಿಣಾಪಥದಮೇಲೆ ದಂಡೆತ್ತಿಬಂದರು. ಅವರು ಹಳ್ಳಿಗಳನ್ನು ಕೊಳ್ಳೆ ಹೊಡೆಯುತ್ತ, ಗೋವುಗಳನ್ನು ಸಂಹರಿಸುತ್ತ, ದೇವಾಲಯಗಳನ್ನು ನೆಲಸಮ ಮಾಡುತ್ತ ಸ್ತ್ರೀಯರ ಮಾನಾಪಹರಣ ಮಾಡುತ್ತ ಭೀಕರ ರಾಕ್ಷಸರಂತೆ ನುಗ್ಗಿ, ನಿರ್ವೀರ್ಯರಾಗಿದ್ದ ಕನ್ನಡ ರಾಜಮನೆಗಳನ್ನು ಒಂದೊಂದಾಗಿ ಕಬಳಿಸುತ್ತ ಬಂದರು. ಅಲ್ಲಾವುದ್ದೀನ್ ಖಿಲ್ಜಿ ದೇವಗಿರಿಯನ್ನು ಮುತ್ತಿ, ಅಲ್ಲಿ ಆಳುತ್ತಿದ್ದ ಯಾದವ ಅರಸನನ್ನು ಯುದ್ಧದಲ್ಲಿ ಸೋಲಿಸಿ ರಾಜ್ಯವನ್ನು ಕೊಳ್ಳೆ ಹೊಡೆದು ಅಪಾರವಾದ ಸುಲಿಗೆಯನ್ನು ತೆಗೆದುಕೊಂಡು ದೆಹಲಿಗೆ ಹಿಂತಿರುಗಿದನು. ಅಲ್ಲಿಂದ ಮುಂದೆ ದೇವಗಿರಿ ದೆಹಲಿ ಬಾದಷಹರ

ಮಾಂಡಲಿಕ ರಾಜ್ಯವಾಯಿತು. ಆಮೇಲೆ ಅವನು ಗುಜರಾತನ್ನು ಆಕ್ರಮಿಸಿ ಕೊಂಡು ಓರಂಗಲ್ಲು ರಾಜ್ಯದಮೇಲೆ ಸಾಗಿಹೋದನು. ಆದರೆ ಅವನಿಗೆ ಆಗ ಅಲ್ಲಿ ಜಯವಾಗಲಿಲ್ಲ. ಕೆಲವು ಕಾಲದಮೇಲೆ ಅಲ್ಲಾವುದ್ದೀನನ ಸೇನಾಪತಿ ಮಲ್ಲಿಕಾಫರನು ದಕ್ಷಿಣದ ಕಡೆಗೆ ಬಂದನು. ಅವನು ಓರಂಗಲ್ಲನ್ನು ಹಿಡಿದು ಪ್ರಚಂಡ ಸಾಹಸದಿಂದ ದಕ್ಷಿಣಾಪಥವನ್ನೆಲ್ಲ ಗಡಗಡನೆ ನಡುಗಿಸಿ ಇಲ್ಲಿಯ ರಾಜ್ಯಗಳನ್ನೆಲ್ಲ ಸುಲಿದು ಮುಕ್ಕಿದನು. ಅವನು ದ್ವಾರಸಮುದ್ರವನ್ನು ವಶ ಪಡಿಸಿಕೊಂಡು ರಾಮೇಶ್ವರದವರೆಗೂ ನುಗ್ಗಿದನು. ಅಲ್ಲಿ ತನ್ನ ವಿಜಯ ಸ್ಮಾರಕವಾಗಿರುವಂತೆ ಒಂದು ಮಸೀದಿಯನ್ನು ಕಟ್ಟಿಸಿದನು. ಲೆಕ್ಕವಿಲ್ಲದಷ್ಟು ಐಶ್ವರ್ಯವನ್ನು ದೋಚಿಕೊಂಡು ಅವನು ದೆಹಲಿಗೆ ಹಿಂದಿರುಗಿದನು. ಆಗ ದೇವಗಿರಿ, ದ್ವಾರಸಮುದ್ರ ಮತ್ತು ಓರಂಗಲ್ಲು ರಾಜ್ಯಗಳು ಮುಸಲ್ಮಾನರ ಹೊಡೆತಕ್ಕೆ ಸಿಕ್ಕಿದರೂ ಸಂಪೂರ್ಣವಾಗಿ ನಷ್ಟವಾಗಲಿಲ್ಲ. ಹಾಗೂ ಹೀಗೂ ಉಸಿರಾಡುತ್ತಿದ್ದುವು.

ದೇವಗಿರಿಯ ಹರಪಾಲನೆಂಬ ಅರಸು ದೆಹಲಿ ಸಾಮ್ರಾಟನೊಂದಿಗೆ ವಿರೋಧವನ್ನು ಬೆಳೆಯಿಸಿದನು. ಆಗ ಮುಬಾರಕನು ದೆಹಲಿಯಲ್ಲಿ ರಾಜ್ಯ ವಾಳುತ್ತಿದ್ದನು. ಅವನು ದೇವಗಿರಿಯಮೇಲೆ ದಂಡೆತ್ತಿ ಬಂದು ಆ ರಾಜ್ಯ ವನ್ನು ಸಂಪೂರ್ಣವಾಗಿ ಹಾಳುಮಾಡಿದನು. ಹರಪಾಲನನ್ನು ಹಿಡಿದು ಪ್ಯೆತೊಗಲು ಸುಲಿಸಿದನು. ಅವನ ರುಂಡವನ್ನು ಅಗಸೆಯ ಬಾಗಿಲಿಗೆ ಕಟ್ಟಿಸಿದನು. ರಾಜಕುಟುಂಬವನ್ನು ಸೆರೆ ಹಿಡಿದು ತನ್ನೊಡನೆ ದೆಹಲಿಗೆ ಕರೆದೊಯ್ದನು. ಇದರಂತೆಯೇ, ಪ್ರತಾಪರುದ್ರದೇವನು ಓರಂಗಲ್ಲಿನಲ್ಲಿ ರಾಜ್ಯವಾಳುತ್ತಿದ್ದಾಗ, ಮುಸಲ್ಮಾನರು ಆ ರಾಜಧಾನಿಯನ್ನು ಧ್ವಂಸ ಮಾಡಿದರು , ರಾಜ್ಯ ಸಂಪೂರ್ಣವಾಗಿ ಹಾಳಾಯಿತು. ಆ ವೇಳೆಗೆ ಮಹ ಮ್ಮದ್ ತೊಗಲಕನು ದೆಹಲಿಯಲ್ಲಿ ರಾಜ್ಯವಾಳುತ್ತಿದ್ದನು. ಅವನ ಕಾಲದಲ್ಲಿ ಕರ್ಣಾಟಕಕ್ಕೆ ದೊಡ್ಡ ಪೆಟ್ಟು ಬಿತ್ತು

ಕ್ರಿ.ಶ. ೧೩೩೦ನೆಯ ವರ್ಷದ ಸುಮಾರಿನಲ್ಲಿ ಮುಸಲ್ಮಾನರು ದಕ್ಷಿಣ ದಲ್ಲಿ ತಮ್ಮ ಪೌರುಷವನ್ನು ಬೀರಿದ್ದರು. ಆಗ ಕೃಷ್ಣಾನದಿಯ ದಕ್ಷಿಣ ಪ್ರಾಂತವೆಲ್ಲ ಇನ್ನೂ ಹಿಂದೂರಾಜರ ಕೈಯಲ್ಲಿಯೇ ಇತ್ತು. ಆದರೆ, ಆಗಾಗ ಉತ್ತರದಿಂದ ಬರುತ್ತಿದ್ದ ಮುಸಲ್ಮಾನರ ಧಾಳಿಗಳನ್ನು ತಡೆಗಟ್ಟಿ ಸ್ವರಾಜ್ಯ

ಗಳನ್ನು ಉಳಿಸಿಕೊಳ್ಳುವ ಶಕ್ತಿ ಯಾರಿಗೂ ಇರಲಿಲ್ಲ. ದಕ್ಷಿಣದ ರಾಜ್ಯಗಳು ಕಂಗೆಟ್ಟು ಅದುರಲಾರಂಭಿಸಿದ್ದುವು. ಆನೆಗೊಂದಿ ಸಂಸ್ಥಾನಮಾತ್ರ ಇನ್ನೂ ಸ್ವತಂತ್ರವಾಗಿಯೇ ಇತ್ತು. ಮುಂದೆ ವಿಜಯನಗರ ರಾಜ್ಯ ಸ್ಥಾಪನೆಯ ಕಾರ್ಯದಲ್ಲಿ ಆನೆಗೊಂದಿರಾಜ್ಯ ಪ್ರಮುಖಪಾತ್ರವನ್ನು ವಹಿಸಿತು.

ಆನೆಗೊಂದಿ ಇತಿಹಾಸಪ್ರಸಿದ್ಧವಾದುದು. ಮಹಾ ಭಾರತಕಾಲದಲ್ಲಿ ಅದು ದಕ್ಷಿಣ ಹಸ್ತಿನಾವತಿ ಎಂದು ಹೆಸರಾಗಿದ್ದಿತು. ಪಾಂಡವರು ಒಂದು ವರ್ಷಪರ್ಯಂತ ವಿರಾಟನ ರಾಜಧಾನಿಯಲ್ಲಿ ಅಜ್ಞಾತವಾಸದಿಂದ ಕಾಲ ಕಳೆದಮೇಲೆ ಈ ಪಟ್ಟಣಕ್ಕೆ ಬಂದು ಇಲ್ಲಿ ಕೆಲವುಕಾಲ ವಾಸಿಸುತ್ತಿದ್ದರೆಂದೂ ಅವರು ಇದಕ್ಕೆ ಹಸ್ತಿನಾವತಿ ಎಂದು ಹೆಸರಿಟ್ಟರೆಂದೂ ಪ್ರತೀತಿ ಇದೆ. ರಾಮಾಯಣ ಕಾಲದಲ್ಲಿ ಪರಾಕ್ರಮಿಯಾದ ವಾಲಿಯ ರಾಜಧಾನಿಯಾಗಿದ್ದ ಕಿಷ್ಕಿಂಧಾ ನಗರಿ ಈಗ ಆನೆಗೊಂದಿ ಇರುವ ಸ್ಥಳದಲ್ಲಿತ್ತು. ಆ ಕಾಲದಲ್ಲಿ ಇಲ್ಲಿ ವಾನರರೆಂಬ ಜನರು ವಾಸಿಸುತ್ತಿದ್ದರು. ಕನ್ನಡ ವೀರಾಗ್ರಣಿಯೂ ನೈಷ್ಠಿಕ ಬ್ರಹ್ಮಚಾರಿಯೂ ಆದ ಹನುಮಂತನು ರಾಮ ಸುಗ್ರೀವ ಸಖ್ಯವನು ಬೆಳೆಯಿಸಿದುದು ಇಲ್ಲಿಯೇ. ಆನೆಗೊಂದಿಯ ನೆರೆಯಲ್ಲಿ ವಾಲಿಭಂಡಾರ್ಷವೆಂಬ ಸ್ಥಳವಿದೆ. ವಾಲಿಕಾಷ್ಟವೆಂಬ ದಿನ್ನೆಯಿದೆ. ರಾಮಾಯಣದಲ್ಲಿ ಉಕ್ತವಾಗಿರುವ ಅಂಜನಾದ್ರಿ, ಮಾಲ್ಯವಂತ, ಋಷ್ಯಮೂಕ, ಮಾತಂಗ, ಹೇಮಕೂಟ ಗಿರಿಪಙ್ಕ್ತಿಯೂ, ಪಂಪಾ ಸರೋವರವೆಂಬ ಜಲಾಶಯವೂ ಇಲ್ಲಿ ಕಂಗೊಳಿಸುತ್ತವೆ.

ಅತ್ಯಂತ ಪ್ರಾಚೀನಕಾಲದಿಂದಲೂ ಒಂದು ಹಿಂದೂ ರಾಜಮನೆತನ ಆನೆಗೊಂದಿಯಲ್ಲಿ ಆಳುತ್ತಿದ್ದಿತು. ರಾಜವಂಶಾವಳಿ ಎಂಬ ಪುರಾತನಗ್ರಂಥದಿಂದ ಈ ರಾಜ್ಯವನ್ನಾಳಿದ ಪ್ರಾಚೀನ ಪುರುಷರ ಹೆಸರುಗಳು ನಮಗೆ ಗೊತ್ತಾಗುತ್ತವೆ. ನಂದನೆಂಬುವನು ಆನೆಗೊಂದಿಯ ರಾಜವಂಶಕ್ಕೆ ಮೂಲಪುರುಷನು. ಅವನ ಮಗ ಚಾಲುಕ್ಯನು ಪರಾಕ್ರಮದಿಂದ ರಾಜ್ಯವಾಳಿದನು. ಅವನಿಗೆ ಮೂರು ಜನ ಗಂಡುಮಕ್ಕಳಿದ್ದರು. ಹಿರಿಯ ಮಗ ಬಿಜ್ಜಳನು ಕಲ್ಯಾಣಕ್ಕೆ ಹೋಗಿ ಹೊಸ ರಾಜ್ಯವನ್ನು ಸ್ಥಾಪಿಸಿದನು. ಎರಡನೆಯ ಮಗ ವಿಜಯಧ್ವಜನೆಂಬುವನು ತಂದೆಯ ತರುವಾಯ ೩೩ ವರ್ಷ ರಾಜ್ಯವಾಳಿದನು. ಇವನು ತನ್ನ ಆಳಿಕೆಯ ಕಾಲದಲ್ಲಿ (ಕ್ರಿ. ಶ. ೧೧೫೦) ತುಂಗಭದ್ರೆಯ

ದಕ್ಷಿಣ ತೀರದಲ್ಲಿ ವಿಜಯನಗರವೆಂಬ ಹೊಸಪಟ್ಟಣವನ್ನು ಕಟ್ಟಿಸಿ, ಅದನ್ನು ಕೋಟೆ ಕೊತ್ತಲುಗಳಿಂದ ಭದ್ರಪಡಿಸಿದನು. ಆದರೆ ಅವನು ಅದನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಳ್ಳಲಿಲ್ಲ ಆನೆಗೊಂದಿಯಲ್ಲಿಯೇ ಅವನು ರಾಜ್ಯವಾಳುತ್ತಿದ್ದನು. ಕೇವಲ ಯುದ್ಧದ ಸಮಯದಲ್ಲಿ ಉಪಯೋಗವಾಗಬೇಕೆಂದು ಈ ವನದುರ್ಗವನ್ನು ಕಟ್ಟಿಸಿದ್ದನು. ಆನೆಗೊಂದಿ ಶತ್ರುಗಳನ್ನು ಎದುರಿಸಿ ಕಾದಾಡಲು ತಕ್ಕ ಸ್ಥಳವಾಗಿರಲಿಲ್ಲ. ಆದ್ದರಿಂದಲೇ ವಿಜಯಧ್ವಜನು ಈ ವಿಜಯನಗರ ಕೋಟೆಯನ್ನು ಕಟ್ಟಿಸಿದನೆಂದು ಹೇಳುತ್ತಾರೆ. ತರುವಾಯ ಇವನ ಮಗ ಅನುಮೇಯನು ಸುಮಾರು ೨೩ ವರ್ಷ ರಾಜ್ಯವಾಳಿದನು. ಅವನ ಅನಂತರ ಅವನ ಮಗ ನರಸಿಂಗದೇವರಾಯನು ಸುಮಾರು ಅರುವತ್ತೇಳುವರ್ಷ ರಾಜ್ಯಭಾರ ಮಾಡಿದನು. ಇವನು ಅತಿ ಪ್ರಬಲನಾದ ದೊರೆಯೆನ್ನಿಸಿಕೊಂಡಿದ್ದನು. ಇವನ ಕಾಲದಲ್ಲಿ ಆನೆಗೊಂದಿಯ ವೈಭವ ತುಂಬ ಬೆಳೆಯಿತು. ಮುಸಲ್ಮಾನರು ಇವನ ರಾಜ್ಯವನ್ನು ನರಸಿಂಗನ ರಾಜ್ಯವೆಂದು ಕರೆಯುತ್ತಿದ್ದರು. ಇವನ ತರುವಾಯ ಇವನ ಮಗ ರಾಮದೇವರಾಯ ೨೫ ವರ್ಷ ರಾಜ್ಯವಾಳಿದನು. ಅವನ ಆಳಿಕೆಯು ಮುಗಿದ ಮೇಲೆ, ಪ್ರತಾಪರಾಯನೆಂಬುವನು ದಕ್ಷತೆಯಿಂದ ರಾಜ್ಯವಾಳಿದನು. ಬಳಿಕ ಇವನ ಮಗ ಜಂಬುಕೇಶ್ವರರಾಯ ಸಿಂಹಾಸನಕ್ಕೆ ಬಂದನು. ವಿದ್ಯಾರಣ್ಯರು ವಿಜಯನಗರರಾಜ್ಯ ಸ್ಥಾಪನೆಗೆ ಹವಣಿಸುತ್ತಿದ್ದಾಗ ಜಂಬುಕೇಶ್ವರರಾಯನೇ ಆನೆಗೊಂದಿಯ ರಾಜನಾಗಿದ್ದನು. ಆಗ ಅವನು ಮುದುಕನಾಗಿದ್ದನು. ಅವನಿಗೆ ಗಂಡು ಮಕ್ಕಳಿರಲಿಲ್ಲ. ಗಿರಿಜಾಂಬೆ ಎಂಬ ಒಬ್ಬಳೇ ಮಗಳಿದ್ದಳು. ಅವನಿಗೆ ವಯಸ್ಸಾಗಿದ್ದುದರಿಂದಲೂ ಮತ್ತು ತನ್ನ ತರುವಾಯ ಪಟ್ಟವೇರುವ ಪುತ್ರನಿಲ್ಲದ್ದರಿಂದಲೂ ಅವನು ಯಾವಾಗಲೂ ಪಾರಮಾರ್ಥ ಸಾಧನೆಯಲ್ಲಿಯೇ ನಿರತನಾಗಿದ್ದನು. ರಾಜ್ಯಭಾರವನ್ನು ಅವನ ಮಂತ್ರಿ ಸಂಗಮನೆಂಬುವನೇ ಚತುರತೆಯಿಂದ ನಡಸುತ್ತಿದ್ದನು.

ಹೀಗೆಯೇ, ಅದೇ ಕಾಲದಲ್ಲಿ ಕಂಪಿಲರಾಜ್ಯವೂ ಪ್ರಸಿದ್ಧವಾಗಿತ್ತು. ಆನೆಗೊಂದಿಯ ಪೂರ್ವಕ್ಕೆ ಸುಮಾರು ಮೂರು ಹರಿದಾರಿ ದೂರದಲ್ಲಿದೆ. ಇದರ ಸುತ್ತಲೂ ಎತ್ತರವಾದ ದಿನ್ನೆಗಳಿದ್ದು, ಶತ್ರುಗಳಿಗೆ ದುರ್ಭೇದ್ಯವಾಗಿಯೇ ಇತ್ತು. ಅದರ ಸುತ್ತಲೂ ಬಲವಾದ ಕೋಟೆ ಇತ್ತು. ವಿದ್ಯಾರಣ್ಯರ

ಕಾಲದಲ್ಲಿ ರಾಯಿ ಎಂಬುವನು ಕಂಪಿಲ ರಾಜ್ಯದ ಪ್ರಭುವಾಗಿದ್ದನು. ಅವನು ಶೂರನೂ ಧಾರ್ಮಿಕನೂ ಆಗಿದ್ದನು. ಆನೆಗೊಂದಿಯ ಜಂಬುಕೇಶ್ವರರಾಯನಿಗೆ ಕಂಪಿಲ ನಗರಿಯ ರಾಯಿಯು ಸಾಮಂತನಾಗಿದ್ದನು. ಈ ಎರಡು ರಾಜ್ಯಗಳೂ ವಿಜಯನಗರ ಸಾಮ್ರಾಜ್ಯಸ್ಥಾಪನೆಗೆ ತಮ್ಮ ಅನಂತ ಶಕ್ತಿಕಾಣಿಕೆಯನ್ನು ನೀಡಿವೆ.

ಕನ್ನಡ ನಾಡಿನ ಇತಿಹಾಸವನ್ನು ಸಿಂಹಾವಲೋಕನದಿಂದ ತಿಳಿದುದರಿಂದ, ಹದಿನಾಲ್ಕನೆಯ ಶತಮಾನದಲ್ಲಿ ವಿದ್ಯಾರಣ್ಯರು ನಿರ್ವಹಿಸಬೇಕಾಗಿದ್ದ ಕಾರ್ಯ ಎಷ್ಟು ಗುರುತರವಾಗಿತ್ತೆಂಬುದು ಮನದಟ್ಟಾಯಿತು. ಬೆಳೆದು ಬಂದಿದ್ದ ಸಾಹಿತ್ಯ ಮತ್ತು ಸಂಸ್ಕೃತಿಗಳನ್ನು ರಕ್ಷಿಸಲು ರಾಷ್ಟ್ರಶಕ್ತಿಯನ್ನು ಕೇಂದ್ರೀಕರಿಸಬೇಕೆಂದು ಅವರು ಪ್ರಯತ್ನಮಾಡಿದರು. ಅವರ ಅಧ್ಯಾತ್ಮ ಜೀವನ ತಪಸ್ಸು, ಲೌಕಿಕ ಜ್ಞಾನಾನುಭವ, ಸಮಯ ಸಂಧಾನ ಚಾತುರ್ಯ ಮತ್ತು ಲೋಕಹಿತೈಕಬುದ್ಧಿ – ಇವೆಲ್ಲವೂ ಕರ್ಣಾಟಕ ಸಾಮ್ರಾಜ್ಯ ಸ್ಥಾಪನೆಗೆ ನೆರವಾದುವು.

ಹೀಗೆ ಮುಸಲ್ಮಾನರ ಪ್ರಾಬಲ್ಯವನ್ನು ತಡೆಯಲು ಶಕ್ತಿಯಿಲ್ಲದೆ ದಕ್ಷಿಣದ ರಾಜ್ಯಗಳೆಲ್ಲ ಅಳಿಯುತ್ತ ಬಂದುವು. ಇನ್ನು ಆನೆಗೊಂದಿ ಕಂಪಿಲ ಮತ್ತು ಹಳೇಬೀಡು ರಾಜ್ಯಗಳು ಹೆಸರಿಗೆ ಮಾತ್ರ ನಿಂತಿದ್ದುವು. ಮುಸಲ್ಮಾನರ ಏಟಿನಿಂದ ಅವು ತಪ್ಪಿಸಿಕೊಳ್ಳುವಂತಿರಲಿಲ್ಲ.



## ಐದನೆಯ ಅಧ್ಯಾಯ

### ಅರುಣೋದಯ, ಅನುಸಂಧಾನ

ಧರ್ಮೋ ಹಿ ಯತ್ನೈಃ ಪುರುಷೇಣ ಸಾಧ್ಯೋ ।
ಭುಜಂಗ ಜಿಹ್ವಾ ಚಪಲಾ ನೃಪ ಶ್ರಿಯಃ ॥
ತಸ್ಮಾತ್ ಪ್ರಜಾಪಾಲನ ಮಾತ್ರ ಬುದ್ಧ್ಯಾ ।
ಹತೇಷು ದೇಹೇಷು ಗುಣಾಧರಂತೇ ॥

—ಭಾಸ ಮಹಾಕವಿ.

ವಿದ್ಯಾರಣ್ಯರು ತಮ್ಮ ಪವಿತ್ರ ಸಂಕಲ್ಪ ಸಾಧನೆಗಾಗಿ ಯಾವಾಗಲೂ ಅಂತರಂಗದಲ್ಲಿಯೇ ಪರಿತಪಿಸುತ್ತಿದ್ದರು. ಕಂಚಿಯಲ್ಲಿದ್ದ ವಿದ್ಯಾತೀರ್ಥರು ಶೃಂಗೇರಿ ಮಠದ ಆಡಳಿತಗಳನ್ನು ನಡೆಯಿಸುವುದು ಕಷ್ಟಸಾಧ್ಯವೆಂದು ತಿಳಿದು ತಮ್ಮ ಶಿಷ್ಯರಾದ ವಿದ್ಯಾರಣ್ಯರಿಗೆ ಶೃಂಗೇರಿ ಪೀಠದ ಗುರು ಪದವಿ ಯನ್ನು ವಹಿಸಿಕೊಟ್ಟರು. ಶೃಂಗೇರಿ ಮಠವನ್ನು ಅಭಿವೃದ್ಧಿಗೆ ತಂದು ವೇದಾಂತ ಧರ್ಮವನ್ನು ಪ್ರಚಾರಮಾಡಲು ವಿದ್ಯಾರಣ್ಯರೇ ಸಮರ್ಥರೆಂದು ವಿದ್ಯಾತೀರ್ಥರು ಮೊದಲೇ ಮನಗಂಡಿದ್ದರು. ಶೃಂಗೇರಿ ಮಠದ ಪುರಾಣ ದಿಂದಲೂ ಈ ವಿಷಯ ವ್ಯಕ್ತವಡುತ್ತದೆ. ಸನಾತನ ಧರ್ಮದ ಪುನರಭ್ಯು ದಯವಾಗಬೇಕಾದರೆ ಹಿಂದೂ ಜನರು ಸುಸಂಘಟಿತರಾಗಬೇಕು ; ಅದಕ್ಕಾಗಿ ಪ್ರಬಲವಾದ ಹಿಂದೂ ರಾಜ್ಯವು ಸ್ಥಾಪಿತವಾಗಬೇಕು; ಅದನ್ನು ಸಾಧಿಸ ಬೇಕಾದರೆ ಪರಾಕ್ರಮಿಗಳೂ, ಧರ್ಮರಕ್ಷಣ ಸಮರ್ಥರೂ, ದೇಶಾಭಿಮಾನಿ ಗಳೂ, ಕ್ಷತ್ರಿಯ ವಂಶೋತ್ಪನ್ನರೂ ಆದ ರಾಜರು ಬೇಕು;—ಹೀಗೆಂದು ವಿದ್ಯಾ ರಣ್ಯರು ನಿರ್ಧರಿಸಿ ತಾವು ಕೃತಕಾರ್ಯರಾಗಬೇಕಾದರೆ ಅದಕ್ಕೆ ತಕ್ಕ ಕಾಲ ವನ್ನು ನಿರೀಕ್ಷಿಸುತ್ತಿದ್ದರು.

ವಿದ್ಯಾರಣ್ಯರು ತಮ್ಮ ಗುರುವಿನ ಆಜ್ಞೆಯಂತೆ ಶೃಂಗೇರಿಯ ಪೀಠಾಧಿ ಕಾರವನ್ನು ವಹಿಸಿಕೊಂಡಿದ್ದರೂ ಅವರು ಹೆಚ್ಚುಕಾಲ ಪಂಪಾ ಕ್ಷೇತ್ರದಲ್ಲಿಯೇ ಇರುತ್ತಿದ್ದರು. ಆಗ ದೇಶೀಯರಾಜರಲ್ಲಿದ್ದ ಪರಸ್ಪರ ದ್ವೇಷಾಸೂಯೆಗಳನ್ನೂ ದುರಭಿಮಾನ ದುರಾಗ್ರಹಗಳನ್ನೂ ಹೋಗಲಾಡಿಸಿ, ರಾಜಕೀಯ ಪರಿಸ್ಥಿತಿ

ಯನ್ನು ಸರಿಪಡಿಸಿದ ಹೊರತು ಧರ್ಮ ಸಂಸ್ಥಾಪನೆಯಾಗಲಾರದೆಂಬುದು ಅವರು ಚೆನ್ನಾಗಿ ಅರಿತಿದ್ದರು. ಅಲ್ಲದೆ ಜನ ಸಾಮಾನ್ಯದಲ್ಲಿ ಐಕಮತ್ಯ ವನ್ನೂ ಧೈರ್ಯ ಸ್ಥೈರ್ಯಗಳನ್ನೂ, ದೇಶಾಭಿಮಾನವನ್ನೂ ಮತ್ತು ಧರ್ಮೋತ್ಸಾಹವನ್ನೂ ಹುಟ್ಟಿಸುವುದು ಅತ್ಯಾವಶ್ಯಕವೆಂದು ತಿಳಿದಿದ್ದರು. ಅದರಿಂದಲೇ ಅವರು ಕರ್ಣಾಟಕದ ಅಭುಕ್ತ ಮೂಲೆಯಲ್ಲಿದ್ದ ಶೃಂಗೇರಿ ಯಲ್ಲಿಯೇ ನಿಂತರೆ ಕಾರ್ಯಸಾಧನೆ ಶೀಘ್ರವಾಗಿ ಆಗಲಾರದೆಂದು ಹಂಪೆ ಯಲ್ಲಿರುತ್ತಿದ್ದರು. ಅಷ್ಟೇ ಅಲ್ಲ; ಆ ಕಾಲದಲ್ಲಿ ಕನ್ನಡ ರಾಜ್ಯಗಳೆಂದು ಹೇಳಿಸಿಕೊಳ್ಳುತ್ತಿದ್ದ ಆನೆಗೊಂದಿ ಮತ್ತು ಕಂಪಿಲ ನಾಡುಗಳ ನೆರೆಯಲ್ಲಿಯೇ ತಾವು ಇರುವುದರಿಂದ ಸಮಯವರಿತು ತಮ್ಮ ಸಂಕಲ್ಪವನ್ನು ಈಡೇರಿಸಿ ಕೊಳ್ಳಬಹುದೆಂದೂ ರಾಜಕಾರಣ ಚತುರರಾದ ವಿದ್ಯಾರಣ್ಯರು ಭಾವಿಸಿದ್ದರು. ಕರ್ಣಾಟಕದ ಮಧ್ಯರಂಗವಾಗಿರುವ ಹಂಪೆ ಆಗಿನ ರಾಜಕೀಯ ದೃಷ್ಟಿ ಯಿಂದ ಶೃಂಗೇರಿಗಿಂತಲೂ ಉತ್ತಮವಾದ ಸ್ಥಳವಾಗಿತ್ತು.

ವಿದ್ಯಾರಣ್ಯರು ತಮ್ಮ ಅಧ್ಯಾತ್ಮ ಜೀವನ ತಪಸ್ಸನ್ನು ಎಂದಿನಂತೆಯೇ ಸಾಂಗೋಪಾಂಗವಾಗಿ ನೆರವೇರಿಸುತ್ತಿದ್ದರು. ಕ್ರಿ. ಶ. ೧೩೩೪ನೆಯ ವರ್ಷ ದಲ್ಲಿ ದೆಹಲಿಯ ಸಮ್ರಾಟ ಮಹಮ್ಮದ್ ತೊಗಲಕನು ಆನೆಗೊಂದಿಯ ಮೇಲೆ ಕುಂಡೆತ್ತಿಬರುವ ಪ್ರಸಂಗ ಒದಗಿತ್ತು. ಅಷ್ಟು ಹೊತ್ತಿಗಾಗಲೇ ತೊಗಲಕನು ದಕ್ಷಿಣ ದಿಗ್ವಿಜಯಾರ್ಥಿಯಾಗಿ ಹೊರಟು ಓರಂಗಲ್ಲನ್ನು ಗೆದ್ದು, ದೇವಗಿರಿಯನ್ನು ಹಿಡಿದು ಅಲ್ಲಿ ತನ್ನ ಅಣ್ಣನಮಗ ಬಹಾಉದ್ದೀನ್ ಎಂಬುವ ನನ್ನು ರಾಜ ಪ್ರತಿನಿಧಿಯಾಗಿ ಬಿಟ್ಟಿದ್ದನು. ಇಂಥ ರಾಜಕೀಯ ವಿಪ್ಲವದಲ್ಲಿ ಅನೇಕ ಶೂರರೂ ಸೇನಾಧಿಕಾರಿಗಳೂ ದೇಶಭ್ರಷ್ಟರಾಗಿ ಅಲೆಯುತ್ತಿದ್ದರು. ತೊಗಲಕನು ಹೊಯ್ಸಳ ರಾಜ್ಯವನ್ನು ಹಾಳುಮಾಡಿ, ಆನೆಗೊಂದಿಯ ಮೇಲೆ ತನ್ನ ವಕ್ರದೃಷ್ಟಿಯನ್ನು ತಿರುಗಿಸಿದ್ದನು. ಅದಕ್ಕೆ ಕಾರಣವೂ ಇತ್ತು. ಅವನು ವಿಸ್ತಾರವಾದ ಚಕ್ರಾಧಿಪತ್ಯವನ್ನು ಕಟ್ಟಿದ್ದನು. ಪೂರ್ವ ಭಾಗದಲ್ಲಿ ಬಂಗಾಳಾ ಪ್ರಾಂತವೂ ಪಶ್ಚಿಮದ ಕಡೆ ಗುಜರಾತ್ ಪ್ರಾಂತವೂ ಅವನಿಗೆ ಅಧೀನವಾಗಿದ್ದರೂ ಆಗಾಗ ಅಲ್ಲಿ ದಂಗೆಗಳೇಳುತ್ತಿದ್ದುವು. ಅವುಗಳನ್ನು ಅಡ ಗಿಸಿ ರಾಜ್ಯವನ್ನು ತಹಬಂದಿಗೆ ತರಬೇಕಾಗಿತ್ತು. ಅಲ್ಲದೆ, ಅವನು ಪರ್ಶಿಯಾ ದೇಶವನ್ನೂ ಚೀಣಾ ದೇಶವನ್ನೂ ಜಯಿಸಬೇಕೆಂಬ ಮಹತ್ವಾ

ಕಾಂಕ್ಷೆಯಿಂದ ಆಗಾಗ ದೊಡ್ಡ ದೊಡ್ಡ ಸೈನ್ಯಗಳನ್ನು ಕಳುಹಿಸುತ್ತಲೇ ಇದ್ದನು. ಈ ಮಹಾ ಪ್ರಯತ್ನದಲ್ಲಿ ಅವನು ತೊಡಗಿದ್ದಾಗ ಅವನ ರಾಜ್ಯದಲ್ಲಿಯೇ ಅಲ್ಲಲ್ಲಿ ಅನಾಯಕತ್ವ ತಲೆದೋರಿ ಮಾಂಡಲಿಕರೂ ಮತ್ತು ರಾಜಪ್ರತಿನಿಧಿಗಳೂ ಸ್ವತಂತ್ರರಾಗಲು ಯತ್ನಿಸುತ್ತಿದ್ದರು. ಹಾಗೆ ತಿರುಗಿ ಬಿದ್ದವರಲ್ಲಿ, ಬಹಾ ಉದ್ದೀನನೂ ಒಬ್ಬನು. ಅವನನ್ನು ಹಿಡಿದು ಶಿಕ್ಷಿಸಬೇಕೆಂದು ತೊಗಲಕನು ಅನುವಾದನು. ಆಗ ಬಹಾ ಉದ್ದೀನನು ದೇವಗಿರಿಯಿಂದ ಓಡಿಬಂದು ಆನೆಗೊಂದಿಯ ಅಥವಾ ಕಂಪಿಲರಾಜ್ಯದ ಜಂಬುಕೇಶ್ವರರಾಯನ ಮರೆಹೊಕ್ಕನು. ಈ ಸುದ್ದಿಯನ್ನು ಕೇಳಿ ತೊಗಲಕನು ಆನೆಗೊಂದಿಯನ್ನು ಮುತ್ತಬೇಕೆಂದು ನಿರ್ಧರಿಸಿದನು. ಆನೆಗೊಂದಿಯವರೂ ಯುದ್ಧಕ್ಕೆ ಸಿದ್ಧರಾಗುತ್ತಲೇ ಇದ್ದರು.

ಪರಿಸ್ಥಿತಿಯು ಹೀಗಿರುವಾಗ ವಿದ್ಯಾರಣ್ಯರು ಇದೇ ಸಮಯದಲ್ಲಿ ಹೊಸ ರಾಜ್ಯವನ್ನು ಕಟ್ಟಬೇಕೆಂದು ಹವಣಿಸುತ್ತಿದ್ದನು. ಒಂದು ದಿನ ಅವರು ತುಂಗಭದ್ರಾನದಿಯ ತೀರದಲ್ಲಿ ತಮ್ಮ ಶಿಷ್ಯರಾದ ಸದಾಶಿವ ಮತ್ತು ಚಂದ್ರಶೇಖರರೊಂದಿಗೆ ಸಂಚರಿಸುತ್ತ ಮಾರ್ಗಾಯಾಸದಿಂದ ಸ್ವಲ್ಪ ಹೊತ್ತು ವಿಶ್ರಮಿಸಿಕೊಳ್ಳಲು ಒಂದು ವಟವೃಕ್ಷದ ನೆರಳಿನಲ್ಲಿ ಕುಳಿತಿದ್ದರು. ಅಲ್ಲಿಗೆ ಸಮೀಪದಲ್ಲಿಯೇ ವಿಜಯಧ್ವಜನು ಕಟ್ಟಿಸಿದ್ದ ವಿಜಯನಗರವೆಂಬ ಕೋಟೆ ಕಾಣಿಸುತ್ತಿತ್ತು. ಅದು ಖಿಲವಾಗಿ ಕಳೆಗುಂದಿ ಹಾಳು ಸುರಿಯುತ್ತಿತ್ತು. ವಿದ್ಯಾರಣ್ಯರು ಅದನ್ನು ನೋಡಿ ಮನಸ್ಸಿನಲ್ಲಿಯೇ ದುಃಖಪಡುತ್ತಿದ್ದರು. ತುಂಗಭದ್ರಾನದಿಯ ಎಡದಲ್ಲಿಯೇ ಆನೆಗೊಂದಿ, ಬಲದಲ್ಲಿಯೇ ವಿಜಯಧ್ವಜರಾಜನು ಕಟ್ಟಿಸಿದ್ದ ಕೋಟೆ—ಎರಡೂ ಅವರ ಕಣ್ಣೆದುರಿಗೆ ನಿಂತಿದ್ದವು. ಆ ಕೋಟೆಯಿದ್ದ ಸ್ಥಳ ರಾಜಧಾನಿಯಾಗಿರಲು ಅನುಕೂಲವಾಗಿತ್ತು. ಒಂದುಕಡೆ ಋಷ್ಯಮೂಕಪರ್ವತ ಮತ್ತು ತುಂಗಭದ್ರಾನದಿ, ಇನ್ನೊಂದು ಕಡೆ ಮಾಲ್ಯವಂತ ಪರ್ವತ, ಮತ್ತೊಂದುಕಡೆ ಮಾತಂಗಪರ್ವತ—ಇವುಗಳಿಂದ ಕೂಡಿದ್ದ ಆ ಸ್ಥಳವು ಶತ್ರುಗಳ ಪ್ರವೇಶಕ್ಕೆ ದುಸ್ಸಾಧ್ಯವೆಂಬುದನ್ನು ವಿದ್ಯಾರಣ್ಯರ ಕಾಲಕ್ಕೆ ಬಹಳ ಹಿಂದೆಯೇ ವಿಜಯಧ್ವಜನು ಗೊತ್ತುಮಾಡಿದ್ದನು. ಆ ಸ್ಥಳದಲ್ಲಿಯೇ ತಾವು ರಾಜ್ಯಸ್ಥಾಪನೆ ಮಾಡಬೇಕೆಂದು ಆಲೋಚಿಸುತ್ತ, ಶಿಷ್ಯರೊಂದಿಗೆ ಆಶ್ರಮದ ದಾರಿ ಹಿಡಿದರು,

ಆಗ ಅಪರಾಹ್ನ ; ಸೂರ್ಯಗತಿಯು ಇಳಿಮುಖವಾಗಿದ್ದರೂ ಬಿಸಿಲು ಬಲು ಚುರುಕಾಗಿಯೇ ಇತ್ತು. ಅವರು ದಾರಿಯ ಕೆಲದಲ್ಲಿ ಅಲ್ಲಲ್ಲಿ ಮರದ ನೆರಳಿನಲ್ಲಿ ನಿಂತು ನಿಂತು ಹೋಗುತ್ತಿದ್ದರು. ಹಾಗೆಯೇ ಅವರು ಮುಂದೆ ಮುಂದೆ ಹೋಗುತ್ತಿದ್ದಾಗ ದಾರಿಯ ಪಕ್ಕದಲ್ಲಿ ಒಂದು ಆಶ್ಚರ್ಯಕರವಾದ ದೃಶ್ಯವನ್ನು ಕಂಡರು. ಯಾರೋ ಇಬ್ಬರು ಸುಂದರ ಯುವಕರು ಹೊಂಗೆಯ ಮರದ ನೆರಳಿನಲ್ಲಿ ಮಲಗಿ ಬಹಳ ಹೊತ್ತಾಗಿದ್ದಿರಬಹುದು. ಅವರು ಮಲಗಿದಾಗ ಇದ್ದ ಮರದ ನೆರಳು ದೂರ ಸರಿದಿತ್ತು. ಅವರ ಮುಖದಮೇಲೆ ಬಿಸಿಲು ಬಿದ್ದಿತ್ತು. ಆ ಸಮಯದಲ್ಲಿ ಒಂದು ಕೃಷ್ಣಸರ್ಪ ತನ್ನ ಹೆಡೆಯನ್ನು ಬಿಚ್ಚಿ ಒಬ್ಬ ಯುವಕನ ಮುಖದಮೇಲೆ ನೆರಳುಮಾಡಿಕೊಂಡು ತೂಗುತ್ತಿತ್ತು. ಇದನ್ನು ದೂರದಿಂದಲೇ ವಿದ್ಯಾರಣ್ಯರು ನೋಡಿದರು. ಅವನು ಯಾವನೋ ಮಹಾಪುರುಷನಿರಬೇಕೆಂದು ನಿಶ್ಚಯಿಸಿದರು. ಥಟ್ಟನೆ ಅಲ್ಲಿಯೇ ನಿಂತುಬಿಟ್ಟರು. ಸ್ವಲ್ಪಹೊತ್ತಿನೊಳಗಾಗಿಯೇ ಆ ಕೃಷ್ಣಸರ್ಪ ಸರಸರನೆ ಕಾಡಿನಲ್ಲಿ ಹರಿದುಹೋಯಿತು. ವಿದ್ಯಾರಣ್ಯರು ತುಂಬ ಸಂತೋಷದಿಂದ ಆ ಯುವಕರು ಮಲಗಿದ್ದ ಕಡೆಗೆ ಬಂದರು. ಶ್ರೀ ಭುವನೇಶ್ವರಿಯೇ ತಮಗೆ ಅನುಗ್ರಹ ಮಾಡಿರುವಳೆಂದು ಅವರು ಭಾವಿಸಿದರು. ಹತ್ತಿರಕ್ಕೆ ಬಂದು ನೋಡಿದರು ; ಅವರು ಸರ್ವ ಲಕ್ಷಣ ಸಂಪನ್ನರಾಗಿದ್ದರು. ಅನೂನ ದೇಹಕಾಂತಿ; ತುಂಬು ಗಾಂಭೀರ್ಯ ಅವರಲ್ಲಿ ಕಾಣುತ್ತಿದ್ದುವು. ಅವರು ವೀರರುಡುಗೆಯನ್ನು ಧರಿಸಿದ್ದರು. ನಡುವಿನಲ್ಲಿ ಮುಚ್ಚುಗತ್ತಿಯೂ ಕಠಾರಿಯೂ ಇದ್ದುವು. ಅವರ ಹಣೆ ಮತ್ತು ಮೂಗಿನಮೇಲೆ ಕಾಣುತ್ತಿದ್ದ ಸೆಕೆಯ ನೀರಿನ ತುಂತುರು ಹನಿಗಳು ಅವರ ಮುಖದ ಸೌಂದರ್ಯಕ್ಕೆ ಕಳೆಗೂಡಿಸುತ್ತಿದ್ದುವು. ವಿದ್ಯಾರಣ್ಯರು ಅವರನ್ನು ನೋಡಿ ಹರ್ಷಿಸಿದರು. ಅವರು ಯಾರೋ ಜಾತಿ ಕ್ಷತ್ರಿಯ ವಂಶಜರೆಂದು ಪರಿಭಾವಿಸಿದರು.

ಅಷ್ಟರಲ್ಲಿಯೇ ಹಿರಿಯವನು ಎಚ್ಚರಗೊಂಡು, ತಮ್ಮನನ್ನು ಎಬ್ಬಿಸುತ್ತಿದ್ದಂತೆಯೇ, ಪಕ್ಕದಲ್ಲಿ ನಿಂತಿದ್ದ ತೇಜಃಪುಂಜರಾದ ಯತಿವರ್ಯರನ್ನು ನೋಡಿದನು. ವಿದ್ಯಾರಣ್ಯರು ನಗುಮುಖದಿಂದ ಅವರನ್ನು ನೋಡುತ್ತಿದ್ದರು. ದಿಗ್ಭ್ರಮೆಯಿಂದ ಆ ತರುಣರು ಯತಿಯ ಪಾದಕ್ಕೆ ನಮಸ್ಕರಿಸಿ ನಿಂತುಕೊಂಡರು.

ವಿದ್ಯಾರಣ್ಯರು :—ಕುಮಾರರೆ, ನೀವು ಯಾರು ? ನಿಮ್ಮನ್ನು ನೋಡಿದರೆ ರಾಜಪುತ್ರರಂತೆ ಕಾಣುವಿರಿ. ಈ ಅರಣ್ಯಕ್ಕೆ ಏಕೆ ಬಂದಿರಿ ? ನೀವು ಎಲ್ಲಿಗೆ ಹೋಗಬೇಕು ?

ಹಿರಿಯ ತರುಣ :—ಸ್ವಾಮಿ, ನನ್ನ ಹೆಸರು ಹುಕ್ಕ ; ಇವನ ಹೆಸರು ಬುಕ್ಕ. ನಾವಿಬ್ಬರೂ ಅಣ್ಣತಮ್ಮಂದಿರು. ರಾಜಪುತ್ರರೆಂದು ಹೇಳಿಕೊಳ್ಳಲು ನಾಚಿಕೆಯಾಗುತ್ತದೆ. ತಲೆ ಮರೆಯಿಸಿಕೊಂಡು ಈ ಅರಣ್ಯದಲ್ಲಿ ಕಾಲ ಕಳೆಯುತ್ತಿರುವೆವು. ನಾವು ನಮ್ಮ ಮನೋಭೀಷ್ಟವನ್ನು ನೆರವೇರಿಸಿಕೊಳ್ಳಲು ಆಶ್ರಯದಾತರನ್ನು ಹುಡುಕುತ್ತ ಸುತ್ತುತ್ತಿರುವೆವು. ತಮ್ಮನ್ನು ನೋಡಿದರೆ, ನಿನ್ನೆಯ ರಾತ್ರಿ ನನಗೆ ಸ್ವಪ್ನದಲ್ಲಿ ನಮ್ಮ ಕುಲದೇವರು ರೇವಣಸಿದ್ಧೇಶ್ವರನು ಹೇಳಿದ್ದು ನೆನಪಿಗೆ ಬರುತ್ತಿದೆ. ತಾವು ಯಾರೆಂಬುದನ್ನು ದಯೆಯಿಟ್ಟು ತಿಳಿಸಬೇಕೆಂದು ಬೇಡುತ್ತೇನೆ.

ವಿದ್ಯಾರಣ್ಯರು :—ನಮ್ಮನ್ನು ವಿದ್ಯಾರಣ್ಯರೆಂದು ಜನರು ಕರೆಯುತ್ತಾರೆ. ನಾವು ಇಲ್ಲಿಯೇ ಪರ್ಣ ಕುಟೀರದಲ್ಲಿ ಶಿಷ್ಯರೊಂದಿಗೆ ಇರುತ್ತೇವೆ. ನಿಮ್ಮ ಮನೆ ದೇವರು ನಿನ್ನೆ ಸ್ವಪ್ನದಲ್ಲಿ ಕಾಣಿಸಿಕೊಂಡು ಹೇಳಿದುದೇನು?

ಹುಕ್ಕ :—ಸ್ವಾಮಿ, ನಾನು ಧನ್ಯನಾದೆನು. ಭಗವಂತನ ಅನುಗ್ರಹದಿಂದ ತಮ್ಮ ಸಂದರ್ಶನವಾಯಿತು. "ಶ್ರೀ ವಿದ್ಯಾರಣ್ಯರೆಂಬ ಯೋಗಿಗಳ ಆಶೀರ್ವಾದ ಬಲದಿಂದ ನಿನಗೆ ಸಿಂಹಾಸನಾಧಿಪತ್ಯ ದೊರೆಯುತ್ತದೆ"—ಎಂಬುದಾಗಿ ರೇವಣ ಸಿದ್ದೇಶ್ವರರು ಸ್ವಪ್ನದಲ್ಲಿ ತಿಳಿಸಿದ್ದರು. ಅದರಂತೆಯೇ ತಮ್ಮ ದಿವ್ಯ ದರ್ಶನ ಲಭಿಸಿದೆ. ನಮ್ಮನ್ನು ಅನುಗ್ರಹಿಸಬೇಕು.

ವಿದ್ಯಾರಣ್ಯರು :—ನಿಮ್ಮ ನಾಡು ಯಾವುದು ? ನಿಮ್ಮ ತಂದೆ ಯಾರು?

ಹುಕ್ಕ :—ತಪೋಧನರೇ ! ನಾವು ಈ ಕನ್ನಡ ನಾಡಿನ ಮಂಗಳ ನಿಲಯವೆಂಬ ಪಟ್ಟಣದ ದೊರೆ ಸಂಗಮರಾಯನ ಮಕ್ಕಳು. ಆತನಿಗೆ ನಾನೂ ಮತ್ತು ಕಂಪರಾಯ, ಬುಕ್ಕರಾಯ, ಮಾದಪ್ಪರಾಯ, ಮುದ್ದಪ್ಪರಾಯ – ಎಂಬ ಐದು ಮಂದಿ ಪುತ್ರರು. ನಾವಿಬ್ಬರೂ ಓರಂಗಲ್ಲು ರಾಜನಾಗಿದ್ದ ಪ್ರತಾಪರುದ್ರ ದೇವನ ಬಳಿಯಲ್ಲಿ ಸೇನಾಪತಿ ಮತ್ತು ಕೋಶಾಧಿಕಾರಿಗಳಾಗಿದ್ದೆವು. ದೆಹಲಿಯ ಬಾದಷಹನು ಓರಂಗಲ್ಲಿನಮೇಲೆ ದಂಡೆತ್ತಿ ಬಂದು ಆ ರಾಜನನ್ನು ಯುದ್ಧದಲ್ಲಿ ಸೋಲಿಸಿ, ರಾಜಧಾನಿಯನ್ನು ವಶ

ಪಡಿಸಿಕೊಂಡನು. ನಿರಾಶ್ರಿತರಾದ ನಾವು ದ್ವಾರಸಮುದ್ರದ ಬಲ್ಲಾಳ ರಾಜನ ಆಶ್ರಯದಲ್ಲಿ ಕೆಲವುಕಾಲ ನಿಂತೆವು. ಮುಸಲ್ಮಾನರ ಹೊಡೆತದಿಂದ ದ್ವಾರಸಮುದ್ರವೂ ಹಾಳಾಯಿತು. ನಾವು ದಿಕ್ಕು ಕಾಣದೆ ಈ ಕಾಡಿನಲ್ಲಿ ಅಲೆಯುತ್ತಿರುವೆವು.

ವಿದ್ಯಾರಣ್ಯರು :—ಇದರಲ್ಲಿ ನಿಮ್ಮ ಉದ್ದೇಶವೇನು ? ಜೀವಗಳ್ಳರಂತೆ ತಲೆ ತಪ್ಪಿಸಿಕೊಂಡು ತಿರುಗುತ್ತಿರಬೇಕೆಂದು ಯೋಚಿಸಿರುವಿರಾ !

ಹುಕ್ಕ :— ಗುರುದೇವಾ ! ಕ್ಷಮಿಸಬೇಕು. ಯದುವಂಶೋತ್ಪನ್ನರಾದ ನಾವು ಸಾವಿಗೆ ಹೆದರತಕ್ಕ ಹೇಡಿಗಳಲ್ಲ. ಆದರೆ, ಮುಸಲ್ಮಾನರು ಒಂದಾದ ಮೇಲೊಂದು ಕನ್ನಡ ರಾಜ್ಯಗಳನ್ನು ಕಬಳಿಸುತ್ತಿರುವುದನ್ನು ಕಂಡು ನಮ್ಮ ರಕ್ತ ಕುದಿಯುತ್ತಿದೆ. ನಮಗೆ ನೆರವಿಲ್ಲ, ಜನಸಹಾಯವಿಲ್ಲ. ಈ ಪವಿತ್ರ ಕನ್ನಡ ನಾಡಿನ ಸೇವೆಗಾಗಿ ನಮ್ಮ ದೇಹವನ್ನು ತುಂಡು ತುಂಡಾಗಿ ಕತ್ತರಿಸಿ ಕೊಡಲು ಸಿದ್ಧರಾಗಿದ್ದೇವೆ. ಕಾಲಗತಿಯಿಂದ ನಿರ್ವೀರ್ಯರಾಗಿರುವ ಕನ್ನಡಿಗರನ್ನು ಮತ್ತೊಮ್ಮೆ ಒಂದುಗೂಡಿಸಿ, ಕನ್ನಡನಾಡಿನ ವೈಭವವನ್ನು ಮೆರೆಯಿಸಲು ದೈವಾನುಗ್ರಹ ನಿರೀಕ್ಷೆಯಲ್ಲಿದ್ದೇವೆ. ದೇವರು ಇಂದಿಗೆ ತಮ್ಮ ರೂಪದಲ್ಲಿ ನಮ್ಮ ಅಭೀಷ್ಟವನ್ನು ನೆರವೇರಿಸಲು ಬಂದಿರುವಂತೆ ಕಾಣುತ್ತದೆ. ನಮ್ಮನ್ನು ಆಶೀರ್ವದಿಸಬೇಕು.

ಬುಕ್ಕ :—ಯತಿವರ್ಯರೆ, ಕಳೆದ ಏಳು ವರ್ಷಗಳಿಂದಲೂ ನಾವು ಕ್ಷಾತ್ರ ತಪಸ್ಸನ್ನು ಆಚರಿಸುತ್ತಿದ್ದೇವೆ, ಶಸ್ತ್ರಸಂನ್ಯಾಸವನ್ನು ಕೈಗೊಂಡಿದ್ದೇವೆ. ತಮ್ಮ ಅಧ್ಯಾತ್ಮ ತಪೋಬಲದಿಂದ ನಾವು ಈ ನಮ್ಮ ಕ್ಷಾತ್ರ ರಕ್ತವನ್ನು ನಾಡಿನ ಸೇವೆಗಾಗಿ ಧಾರೆಯೆರೆಯಲು ಸಿದ್ಧರಾಗಿದ್ದೇವೆ.

ವಿದ್ಯಾರಣ್ಯರು :—ಕ್ಷತ್ರಿಯ ಕುಮಾರರೇ, ನಿಮಗೆ ಮಂಗಳವಾಗಲಿ. ಶ್ರೀ ಭುವನೇಶ್ವರೀ ದೇವಿಯ ಅನುಗ್ರಹದಿಂದ ನಾವೆಲ್ಲರೂ ಕನ್ನಡ ನಾಡನ್ನು ಉಳಿಸಲು ಯತ್ನಿಸೋಣ. ಈಗಾಗಲೆ ಸಂಜೆಯಾಗುತ್ತ ಬಂತು. ಆಶ್ರಮಕ್ಕೆ ಹೊರಡೋಣ ; ನಡೆಯಿರಿ.

ಎಂದು ಅವರು ಆಶ್ರಮದ ದಾರಿಯನ್ನು ಹಿಡಿದರು. ದೈವಸಂಕಲ್ಪ ಒದಗಿಬಂದ ರೀತಿಯನ್ನು ವಿದ್ಯಾರಣ್ಯರು ತಮ್ಮ ಮನಸ್ಸಿನಲ್ಲಿಯೇ ಪರಿಭಾವಿಸಿಕೊಳ್ಳುತ್ತ ಆಗಾಗ ಆ ರಾಜಪುತ್ರರೊಂದಿಗೆ ಲೋಕಾಭಿರಾಮವಾಗಿ ಮಾತ

ನಾಡುತ್ತ ನಡೆಯುತ್ತಿದ್ದರು. ಸಂಜೆಯವೇಳೆಗೆ ಅವರು ಆಶ್ರಮವನ್ನು ಸೇರಿದರು. ಹುಕ್ಕ ಬುಕ್ಕರಿಗೆ ಆಶ್ರಮ ಯೋಗ್ಯವಾದ ರೀತಿಯಲ್ಲಿ ಆ ರಾತ್ರಿ ಆತಿಥ್ಯ ನಡೆಯಿತು. ವಿದ್ಯಾರಣ್ಯರು ತಮ್ಮ ಅಭೀಷ್ಟವನ್ನು ಸಾಧಿಸಲು ತಕ್ಕ ಸಮಯ ಸನ್ನಿಹಿತವಾಗಿರುವುದೆಂದು ಯೋಚಿಸಿದರು. ಅವರು ಹುಕ್ಕ ಬುಕ್ಕರೊಂದಿಗೆ ಬಹಳ ಹೊತ್ತು ಮಾತನಾಡುತ್ತ ರಾಜ್ಯಸ್ಥಾಪನೆಯ ಪ್ರಸ್ತಾಪ ಮಾಡಿದರು.

ವಿದ್ಯಾರಣ್ಯರು :—ಸಹೋದರರೆ, ಕನ್ನಡ ನಾಡಿನ ಈಗಿನ ಪರಿಸ್ಥಿತಿಯಲ್ಲಿ ಪ್ರಬಲವಾದ ರಾಷ್ಟ್ರವೇ ಕಾಣುವದಿಲ್ಲ. ನೀವಾದರೋ ಉತ್ತಮ ಕ್ಷತ್ರಿಯ ಕುಲ ಸಂಭವರು. ನೀವು ಮನಸ್ಸು ಮಾಡಿದರೆ ನಿಮ್ಮಿಂದ ಆ ರಾಷ್ಟ್ರ ನಿರ್ಮಾಣಕಾರ್ಯವಾಗುತ್ತದೆ ಎಂಬ ಭರವಸೆ ನನಗಿದೆ. ನಿಮ್ಮ ಅಭಿಪ್ರಾಯವೇನು ?

ಹುಕ್ಕ :—ಮಹಾತ್ಮರೆ, ನಾವು ಹೊಸಬರು ; ದೇಶ ಪರಿಚಯವಿಲ್ಲ ; ಜನ ಸಹಾಯವಂತೂ ಮೊದಲೇ ಇಲ್ಲ. ಎಂದ ಮೇಲೆ, ರಾಜ್ಯಸ್ಥಾಪನೆಯ ಕೆಲಸವೇನು ಸಾಮಾನ್ಯವೇ ! ಪೂಜ್ಯರಾದ ತಮ್ಮ ಆಶೀರ್ವಾದ ಬಲದಿಂದ ಮಾತ್ರ ಅದು ನಡೆಯಬೇಕಲ್ಲದೆ ಮತ್ತೆ ಬೇರೆ ಇಲ್ಲ.

ವಿದ್ಯಾರಣ್ಯರು :—ನಿನ್ನೆಯ ದಿನ ಕಾಶಿಯಿಂದ ಬಂದ ಯಾತ್ರಾರ್ಥಿಗಳು ಈ ಮಾರ್ಗವಾಗಿಯೇ ಪ್ರಯಾಣಮಾಡಿದರು. ಅವರು ದೆಹಲಿಯ ಸಮಾಚಾರವನ್ನು ತಿಳಿಸಿದರು. ಮಹಮದ್ ತೊಗಲಕನು ದೊಡ್ಡ ಸೈನ್ಯವೊಂದನ್ನು ಆನೆಗೊಂದಿಯ ಮೇಲೆ ಕಳುಹಿಸಲು ಯೋಚಿಸಿದ್ದಾನೆಂದೂ, ಇಷ್ಟರಲ್ಲಿ ಆ ಸೈನ್ಯ ಹೊರಟಿರಬಹುದೆಂದೂ ಗೊತ್ತಾಯಿತು. ಈ ಯುದ್ಧ ಪ್ರಸಂಗದಲ್ಲಿ ನೀವು ಸಾಹಸ ಸಂಧಾನಗಳನ್ನು ನಡೆಯಿಸಿದರೆ ನಮ್ಮ ಕಾರ್ಯ ಸಿದ್ಧಿಸಬಹುದು.

ಹುಕ್ಕ :—ಆನೆಗೊಂದಿಯ ಬಲಾಬಲಗಳು ಹೇಗಿವೆ ಎಂಬುದೂ ತಿಳಿಯದು. ಒಂದುವೇಳೆ ನಾವು ಆನೆಗೊಂದಿಯ ಪರವಾಗಿ ನಿಂತು ಯುದ್ಧದಲ್ಲಿ ಹೋರಾಡಿದರೆ ತಾನೆ, ಜಯವಾಗುತ್ತದೆಯೆಂಬ ನಂಬುಗೆಯಾದರೂ ಏನು ?

ಬುಕ್ಕ :—ಪೂಜ್ಯರೆ, ಈಗ ಆನೆಗೊಂದಿಯ ಸಹಾಯಕ್ಕಾಗಿ ಆ ರಾಜನ ಪಾಳೆಯಗಾರರೆಲ್ಲ ಧೈರ್ಯದಿಂದ ನಿಲ್ಲುತ್ತಾರೆಯೇ! ಅಥವಾ ರಾಜದ್ರೋಹ ಬುದ್ಧಿಯಿಂದ ಮುಸಲ್ಮಾನರಕಡೆ ಸೇರಿದರೆ ಗತಿಯೇನು!

ವಿದ್ಯಾರಣ್ಯ :—ಬುಕ್ಕಣ್ಣ! ನಿನ್ನ ಮಾತು ನಿಜ. ಆದರೆ ನನ್ನ ಅಭಿಲಾಷೆಯಿಷ್ಟೆ. ನೀವು ಮಾತ್ರ ಆನೆಗೊಂದಿಯ ಜಂಬುಕೇಶ್ವರರಾಯನ ಸೈನ್ಯದಲ್ಲಿ ಸೇರಿ ಮುಸಲ್ಮಾನರ ಮೇಲೆ ಯುದ್ಧ ಮಾಡಬೇಕು. ನಮಗೆ ಜಯವಾದರೆ ನಮ್ಮ ಸಂಕಲ್ಪ ಈಡೇರಿದಂತೆಯೇ; ಅಪಜಯವಾದರೆ ಯೋಚಿಸಬೇಕಾಗಿಲ್ಲ.

ಹುಕ್ಕ :—ಅಪಜಯವಾದರೆ ಮುಂದೆ ನಾವು ಮಾಡತಕ್ಕುದೇನು?

ವಿದ್ಯಾರಣ್ಯರು :—ದೆಹಲಿಯ ರಾಜನಿಗೆ ಯುದ್ಧದಲ್ಲಿ ಜಯವಾದ ಮಾತ್ರಕ್ಕೆ ಅವನೇನೂ ಇಲ್ಲಿ ನೆಲೆಯೂರಿ ನಿಲ್ಲುವಂತಿಲ್ಲ. ಬಹಳ ದೂರದಲ್ಲಿರುವ ದೆಹಲಿಯಿಂದ ಅವನು ಆನೆಗೊಂದಿ ರಾಜ್ಯವನ್ನು ಆಳುವದೇನೂ ಸಾಮಾನ್ಯವಲ್ಲ. ಬಹುಶಃ ಅವನು ತನ್ನ ಪ್ರತಿನಿಧಿಯೊಬ್ಬನನ್ನು ಆನೆಗೊಂದಿಯಲ್ಲಿ ನೇಮಕಮಾಡಿ ಹೋಗುತ್ತಾನೆ. ನೀವು ಈಗ ಒದಗಲಿರುವ ಯುದ್ಧದಲ್ಲಿ ಪರಾಕ್ರಮದಿಂದ ಯುದ್ಧಮಾಡಿದರೆ ಕನ್ನಡಿಗರ ಪ್ರೀತಿ ಗೌರವಗಳಿಗೆ ಪಾತ್ರರಾಗುವುದಲ್ಲದೆ ನಿಮ್ಮ ಶೌರ್ಯ ಸಾಹಸಗಳನ್ನು ಅರಿತು ಬಾದಷಹನು ನಿಮ್ಮನ್ನೇ ಆನೆಗೊಂದಿಯ ರಾಜ್ಯಾಧಿಕಾರಗಳಲ್ಲಿ ನಿಯೋಜಿಸಬಹುದು. ಹೇಗಿದ್ದರೂ ನಿಮಗೆ ಒಳ್ಳೆಯದಾಗುತ್ತದೆ.

ಹುಕ್ಕ :—ರಾಜಕಾರಣ ನಿಪುಣರಾದ ತಾವು ಬಹಳ ಚೆನ್ನಾಗಿ ಯೋಚಿಸಿರುವಿರಿ. ಆದರೆ ಯುದ್ಧದಲ್ಲಿ ನಾವೇ ಸತ್ತುಹೋದರೆ ಗತಿಯೇನು! ಆಗ ಅನರ್ಥವಾಗುವುದಿಲ್ಲವೆ?

ಬುಕ್ಕ :—ಹೌದು, ನನಗೂ ಹಾಗೆಯೇ ಅನ್ನಿಸುತ್ತದೆ. ಜಯಾಪಜಯಗಳನ್ನು ಬಲ್ಲವರಾರು?

ವಿದ್ಯಾರಣ್ಯರು :—ಕ್ಷತ್ರಿಯ ಕುಮಾರರೇ, ಇದೇನು! ಧೈರ್ಯಗೆಡುತ್ತಿರುವಿರಿ. ಕುರುಕ್ಷೇತ್ರದಲ್ಲಿ ಎದೆಗೆಟ್ಟು ನಿಂತ ಅರ್ಜುನನಿಗೆ ಶ್ರೀ ಕೃಷ್ಣನು ಹೇಳಿದ "ಕ್ಷುದ್ರಂ ಹೃದಯ ದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠಪರಂತಪ" ಎಂಬ ವೀರವಾಣಿಯನ್ನು ಮರೆತಿರುವಿರಾ! ಧೈರ್ಯಗೆಡಬಾರದು. ಯುದ್ಧ

ದಲ್ಲಿ ಜಯಿಸಿ ಸ್ವರಾಜ್ಯ ಸ್ಥಾಪನೆ ಮಾಡಬೇಕೆಂಬ ಸತ್ಯ ಸಂಕಲ್ಪದಿಂದ ಕಾರ್ಯಮಾಡಬೇಕು. "ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ" ಎಂಬಂತೆ ಸಮಾಲೋಚನೆಯಿಂದ ಕಾರ್ಯಮಾಡತಕ್ಕದು ಮನುಷ್ಯನ ಕರ್ತವ್ಯ ; ಅದರ ಫಲವನ್ನು ಕೊಡತಕ್ಕವನು ಪರಮಾತ್ಮ. ಇದನ್ನು ಕುರಿತು ನಾವು ಚಿಂತಿಸಬಾರದು.

ಹುಕ್ಕ :—ಯೋಗೀಂದ್ರರೆ, ತಮ್ಮ ಆಶೀರ್ವಾದ ಬಲದಿಂದ ನಾವು ಈ ಕಾರ್ಯದಲ್ಲಿ ಕೃತಕೃತ್ಯರಾಗುತ್ತೇವೆ. ನಾವು ಯುದ್ಧದಲ್ಲಿ ಭಾಗವಹಿಸಲು ಆನೆಗೊಂದಿ ಮಹಾರಾಜನ ಅನುಮತಿಯಾಗಬೇಕಲ್ಲವೆ ?

ವಿದ್ಯಾರಣ್ಯರು :—ಅಗತ್ಯವಾಗಿಯೂ ಆತನ ಅನುಮತಿಯನ್ನು ಹೊಂದಬೇಕಾಗಿದೆ. ನಾನು ಆನೆಗೊಂದಿ ಮಂತ್ರಿ ದೇವರಾಯನಿಗೆ ಹೇಳಿ ಕಳುಹಿಸಿ, ಆತನನ್ನು ನಾಳೆಯದಿನ ಇಲ್ಲಿಗೆ ಕರೆಯಿಸುತ್ತೇನೆ. ನಿಮ್ಮ ಪರಿಚಯವನ್ನು ತಿಳಿಸಿ, ಆತನ ಮೂಲಕ ಮಹಾರಾಜನಿಗೆ ನಿಮ್ಮ ಸಮಾಗಮವನ್ನು ಮಾಡಿಸುತ್ತೇನೆ. ನೀವು ನಿಶ್ಚಿಂತರಾಗಿರಿ. ಈಗಾಗಲೆ ರಾತ್ರಿ ಬಹಳ ಹೊತ್ತಾಯಿತು. ನೀವಿನ್ನು ಮಲಗಿರಿ.

ಹುಕ್ಕಬುಕ್ಕರು ಗುರುಗಳ ಅಪ್ಪಣೆಯಂತೆ ಆ ರಾತ್ರಿ ಆಶ್ರಮದಲ್ಲಿಯೇ ಮಲಗಿದ್ದರು. ಮರುದಿನ ಸೂರ್ಯೋದಯಕಾಲಕ್ಕೆ ಮುಂಚಿತವಾಗಿಯೇ ಅವರು ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು ಶ್ರೀ ವಿರೂಪಾಕ್ಷ ಸ್ವಾಮಿಯ ಮತ್ತು ಶ್ರೀ ಭುವನೇಶ್ವರೀ ದೇವಿಯ ದರ್ಶನಮಾಡಿಕೊಂಡು ಆಶ್ರಮದಲ್ಲಿ ವಿದ್ಯಾರಣ್ಯರ ದರ್ಶನಕ್ಕಾಗಿ ಕಾದಿದ್ದರು.

ಹಗಲು ಮೊದಲನೆಯ ಜಾಮ ಕಳೆದುಹೋಗಿತ್ತು. ಆನೆಗೊಂದಿಯಿಂದ ಮಂತ್ರಿ ದೇವರಾಯನು ವಿದ್ಯಾರಣ್ಯರ ದರ್ಶನಕ್ಕೆ ಬಂದನು. ಅವರು ಆತನನ್ನು ಗೌರವದಿಂದ ಬರಮಾಡಿಕೊಂಡು ಸ್ವಲ್ಪಹೊತ್ತು ಕುಶಲ ಪ್ರಶ್ನೆಗಳನ್ನು ಮಾಡುತ್ತಿದ್ದರು. ದೇವರಾಯನೂ ಭಕ್ತಿಯಿಂದ ಗುರುಗಳ ಸನ್ನಿಧಿಯಲ್ಲಿ ಸಂಭಾಷಣೆಮಾಡುತ್ತ ಕುಳಿತಿದ್ದನು.

ವಿದ್ಯಾರಣ್ಯರು :—ದೇವರಾಯ, ಮುಸಲ್ಮಾನರು ಆನೆಗೊಂದಿಯಮೇಲೆ ದಂಡೆತ್ತಿ ಬರುವರೆಂಬ ಸುದ್ದಿ ಹರಡಿದೆಯಲ್ಲ ! ಅದು ನಿಜವೆ !

ದೇವರಾಯ :—ನಿಜ ; ನಮ್ಮ ಗೂಢಚಾರರು ದೆಹಲಿಯಿಂದ ನಿನ್ನೆ ತಾನೇ ಹಿಂತಿರುಗಿ ಬಂದರು. ಬಾದಷಹನು ತಕ್ಕ ಸಿದ್ಧತೆಯಿಂದ ಬರುತ್ತಿರುವನಂತೆ.

ವಿದ್ಯಾರಣ್ಯರು :—ಇಲ್ಲಿ ನೀವು ಸಕಲ ರಕ್ಷಣಾ ಕಾರ್ಯಗಳನ್ನೂ ಜಾಗರೂಕತೆಯಿಂದ ಮಾಡಿರುವಿರಾ ! ಸಾಮಂತ ಪಾಳೆಯಗಾರರೆಲ್ಲ ಅನುಕೂಲರಾಗಿರುವರೆ ! ಸೈನ್ಯವೆಲ್ಲ ರಾಜನಿಷ್ಠೆಯಿಂದ ಕೂಡಿದೆಯೆ ! ಕೋಟೆ ಕೊತ್ತಲುಗಳನ್ನು ಭದ್ರಪಡಿಸಿರುವಿರಾ ?

ದೇವರಾಯ :—ಗುರುದೇವಾ, ಎಲ್ಲ ಸಿದ್ಧತೆಗಳನ್ನೂ ಭರದಿಂದಲೇ ಏರ್ಪಡಿಸಿದ್ದರೂ ನನಗೆ ಸಂಶಯುವಂತೂ ಇದ್ದೇ ಇದೆ. ಅಸಂಖ್ಯಾತ ಸೈನ್ಯ ದೊಂದಿಗೆ ಬರುವ ಶತ್ರುರಾಜನನ್ನು ಎದುರಿಸಲು ಸಾಧ್ಯವೆ ? ಸುಸಜ್ಜಿತವಾದ ಸೈನ್ಯವೆಷ್ಟಿದ್ದರೂ ಅದನ್ನು ಚತುರತೆಯಿಂದ ನಡೆಯಿಸತಕ್ಕ ಯುದ್ಧ ವಿದ್ಯಾನಿಪುಣನಾದ ಸೇನಾಪತಿಯು ನಮ್ಮಲ್ಲಿಲ್ಲ. ಆದರೂ ಆನೆಗೊಂದಿಯವರು ಹೇಡಿಗಳಂತೆ ಒಂದಕ್ಕೆ ನಿಲ್ಲುವವರಲ್ಲ. ಪ್ರಾಣವಿರುವವರೆಗೂ ದೇಶದ ಸ್ವಾತಂತ್ರ್ಯ ರಕ್ಷಣೆಗಾಗಿ ಹೋಡೆದಾಡಲು ಸಿದ್ಧರಾಗಿದ್ದಾರೆ.

ವಿದ್ಯಾರಣ್ಯರು :—ದೇವರಾಯ, ಮುಂದಾಗುವ ಫಲಾಫಲಗಳನ್ನು ಯೋಚಿಸುತ್ತ ಸಂಶಯಗ್ರಸ್ಥರಾಗಿ ಕರ್ತವ್ಯ ಪರಾಙ್ಮುಖರಾಗಬಾರದು. "ಸಂಶಯಾತ್ಮಾ ವಿನಶ್ಯತಿ'' ಎಂಬ ಮಾತನ್ನು ಮರೆಯದಿರು. ಕರ್ಣಾಟಕದ ಭಾಗ್ಯ ಸೂರ್ಯನು ಉದಯವಾಗುವಕಾಲ ಸಮೀಪಿಸುತ್ತಿದೆ. ಈಗ ಕಾಲಮೇಘಗಳು ಕವಿದಂತೆ ಕಾಣುತ್ತಿದ್ದರೂ ನಿರ್ಮಲಾಕಾಶದಲ್ಲಿ ಹೊಂಬೆಳಕು ಮೂಡಿಯೇ ಮೂಡುತ್ತದೆ. ಈಗ ಒದಗಲಿರುವ ಯುದ್ಧದಲ್ಲಿ ಒಂದು ವೇಳೆ ಅಪಜಯುವಾದರೂ, ಆ ಅಪಜಯವೇ ಕನ್ನಡಿಗರ ಗುಪ್ತ ಶಕ್ತಿಯನ್ನು ಹೊಡೆದೆಬ್ಬಿಸುವ ಮಹಾ ಮಂತ್ರವಾಗುತ್ತದೆ ! ಚಿಂತೆಯಿಲ್ಲ. ಈಗ ನಾನು ಆನೆಗೊಂದಿಯ ನೆರವಿಗಾಗಿ ಅಸಹಾಯ ಶೂರರಾದ ಇಬ್ಬರು ರಾಜಪುತ್ರರನ್ನು ನಮ್ಮ ವನರಾಜ್ಯದಿಂದ ಈ ಪರ್ಣ ಕುಟೀರ ರಾಜಧಾನಿಯಿಂದ ಕಳುಹಿಸುತ್ತೇನೆ. ಸಾವಿರಾನೆಯ ಬಲವನ್ನು ನಾನು ಒದಗಿಸಿದಂತಾಯಿತು. ಆನೆಗೊಂದಿಯ ರಾಜ್ಯದ ಎಲ್ಲೆಯಲ್ಲಿ ನಾವು ಇರುವುದರಿಂದ ಈ ಯುದ್ಧ ಕಾಲದಲ್ಲಿ ಸಹಾಯಮಾಡಬೇಕಷ್ಟೆ.

ದೇವರಾಯ :—ಮಹಾತ್ಮಾ, ನಿಮ್ಮ ರಾಜಕೀಯ ಚಾಕಚಕ್ಯತೆಯನ್ನು ತಿಳಿಯಲು ನನ್ನಿಂದ ಸಾಧ್ಯವೆ! ಆ ರಾಜಪುತ್ರರು ಯಾರು! ಎಲ್ಲಿರುವರು!

ವಿದ್ಯಾರಣ್ಯ :—ಚಂದ್ರಶೇಖರಾ, ಆ ರಾಜ ಸಹೋದರರನ್ನು ಕರೆದು ಕೊಂಡುಬಾ.

ದೇವರಾಯ :—ಅವರು ನಮ್ಮ ಸೇನಾಪತಿಗಳಾಗಿ ನಿಲ್ಲಲು ಒಪ್ಪುತ್ತಾರೆಯೆ!

ಹುಕ್ಕಬುಕ್ಕರು :— (ತಲೆಬಾಗಿ ವಂದಿಸಿ, ಒಂದೆಡೆಯಲ್ಲಿ ಕುಳಿತು ಕೊಳ್ಳುವರು.)

ವಿದ್ಯಾರಣ್ಯರು :—ದೇವರಾಯ, ಇವರೇ ನಮ್ಮ ಸೈನ್ಯಬಲ. ಈತನ ಹೆಸರು ಹುಕ್ಕರಾಯ, ಆತನೇ ತಮ್ಮ. ಆತನ ಹೆಸರು ಬುಕ್ಕರಾಯ. ಇವರು ಯಾರೆಂಬುದನ್ನು ನಿನಗೆ ಕಾಲವರಿತು ತಿಳಿಸುತ್ತೇನೆ. ಇವರು ಕ್ಷತ್ರಿಯ ಪುತ್ರರು. ಆನೆಗೊಂದಿಯ ರಾಜ್ಯರಕ್ಷಣೆಯ ಕಾರ್ಯದಲ್ಲಿ ನಿಮಗೆ ಸಹಾಯ ಮಾಡುತ್ತಾರೆ.

ದೇವರಾಯ :—ರಾಜಪುತ್ರರೆ, ನಿಮಗೆ ಮಂಗಳವಾಗಲಿ. ನೀವು ರಾಮಲಕ್ಷ್ಮಣರಂತೆ ಕಾಣುತ್ತಿರುವಿರಿ. ಪರಾಕ್ರಮಶಾಲಿಗಳಾದ ನಿಮ್ಮನ್ನು ಈ ಮಹಾತ್ಮರು ನಮಗೆ ದೊರಕಿಸಿಕೊಟ್ಟು ಅನುಗ್ರಹಿಸಿರುತ್ತಾರೆ. ನೀವು ಆನೆಗೊಂದಿಯ ಸೇನಾಪತಿಗಳಾಗಿ ನಿಂತು ಈಗ ಒದಗಲಿರುವ ಯುದ್ಧದಲ್ಲಿ ಸಹಾಯಮಾಡಬೇಕೆಂದು ಬೇಡುತ್ತೇನೆ.

ಹುಕ್ಕ :—ಮಂತ್ರಿವರ್ಯ! ನಿನ್ನ ರಾಜನೀತಿ ಕೌಶಲವನ್ನು ಕುರಿತು ಗುರುಗಳು ನಿನ್ನೆಯ ದಿನವೇ ನಮಗೆ ತಿಳಿಸಿದರು. ಕನ್ನಡ ನಾಡಿನ ಸೇವೆಗಾಗಿ ನಾವು ಪ್ರಾಣಾರ್ಪಣಮಾಡಲು ಸಿದ್ಧರಾಗಿದ್ದೇವೆ.

ವಿದ್ಯಾರಣ್ಯರು ಆನಂದ ತುಂದಿಲ ಹೃದಯರಾದರು. ಅವರೆಲ್ಲರನ್ನೂ ಆಶೀರ್ವದಿಸಿ ಬೀಳ್ಕೊಟ್ಟರು. ದೇವರಾಯನು ಹುಕ್ಕಬುಕ್ಕರೊಂದಿಗೆ ಆನೆಗೊಂದಿಯನ್ನು ಸೇರಿ ಆ ರಾಜಪುತ್ರರನ್ನು ಜಂಬುಕೇಶ್ವರರಾಯನಿಗೆ ಪರಿಚಯ ಮಾಡಿಸಿ ಅವರಿಗೆ ಸೇನಾಪತಿ ಪಟ್ಟವನ್ನು ಕಟ್ಟುವಂತೆ ಗೊತ್ತುಮಾಡಿದನು. ಮರುದಿನ ರಾತ್ರಿ ಮಹಾರಾಜನು ಎಲ್ಲ ಅಧಿಕಾರಿಗಳನ್ನೂ, ರಾಜ್ಯದ ಮುಖಂಡರನ್ನೂ, ಸಾಮಂತರನ್ನೂ ಬರಮಾಡಿಕೊಂಡು ತುಂಬಿದ ಸಭೆ

ಯಲ್ಲಿ ಹುಕ್ಕನಿಗೆ ಮುಖ್ಯ ಸೇನಾಪತಿಯ ಅಧಿಕಾರವನ್ನೂ ಬುಕ್ಕನಿಗೆ ಉಪ ಸೇನಾನಾಯಕನ ಅಧಿಕಾರವನ್ನೂ ವಹಿಸಿಕೊಟ್ಟನು. ಆಗ ಹುಕ್ಕರಾಯನು ಮಹಾರಾಜನನ್ನು ಅಭಿವಂದಿಸಿ ಮಂತ್ರಿ ದೇವರಾಯನಿಗೆ ವಂದಿಸಿ ಸಭಾಸದ ರನ್ನು ಕುರಿತು "ಕನ್ನಡನಾಡಿನ ಮಹಾಜನರೆ, ಮಹಾರಾಜರು ಈ ದಿನ ನಮಗೆ ಸೇನಾನಾಯಕರ ಅಧಿಕಾರವನ್ನು ವಹಿಸಿಕೊಟ್ಟಿರುವುದರಿಂದ ನಾವು ನಮ್ಮ ಸೇವೆಯನ್ನು ತಾಯ್ನಾಡಿಗೆ ಮನದಣಿಯೆ ಸಲ್ಲಿಸುತ್ತೇವೆ. ನಮ್ಮ ನಾಡಿನ ಸೇವೆಯೇ ನಮ್ಮ ಜೀವನದ ಉಸಿರು. ನಮ್ಮ ಧರ್ಮವನ್ನು ರಕ್ಷಿಸು ವುದರಲ್ಲಿ ನಾವು ಪ್ರಾಣವನ್ನು ಕೊಡಲು ಹಿಂಜರಿಯಬಾರದು. ನಮ್ಮ ಹಿರಿ ಯರು ಪರಾಕ್ರಮಿಗಳಾಗಿದ್ದರು. ಅಂಥವರ ಮಕ್ಕಳಾದ ನಾವು ರಣಹೇಡಿಗ ಳಾಗಬಾರದು. ಜೀವಗಳ್ಳರಾಗಬಾರದು. "ರಾಜಾ ಪ್ರತ್ಯಕ್ಷ ದೇವತಾ" ಎಂಬಂತೆ ನಾವೆಲ್ಲರೂ ರಾಜಭಕ್ತಿಯಿಂದ ಕೂಡಿರಬೇಕು ದೇಶಸೇವಾ ಕಾರ್ಯದಲ್ಲಿ ನಾವು ಐಕಮತ್ಯದಿಂದ ಕೂಡಿ ದುಡಿಯಬೇಕು. ನಮ್ಮ ಧರ್ಮ ಹೋದಮೇಲೆ ನಾವು ಇದ್ದು ಪ್ರಯೋಜನವೇನು? ಮುಸಲ್ಮಾನರು ನಮ್ಮ ನಾಡಿಗೆ ಕಾಲಿಡದಂತೆ ನಾವು ಎದುರಿಸಿ ನಿಲ್ಲಬೇಕು. ಈಗ ಬರಲಿ ರುವ ಯುದ್ಧದಲ್ಲಿ ಜಯವನ್ನು ಪಡೆಯಲೇಬೇಕು. ನಾವು ಸೋತು ಹೋಗುತ್ತೇವೆಂದು ಅಂಜಬಾರದು. ಜಯಾಪಜಯಗಳನ್ನು ನಾವು ಈಗಲೇ ಯೋಚಿಸುವುದು ಸರಿಯಲ್ಲ. ನಿಮ್ಮೆಲ್ಲರ ನೆರವು ಈಗ ಒದಗಬೇಕು. ಆನೆ ಗೊಂದಿಯ ಕೀರ್ತಿಪತಾಕೆಯನ್ನು ಎತ್ತಿ ಹಿಡಿಯಬೇಕು. ಕಲಿಗಳಂತೆ ಕಾದ ಬೇಕು. ಹುಲಿಗಳಂತ ಆರ್ಭಟಿಸಬೇಕು. ಕರ್ಣಾಟಕದಲ್ಲಿ ಸ್ವರಾಜ್ಯವನ್ನು ಸ್ಥಾಪಿಸುವುದೇ ನಮ್ಮ ಧ್ಯೇಯವಾಗಿರಲಿ. ಆಚಾರ್ಯ ವಿದ್ಯಾರಣ್ಯರು ಆರಂಭಿಸಿರುವ ರಾಷ್ಟ್ರೋದ್ಧಾರದ ಕಾರ್ಯವೇನೂ ಸಾಮಾನ್ಯವಾದದ್ದಲ್ಲ. ಅದರಿಂದ ರಾಷ್ಟ್ರದ ಪ್ರಾಣಪ್ರತಿಷ್ಠಾಪನೆಯಾಗುತ್ತದೆ. ಸ್ವಾತಂತ್ರ್ಯವೆಂಬುದು ಜೀವದ ಜೀವವೆಂಬುದನ್ನು ಮರೆಯದಿರಿ. ಸ್ವಾತಂತ್ರ್ಯವಿಲ್ಲದ ರಾಷ್ಟ್ರ ಪ್ರಾಣವಿಲ್ಲದ ದೇಹದಂತೆ ಎಂಬುದನ್ನು ನೆನಪಿನಲ್ಲಿಡಿರಿ. ಸ್ವಾತಂತ್ರ್ಯವನ್ನು ನೀಗಿಕೊಂಡ ಯಾವ ರಾಷ್ಟ್ರವೂ ಗೌರವದಿಂದ ತಲೆಯೆತ್ತಿ ನಿಲ್ಲಲಾರದು. ರಾಷ್ಟ್ರಸೇವಾ ದೀಕ್ಷೆಯನ್ನು ಹೊಂದಿರುವ ಆಚಾರ್ಯರು ನಮ್ಮೆಲ್ಲರಂತೆ ಬಾಹ್ಯಪ್ರಪಂಚದಲ್ಲಿ ನಿಲ್ಲುವುದು ಶಕ್ಯವಲ್ಲ. ರಾಷ್ಟ್ರದ ಪುಣ್ಯದಿಂದ ಇಂಥ

ಮಹಾತ್ಮರ ಉದಯವಾಗುತ್ತದೆಯಲ್ಲದೆ ಮತ್ತ ಬೇರೆಯಲ್ಲ. ಈಗ ನಾವೆಲ್ಲರೂ ಒಕ್ಕಟ್ಟಿನಿಂದ ಮಹಾತ್ಮರನ್ನು ಅನುಸರಿಸಿ ನಡೆದು ನಮ್ಮ ಉದ್ಧಾರವನ್ನು ಮಾಡಿಕೊಳ್ಳತಕ್ಕದು. ಜಾತಿ ಮತ ಸಂಘಗಳ ಗೊಂದಲಕ್ಕೆ ನಾವು ಒಳಗಾಗಬಾರದು. ನಾವೆಲ್ಲರೂ ಕರ್ಣಾಟಕ ಮಾತೆಯ ಮಕ್ಕಳು. ಒಂದು ಕೈಬೆರಳುಗಳಂತೆ ನಾವು ಬೇರೆಬೇರೆಯಾಗಿ ಕಂಡರೂ, ಆ ಐದು ಬೆರಳುಗಳೂ ಸೇರಿಯೇ ಯಾವುದೊಂದು ಕಾರ್ಯದಲ್ಲಿ ನೆರವಾದರೆ ಆ ಕಾರ್ಯ ಸ್ವಸಂಪೂರ್ಣವಾಗಿ ನಡೆಯುತ್ತದೆ ಎಂಬುದನ್ನು ಗಮನಿಸಬೇಕು. ಕೈ ಬೆರಳುಗಳಲ್ಲಿ ಯಾವುದೊಂದಕ್ಕೆ ಊನವಾದರೂ ಆ ಹಸ್ತವೇ ವಿಕಾರವಾಗುತ್ತದೆ. ಆ ಹಸ್ತದಿಂದ ಯಾವ ಕಾರ್ಯವೂ ಪೂರ್ಣವಾಗಿ ನಡೆಯಲು ಸಾಧ್ಯವಾಗುವುದಿಲ್ಲ.

ದೇಶಾಭಿಮಾನಿಗಳೇ, ಪಾರಮಾರ್ಥಿಕ ಧರ್ಮ ಸಾಧನೆಗೆ ಐಹಿಕ ವ್ಯವಹಾರ ಪರಿಪೂರ್ಣವಾಗಿರಬೇಕು; ಅಂಥ ಪರಿಪೂರ್ಣತೆಯುಂಟಾಗಬೇಕಾದರೆ ರಾಜಕೀಯ ಸ್ವಾತಂತ್ರ್ಯವಿರಬೇಕು. ಸ್ವಾತಂತ್ರ್ಯಪ್ರಿಯರಾದ ಓರಂಗಲ್ಲಿನ್ನ ಪ್ರತಾಪರುದ್ರದೇವರಾಯನೂ, ದೇವಗಿರಿಯ ರಾಜನೂ ಸೋತುಹೋದರು. ಈಗ ಆನೆಗೊಂದಿ ರಾಜ್ಯವೇ ಮುಂದಿನ ಸ್ವತಂತ್ರ ಕರ್ಣಾಟಕದ ತಳಹದಿಯಾಗಬೇಕು. ನಮ್ಮ ಧರ್ಮ ಸಂಸ್ಕೃತಿಗಳ ಉದ್ಧಾರಕಕ್ಕಾಗಿಯೇ ನಾವೀಗ ಈ ಸ್ವಾತಂತ್ರ್ಯ ಯುದ್ಧವನ್ನು ಮಾಡಬೇಕಾಗಿದೆ. ಶ್ರೀ ವಿರೂಪಾಕ್ಷಸ್ವಾಮಿಯ ಅನುಗ್ರಹದಿಂದ ನಾವು ಕನ್ನಡ ನಾಡಿನಲ್ಲಿ ಸ್ವಾತಂತ್ರ್ಯಗಳಿಸೋಣ. ಜಂಬುಕೇಶ್ವರ ಮಹಾರಾಜರಂಥ ಉಜ್ವಲ ದೇಶಾಭಿಮಾನಿಗಳೂ, ಸ್ವಾತಂತ್ರ್ಯಪ್ರಿಯರೂ, ನಮಗೆಲ್ಲ ಪ್ರಭುವಾಗಿರುವಾಗ ನಮಗೆ ಭಯವೇನು! ಮಹಾರಾಜರು ಆಚಾರ್ಯ ವಿದ್ಯಾರಣ್ಯರಲ್ಲಿಟ್ಟಿರುವ ಭಕ್ತಿ ಗೌರವಗಳಿಗೆ ಎಣೆಯಿಲ್ಲ. ನಾವೆಲ್ಲರೂ ವಿದ್ಯಾರಣ್ಯ ಮಹಾಯೋಗಿಯ ಸಲಹೆಗಳಂತೆ ನಡೆಯುವುದಾದರೆ ನಮ್ಮ ಶ್ರೇಯಸ್ಸು ಸ್ವತಸ್ಸಿದ್ಧವಾಗಿದೆ. ಅವರ ಕಾರ್ಯ ಸಂಧಾನ ನೈಪುಣ್ಯವನ್ನು ಸಾಮಾನ್ಯರು ಅರಿಯಲಾರರು. ಅವರ ರಾಜಕಾರಣ ಪಟುತ್ವವನ್ನು ಅಪ್ರಬುದ್ಧರು ತಿಳಿಯಲಾರರು. ಅವರು ಮಾಡುವ ರಾಜಕೀಯ ಯೋಜನೆಗಳ ರಹಸ್ಯವನ್ನು ಮೇಧಾವಿಗಳು ಮಾತ್ರವೇ ತಿಳಿಯಬಲ್ಲರು. ಆದ್ದರಿಂದ ನಾವು ಯಾವ ಊಹಾಪೋಹಗಳಿಗೆ ಎಡೆಗೊಡದೆ ಶ್ರದ್ಧೆಯಿಂದ ಅವರನು

ಹಿಂಬಾಲಿಸಬೇಕು. ಅವರಿಂದು ಮಹಾನಾಯಕರು! ಅವರ ಆಜ್ಞೆಯಂತೆ ನಡೆಯುವುದರಲ್ಲಿ ನಮ್ಮ ಸರ್ವಸ್ವವೂ ನಾಶವಾದರೂ ಆತ್ಮಾರ್ಪಣೆಯ ಪ್ರಸಂಗ ಬಂದರೂ ಅಂಜಬೇಡಿರಿ. ನಾಳಿನ ಯುದ್ಧಕ್ಕೆ ನೀವೆಲ್ಲರೂ ಹುಮ್ಮಸ್ಸಿನಿಂದ ನುಗ್ಗಬೇಕು. ಶತ್ರು ಸೈನ್ಯವನ್ನು ನುಗ್ಗುನುರಿ ಮಾಡಬೇಕು. ಈ ನನ್ನ ಸಂದೇಶವನ್ನು ತಾವೆಲ್ಲರೂ ಪಾಲಿಸಬೇಕು. ಕರ್ಣಾಟಕ ಮಾತೆಗೆ ಜಯವಾಗಲಿ" ಎಂದು ವೀರಗಂಭೀರವಾಣಿಯಿಂದ ಮಾತನಾಡಿದನು.

ಜಂಬುಕೇಶ್ವರರಾಯನು ಮೈಯುಬ್ಬಿ ಹುಕ್ಕರಾಯನನ್ನು ಸಂತೋಷದಿಂದ ಆಲಿಂಗಿಸಿಕೊಂಡನು. ಉಪ್ಪರಿಗೆಯಮೇಲೆ ತೆರೆ ಮರೆಯಲ್ಲಿ ಕುಳಿತುಕೊಂಡು ಈ ಸಂದೇಶವನ್ನು ಕೇಳುತ್ತಿದ್ದ ರಾಜಪುತ್ರಿ ಗಿರಿಜಾದೇವಿಯ ಕಣ್ಣಿನಲ್ಲಿ ಆನಂದಬಾಷ್ಪಗಳುದುರಿದುವು. ಅವಳ ಮೈ ರೋಮಾಂಚನವಾಯಿತು. ಶತ್ರುಬಲವನ್ನು ನಿಗ್ರಹಿಸಲು ತಾನೂ ಯುದ್ಧಭೂಮಿಗೆ ಧಾವಿಸಬೇಕೆಂದು ನಿರ್ಧರಿಸಿದಳು. ಅಂತಃಪುರದ ಸ್ತ್ರೀಯರು ದೇಶಕಲ್ಯಾಣಕ್ಕಾಗಿ ಆತ್ಮಾರ್ಪಣೆಯನ್ನು ಮಾಡಲೇಬೇಕಂದು ನಿಶ್ಚಯಿಸಿಕೊಂಡರು. ಒಬ್ಬೊಬ್ಬರೂ ಹುಕ್ಕರಾಯನನ್ನು ಮೆಚ್ಚಿ ಕೊಂಡಾಡುತ್ತ ಹೋಗುತ್ತಿದ್ದರು.

ಹುಕ್ಕರಾಯನು ಸೈನಿಕರಿಗೆ ತಕ್ಕ ಆಜ್ಞೆಗಳನ್ನು ಕೊಡುತ್ತ ಎಲ್ಲ ಗಿರಿದುರ್ಗಗಳನ್ನೂ ಜಲದುರ್ಗಗಳನ್ನೂ ಪರೀಕ್ಷಿಸಿ ಯುದ್ಧ ಸಿದ್ಧತೆಗಳನ್ನು ಚುರುಕಿನಿಂದ ನಡೆಯಿಸುತ್ತಿದ್ದನು. ಬುಕ್ಕರಾಯನು ತುಂಗಭದ್ರಾನದಿಯ ತೀರದಲ್ಲಿ ಸೈನ್ಯದೊಂದಿಗೆ ಠಾಣ್ಯ ಹಾಕಿದನು. ಆನೆಗೊಂದಿ ರಾಜ್ಯ ಯುದ್ಧಕ್ಕೆ ಸಿದ್ಧವಾಗುತ್ತಿರುವುದನ್ನು ದೆಹಲಿಯ ಸುಲ್ತಾನನು ಗೂಢಚಾರರಿಂದ ತಿಳಿದು ಸಿಟ್ಟುಗೊಂಡನು.

ಹುಕ್ಕನು ವಿದ್ಯಾರಣ್ಯರ ಆಶ್ರಮಕ್ಕೆ ಹೋಗಿ, ಸಾಷ್ಟಾಂಗ ಪ್ರಣಾಮ ಮಾಡಿ ಅವರಿಂದ ಆಶೀರ್ವಾದವನ್ನು ಪಡೆದನು. ಮುಸಲ್ಮಾನರು ದಂಡೆತ್ತಿ ಬರುತ್ತಿರುವರೆಂದು ವರ್ತಮಾನವೂ ಬಂತು. ಇನ್ನು ಒಂದು ವಾರದೊಳಗಾಗಿಯೇ ಯುದ್ಧ ಕೈಗಟ್ಟಬೇಕಾಗಿದೆ. ಕಂಪಿಲನಗರದ ರಾಜನಾದ ರಾಯಿಯೂ ತಕ್ಕ ಸಿದ್ಧತೆಗಳನ್ನು ಮಾಡಿಕೊಂಡಿದ್ದನು. ಮುಸಲ್ಮಾನರ ದಂಡು ಮೊದಲು ಕಂಪಿಲ ನಗರದ ಮೇಲೆ ನುಗ್ಗಿತು!

ಮಳೆಗಾಲದ ಪ್ರವಾಹದಂತೆ ನುಗ್ಗಿ ಬಂದ ಮುಸಲ್ಮಾನರ ಏಟಿಗೆ ಕಂಪಿಲ ರಾಜ್ಯ ತಲ್ಲಣಿಸಿತು. ಸೈನಿಕರೂ ಪರಾಕ್ರಮದಿಂದಲೇ ಯುದ್ಧ ಮಾಡಿದರು. ರಾಯಿಯಾದರೂ ಏಕಾಂಗವೀರನಾಗಿ ನಿಂತು ಶತ್ರುಗಳನ್ನು ಸದೆಬಡಿಯುತ್ತ ಪ್ರಚಂಡ ಶೌರ್ಯವನ್ನು ತೋರಿಸಿದನು. ಆದರೇನು ! ಮುಸಲ್ಮಾನರ ಹೊಡೆತಕ್ಕೆ ಪುಟ್ಟ ಕಂಪಿಲರಾಜ್ಯ ನಿಲ್ಲಬಲ್ಲುದೆ ! ರಾಯಿ ಯುದ್ಧದಲ್ಲಿ ಮಡಿದು ಬಿದ್ದನು. ರಾಣಿವಾಸದವರು ಶತ್ರುಗಳ ಕೈಗೆ ಸಿಕ್ಕಬಾರದೆಂದು ಅಗ್ನಿಪ್ರವೇಶ ಮಾಡಿದರು. ಕಂಪಿಲ ನಗರಕ್ಕೆ ಒದಗಿದ ದುರ್ಗತಿಯನ್ನು ಕೇಳಿ ಜಂಬು ಕೇಶ್ವರರಾಯನು ಕಣ್ಣೀರು ಹಾಕಿದನು. ಮುಸಲ್ಮಾನರು ಆನೆಗೊಂದಿಯ ಹಣೆಬರೆಹವನ್ನು ತೊಡೆಯುವರೆಂದು ಅವನು ಚಿಂತಿಸಿದನು.

ರಾತ್ರಿ ಮೊದಲನೆಯ ಜಾಮು ಕಳೆದಿದೆ. ಆನೆಗೊಂದಿಯ ಅರಮನೆ ಯಲ್ಲಿ ಜಂಬುಕೇಶ್ವರರಾಯನು ತನ್ನ ಮಂತ್ರಿ ಸೇನಾಪತಿಗಳೊಂದಿಗೆ ರಹಸ್ಯ ಮಂತ್ರಾಲೋಚನೆಯನ್ನು ನಡೆಯಿಸಿ ಮುಂದಿನ ಕಾಳಗಕ್ಕೆ ಆನೆ ಗೊಂದಿಯು ಸಿದ್ಧವಾಗಲೇಬೇಕೆಂದು ನಿರ್ಧರಿಸಿದನು. ಆ ಆಲೋಚನಾ ಸಭೆಯಲ್ಲಿ ಶ್ರೀ ವಿದ್ಯಾರಣ್ಯರೂ ವ್ಯಾಘ್ರಾಜಿನದಮೇಲೆ ಮಂಡಿಸಿದ್ದರು. ರಾಜ ಪುತ್ರಿ ಗಿರಿಜಾದೇವಿ ತನ್ನ ತಂದೆಯ ಪಕ್ಕದಲ್ಲಿ ಕುಳಿತಿದ್ದಳು. ಇಷ್ಟು ಜನ ರಲ್ಲದೆ ಅಲ್ಲಿ ಇತರರು ಯಾರೂ ಇರಲಿಲ್ಲ. ಅಲ್ಲಿ ನಡೆದ ಸಂಭಾಷಣೆ ಯನ್ನು ಅತಿ ರಹಸ್ಯವಾಗಿಟ್ಟಿರಬೇಕೆಂಬ ರಾಜಾಜ್ಞೆಯಂತೆ, ಅರಮನೆಯ ಸುತ್ತಲೂ ಯಾರೂ ಸುಳಿಯದಂತೆ ಪಹರೆಯವರು ಸರ್ಪಕಾವಲು ನಿಂತಿ ದ್ದರು.

ಜಂಬುಕೇಶ್ವರರಾಯ : —ಪೂಜ್ಯರೆ, ಮಂತ್ರಿ ಸೇನಾಪತಿಗಳೇ, ಕಂಪಿಲ ನಗರಕ್ಕೆ ನಾವು ಕಳುಹಿಸಿದ್ದ ದಂಡು ಸಂಪೂರ್ಣವಾಗಿ ನಷ್ಟವಾಯಿತು. ಬೆಳಕು ಹರಿಯುವುದರೊಳಗಾಗಿಯೇ ಮುಸಲ್ಮಾನರು ಆನೆಗೊಂದಿಯನ್ನು ಸಮಾಪಿಸಬಹುದು. ಸುಲ್ತಾನನ ಸೈನ್ಯ ಅಪಾರವಾಗಿದೆ. ಈ ಸಮಯ ದಲ್ಲಿ ನಾವು ನಮ್ಮ ಶರಣುಹೊಕ್ಕಿರುವ ಬಹಾಉದ್ದೀನನನ್ನು ಬಿಟ್ಟುಕೊಡು ವುದು ಸರಿಯಲ್ಲ. ಯುದ್ಧದಲ್ಲಿ ನಾವು ಸೋತರೂ ಚಿಂತೆ ಇಲ್ಲ. ಮರೆ ಹೊಕ್ಕವರನ್ನು ಕಾಪಾಡಲೇಬೇಕು. ಈ ರಾಜ್ಯದಾಸೆಯಿಂದ ನಾನು ಯೋಚಿಸುತ್ತಿಲ್ಲ. ನಮ್ಮ ವಂಶ ಗೌರವವನ್ನು ಉಳಿಸಬೇಕೆಂಬುದೇ ನನ್ನ

ಯೋಚನೆ. ನಾಳೆ ಮುಸಲ್ಮಾನರು ಆನೆಗೊಂದಿಯನ್ನು ಜಯಿಸಿದರೂ ಜಯಿಸಲಿ. ಅವರು ನಮ್ಮ ಗೌರವವನ್ನಾದರೂ, ರಾಣಿವಾಸದವರ ಮಾನವನ್ನಾಗಲಿ ಜಯಿಸದಂತೆ ಹೋರಾಡಬೇಕು. ಶತ್ರುಗಳ ಅತ್ಯಾಚಾರಕ್ಕೆ ನಮ್ಮ ಸ್ತ್ರೀಯರು ಒಳಗಾಗದಂತೆ ನೋಡಿಕೊಳ್ಳಬೇಕು.

ವಿದ್ಯಾರಣ್ಯರು:—ಮಹಾರಾಜಾ, ಪ್ರಭುಯೋಗ್ಯವಾದ ಮಾತನ್ನೇ ಹೇಳಿದೆ. ನಿನ್ನ ಆಲೋಚನೆಯನ್ನು ಕೇಳಿ ಯಾವ ವೀರ ಕನ್ನಡಿಗನು ತಾನೆ ಹೆಮ್ಮೆ ಪಡದಿರಲಾರನು! ಪ್ರಾಣಕ್ಕಿಂತಲೂ ಮಾನವೇ ಮಿಗಿಲಾದುದು. ಅಪಯಶಸ್ಸಿಗೆ ಪಾತ್ರರಾಗಿ ಎಷ್ಟುದಿನ ಬಾಳಿದರೂ ಒಂದೇ. ಮಂತ್ರಿ ದೇವರಾಯನೇ ಇದುವರೆಗೂ ಸೇನಾಪತಿಯಾಗಿ ಇದ್ದುಕೊಂಡು ರಾಜಕಾರ್ಯಗಳನ್ನು ದರ್ಪದಿಂದಲೇ ನಡೆಯಿಸಿದನು. ಈಗ ಹುಕ್ಕಬುಕ್ಕರು ಸೇನಾಧಿಪತಿಗಳಾಗಿದ್ದಾರೆ. ಅವರೇನೂ ಸಾಮಾನ್ಯರಲ್ಲ! ಪರಾಕ್ರಮದಿಂದ ಯುದ್ಧಮಾಡಿ ನಿನ್ನ ಕೀರ್ತಿಯನ್ನು ಉಳಿಸುತ್ತಾರೆಂಬ ನಂಬುಗೆಯಿದೆ. ನೀನು ಚಿಂತಿಸಬೇಕಾಗಿಲ್ಲ. ಮುಂದಿನ ಕಾರ್ಯವೇನೆಂಬುದನ್ನು ನಿರ್ಧರಿಸಿರಿ.

ದೇವರಾಯ:—ಪ್ರಭುವೇ, ಆಚಾರ್ಯರು ಅಪ್ಪಣೆಕೊಡಿಸಿದಂತೆ ನಾವು ತಮ್ಮ ವಂಶ ಗೌರವವನ್ನು ಕಾಪಾಡಲು ಬದ್ಧಕಂಕಣರಾಗಿದ್ದೇವೆ. ಹುಕ್ಕಬುಕ್ಕರು ನಮಗೆ ದೈವಾನುಗ್ರಹ ಬಲದಿಂದಲೂ, ಗುರುಗಳ ಆಶೀರ್ವಾದದಿಂದಲೂ ಸಕಾಲಕ್ಕೆ ಒದಗಿದ್ದಾರೆ. ಕೆಚ್ಚೆದೆಯ ಕಟ್ಟಾಳುಗಳಾದ ಈ ಸೇನಾನಾಯಕರ ನೇತೃತ್ವದಲ್ಲಿ ನಮ್ಮ ಸೈನ್ಯಗಳು ಧೈರ್ಯ ಸಾಹಸದಿಂದ ಕಾದಾಡುವುದರಲ್ಲಿ ಸಂಶಯವಿಲ್ಲ. ನೀವು ಯಾವ ರೀತಿಯಿಂದಲೂ ಚಿಂತಿಸಬೇಕಾಗಿಲ್ಲ.

ರಾಜ:—ನಾನು ಸೋತುಹೋದೇನೆಂಬ ಹೆದರಿಕೆಯಿಂದ ಚಿಂತಿಸುತ್ತಿಲ್ಲ. ಆದರೆ ಮುಂದೊದಗಬಹುದಾದ ವಿಪತ್ತಿನಿಂದ ಪಾರಾಗಲು ತಕ್ಕ ಉಪಾಯವನ್ನು ಯೋಚಿಸಬೇಕಲ್ಲವೆ?

ಮಂತ್ರಿ:—ಈಗಾಗಲೇ ನಾವು ಎಲ್ಲ ಸಿದ್ಧತೆಗಳನ್ನೂ ಮಾಡಿರುವೆವಲ್ಲವೆ! ಈಗ ನಾವು ಯೋಚಿಸಬೇಕಾದ ಕಾರ್ಯವೇನು!

ರಾಜ:—ಗುರುದೇವ, ನನ್ನ ರಾಜ್ಯಕ್ಕಾಗಿ ನಾನು ಚಿಂತಿಸುವುದಿಲ್ಲ, ನನ್ನ ಪ್ರಾಣಕ್ಕಾಗಿ ನಾನು ಯೋಚಿಸುತ್ತಿಲ್ಲ. ಈ ನನ್ನ ಏಕಮಾತ್ರ ಪುತ್ರಿ ಗಿರಿಜೆ

ಯನ್ನು ಅನ್ಯರಪಾಲು ಮಾಡಬೇಕಾಯಿತೆಂದು ಚಿಂತಿಸುತ್ತೇನೆ. "ಗಿಣಿಯನ್ನು ಸಾಕಿ ಗಿಡುಗನಿಗೆ ಕೊಟ್ಟಂತಾಗುವುದಲ್ಲ!" ಎಂದು ದುಃಖವಾಗುತ್ತದೆ. ಗಂಡು ಮಕ್ಕಳಿಲ್ಲದ ನನಗೆ ಈ ಮಗಳೇ ಸರ್ವಸ್ವವೂ ಆಗಿದ್ದಳು. ಈ ವಿಪತ್ತಿನಿಂದ ನನ್ನ ಮಗಳನ್ನು ರಕ್ಷಿಸುವುದಾದರೂ ಹೇಗೆ?

ವಿದ್ಯಾರಣ್ಯರು:—ಮಹಾರಾಜಾ, ನಿನ್ನ ಯೋಚನೆ ಸಾಧುವಾದುದೇ ಸರಿ. ಮುಂದಿನ ಕರ್ಣಾಟಕದ ರಾಜಲಕ್ಷ್ಮಿಯಾಗಬೇಕಾಗಿರುವ ಮಗಳನ್ನು ನಾವು ಜತನದಿಂದ ರಕ್ಷಿಸಲೇಬೇಕು. ಇದಕ್ಕಾಗಿ ನೀನು ಯೋಚಿಸಬೇಕಾಗಿಲ್ಲ. ಕುಮಾರಿಯು ರಕ್ಷಣೆಯನ್ನು ನನಗೆ ವಹಿಸು. ನಾನು ನಿರಾತಂಕವಾಗಿ ಆಕೆಯನ್ನು ಸುರಕ್ಷಿತವಾದ ಸ್ಥಳದಲ್ಲಿಟ್ಟು ಕಾಪಾಡುವೆನು.

ಗಿರಿಜಾದೇವಿ:—ಅಪ್ಪಾಜಿ, ನನಗಾಗಿ ನೀವು ಯೋಚಿಸಬಹುದೆ! ನಾನು ಜಾತಿ ಕ್ಷತ್ರಿಯ ಪುತ್ರಿಯಲ್ಲವೆ? ನಾನು ಭಾರತ ಮಹಿಳೆಯರ ಕೀರ್ತಿಗೆ ಕಲಂಕ ತರಲಾರೆನು. ಹುಟ್ಟಿದ ವಂಶಕ್ಕೆ ಕುಂದು ತರಲಾರೆನು. ನನಗೆ ಅನುಮತಿ ಕೊಟ್ಟರೆ ನಾನೂ ರಣಭೂಮಿಯಲ್ಲಿ ಶತ್ರು ಸಂಹಾರಮಾಡಿ ಕರ್ಣಾಟಕದ ಧವಳಕೀರ್ತಿಯನ್ನು ಉಳಿಸುತ್ತೇನೆ. ಇಲ್ಲವಾದರೆ, ಅಗ್ನಿಪ್ರವೇಶ ಮಾಡಿ ಮಾನಸಂರಕ್ಷಣೆ ಮಾಡಿಕೊಳ್ಳುತ್ತೇನೆ.

ರಾಜ :—ಕುಮಾರೀ, ನೀನು ವೀರಪುತ್ರಿ! ಆದರೆ ನಾನು ಪಾಪಿ. ಸುಕುಮಾರಿಯಾದ ನೀನು ಅರಮನೆಯಲ್ಲಿ ಅರಗಿಣಿಯಂತೆ ಬೆಳೆಯಬೇಕಾದ ಕಾಲದಲ್ಲಿ ಭೀಕರ ರಣಭೂಮಿಗೆ ನಿನ್ನನ್ನು ಹೇಗೆ ಕಳುಹಿಸಲಮ್ಮ! ಯೋಗ್ಯ ರಾಜಕುಮಾರನಿಗೆ ಕೊಟ್ಟು ರಾಜವೈಭವದಿಂದ ವಿವಾಹ ಮಾಡುವ ಪುಣ್ಯ ನನಗಿಲ್ಲದಂತಾಯಿತು! ರಾಜ್ಯಕ್ಕಿಂತಲೂ ನೀನೇ ನನಗೆ ಹೆಚ್ಚು. ನಾನು ರಾಜನಲ್ಲದಿದ್ದರೂ ನಿನ್ನ ತಂದೆಯಾಗಿದ್ದರೆ .ಅದೇ ನನಗೆ ಪರಮ ಭಾಗ್ಯ. ಮುಂದೆ ಕರ್ಣಾಟಕದ ಸಂತಾನಲಕ್ಷ್ಮಿಯಾಗಿ ನೀನು ರಾಜವಂಶವನ್ನು ಉದ್ಧರಿಸಲು, ಬದುಕಿರಬೇಕೆಂಬುದೇ ನನ್ನ ಆಸೆ. ನನ್ನ ಇಷ್ಟವನ್ನು ನಡಿಸಿಕೊಡು, ತಾಯಿ!

ಗಿರಿಜಾ:—ಅಪ್ಪಾಜಿ, ಈ ವಿಪತ್ತಿನಲ್ಲಿ ನಿಮ್ಮನ್ನು ಬಿಟ್ಟು ನಾನು ಮಾತ್ರ ಬದುಕಬೇಕೆಂಬ ಆಸೆಯಿಲ್ಲ. ಏನಾದರೂ ಆಗಲಿ, ನಾನು ನಿಮ್ಮೊಂದಿಗೆ ಇದ್ದು ಪ್ರಾಣಬಿಡಲು ಸಿದ್ಧಳಾಗಿದ್ದೇನೆ.

ವಿದ್ಯಾರಣ್ಯರು :—ತಾಯಿ, ನಿನ್ನಿಂದ ಮುಂದೆ ರಾಜ ವಂಶ ಉದ್ಧೃತವಾಗಬೇಕಾಗಿದೆ. ಕರ್ಣಾಟಕದ ಮಂಗಳವನ್ನು ಸಾಧಿಸುವ ಸರ್ವಮಂಗಳೆಯಾಗಬೇಕು ನೀನು. ನಿನ್ನಲ್ಲಿ ಆತ್ಮಾಭಿಮಾನವಿರುವಂತೆಯೇ ದೇಶಾಭಿಮಾನವೂ ತುಂಬಿದೆ. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ನೀನು ಸ್ಥೈರ್ಯಗೆಡಬಾರದು. ಜಂಬುಕೇಶ್ವರ ರಾಯನಿಗೆ ನೀನು ಬಹಿಃಪ್ರಾಣಳಾಗಿದ್ದೀಯೆ. ನಿನ್ನ ಸೌಭಾಗ್ಯವೇ ನಾಡಿನ ಸೌಭಾಗ್ಯ; ನಿನ್ನ ಉನ್ನತಿಯೇ ನಾಡಿನ ಉನ್ನತಿ ; ರಾಷ್ಟ್ರಹಿತದೃಷ್ಟಿಯಿಂದ ನೀನು ಸುರಕ್ಷಿತವಾಗಿರಬೇಕಾದುದು ಅತ್ಯಾವಶ್ಯಕ. ವಿವೇಕಶಾಲಿನಿಯಾದ ನಿನಗೆ ಹೆಚ್ಚು ಹೇಳಬೇಕಾದ್ದೇನಿದೆ ! ಗುರುಹಿರಿಯರ ಮಾತಿನಲ್ಲಿ ಗೌರವವಿಟ್ಟು ಈ ಸಮಯದಲ್ಲಿ ನೀನು ರಾಜಧಾನಿಯನ್ನು ಬಿಟ್ಟು ನಮ್ಮ ಆಶ್ರಮದಲ್ಲಿ ಗೋಪ್ಯವಾಗಿ ಕೆಲವು ದಿನ ಕಾಲ ಕಳೆಯಬೇಕೆಂಬುದೇ ನನ್ನ ಅಭಿಲಾಷೆ. ನೀನು ಮರುಮಾತನಾಡದೆ ಒಪ್ಪಬೇಕಮ್ಮ.

ಗಿರಿಜಾ :—ಮಹಾತ್ಮಾ, ನಿಮ್ಮ ಮಾತಿನಂತೆಯೇ ಆಗಲಿ. ಆದರೆ, ಈ ನಗರದ ಎಲ್ಲ ಸ್ತ್ರೀಯರೂ ಅಪಮಾನಕ್ಕೆ ಅಂಜಿ ಅಗ್ನಿಪ್ರವೇಶ ಮಾಡುವುದಾದರೆ, ನಾನು ಮಾತ್ರ ನನ್ನ ಅಕ್ಕ ತಂಗಿಯರನ್ನೆಲ್ಲ ಬಿಟ್ಟು ತಲೆ ಮರೆಯಿಸಿಕೊಳ್ಳುವುದು ಯೋಗ್ಯವೆ !

ರಾಜ :—ಮಗಳೆ, ನಾನು ಸಾಯುವುದಕ್ಕೆ ಹೆದರುತ್ತಿಲ್ಲ. ಆದರೆ ನಿನಗೆ ಮಾನಾಪಹರಣವಾದೀತೆಂದು ಭಯವಾಗುತ್ತಿದೆ. ಅಮ್ಮಾ, ಗುರುಗಳ ಆಶೀರ್ವಾದದಿಂದ ನೀನು ಎಲ್ಲಿಯಾದರೂ ಸುಖವಾಗಿ ಬಾಳು. ನಿನ್ನಿಂದ ಕರ್ಣಾಟಕದ ಜೀವನಜ್ಯೋತಿ ಬೆಳಗಬೇಕಾಗಿದೆ. ರಾಜವಂಶ ಕಲ್ಪಲತೆ ಹೂಬಿಟ್ಟು ಫಲಿಸಬೇಕಾಗಿದೆ. ಈ ಯುದ್ಧ ಮುಗಿಯುವವರೆಗಾದರೂ ನೀನು ರಾಜಧಾನಿಯನ್ನು ಬಿಟ್ಟು ಸುರಕ್ಷಿತವಾದ ಸ್ಥಳದಲ್ಲಿರುವುದೇ ಸೂಕ್ತವಾಗಿದೆ. ಯುದ್ಧದಲ್ಲಿ ನಮಗೆ ಜಯವಾದರಂತೂ ನಿನ್ನ ವಿವಾಹವನ್ನು ನಡೆಯಿಸಿ ಸಂತೋಷಪಡುತ್ತೇನೆ; ನನಗೇನಾದರೂ ಮರಣ ಸಂಭವಿಸಿದರೆ ವಿದ್ಯಾರಣ್ಯರೇ ನಿನ್ನ ತಂದೆ.

ವಿದ್ಯಾರಣ್ಯರು :—ಕುಮಾರೀ, ಚಿಂತಿಸಬೇಡ. ನೀನು ಇತರ ಹೆಂಗಸ ರಂತೆ ಸಾಮಾನ್ಯಳಲ್ಲಮ್ಮ! ನಿನ್ನ ಸ್ಥಾನಮಾನಗಳು ಉನ್ನತವಾಗಿವೆ. ನೀನು ಬದುಕಿರಬೇಕಾದುದು ನಾಡಿನ ಏಳಿಗೆಯ ದೃಷ್ಟಿಯಿಂದ ಆವಶ್ಯಕ.

ದೇವರಾಯ :—ಅಮ್ಮಾ, ಈ ವಿಷಮಪರಿಸ್ಥಿತಿಯಲ್ಲಿ ನೀನು ನಮ್ಮ ಮಾತನ್ನು ಕೇಳುವುದೇ ಕ್ಷೇಮ. ನಿನಗೆ ಮಂಗಳವಾಗಲಿ. ಧೈರ್ಯದಿಂದ ವರ್ತಿಸಿ, ವೀರಪುತ್ರಿಯೆಂಬುದನ್ನು ಮರೆಯದಿರು. ನೀನು ಮುಂದೆ ವೀರಪತ್ನಿಯಾಗಿ ವೀರಮಾತೆಯಾಗಿ ಕರ್ಣಾಟಕ ಭಾಗ್ಯ ಸೂರ್ಯನ ಮುಂಬೆಳಕನ್ನು ಬೆಳಗಿಸಬೇಕು. ನೀನು ಈಗಲೇ ಈ ನಿಶೀ ಸಮಯದಲ್ಲಿ ವಿದ್ಯಾರಣ್ಯರೊಂದಿಗೆ ಆಶ್ರಮಕ್ಕೆ ಹೋಗಿ ನಿಶ್ಚಿಂತಳಾಗಿರು.

ಗಿರಿಜಾದೇವಿ :—ಪೂಜ್ಯ ಗುರುಹಿರಿಯರೆ, ನಿಮ್ಮೆಲ್ಲರ ಆಜ್ಞೆಯನ್ನು ನಾನು ಮೀರಲಾರೆನು. ನನ್ನ ತಾಯಿತಂದೆಗಳನ್ನೂ ದಾಸಿಯರನ್ನೂ ಬಿಟ್ಟುಹೋಗಲು ಮನಸ್ಸು ಒಪ್ಪುವುದಿಲ್ಲ. ಆನೆಗೊಂದಿಯನ್ನು ಹೇಗೆ ಬಿಡಲಿ !

ಮಗಳ ಮಾತನ್ನು ಕೇಳಿ ಜಂಬುಕೇಶ್ವರರಾಯನ ಕಣ್ಣಿನಲ್ಲಿ ನೀರು ತುಂಬಿತು. ಮಗಳನ್ನು ಅಪ್ಪಿಕೊಂಡು ಗದ್ಗದ ಸ್ವರದಿಂದ—"ತಾಯೀ, ನನ್ನಂಥ ಅದೃಷ್ಟಹೀನನ ಮನೆಯಲ್ಲಿ ಹುಟ್ಟಿ ಕಷ್ಟಪಡಬೇಕಾಯಿತೆ ! ಮುಂದೆ ನಿನ್ನಿಂದ ಈ ವಂಶದ ಕೀರ್ತಿ ಹೆಚ್ಚಬೇಕಮ್ಮ ! ಇದೇ ನಮ್ಮಿಬ್ಬರ ಕಡೆಯ ಸಂದರ್ಶನ. ಶ್ರೀ ಗುರುವಿನ ಸನ್ನಿಧಿಯಲ್ಲಿ ನನ್ನದೊಂದು ಬಿನ್ನಹ ವನ್ನು ನೀನು ನಡೆಯಿಸಿಕೊಡುವುದಾಗಿ ಮಾತು ಕೊಡು. ನೀನು ಈ ಹುಕ್ಕ ರಾಯನನ್ನು ಕೈಹಿಡಿದು ಅವನ ಸತಿಯಾಗಿ ಬಾಳಬೇಕೆಂಬುದೇ ನನ್ನ ಆಸೆ. ಹುಕ್ಕರಾಯ ! ನೀನು ನನ್ನ ಮಾತನ್ನು ನಡೆಯಿಸಿಕೊಡು. ಈ ನನ್ನ ಮುದ್ದು ಮಗಳನ್ನು ನೀನು ವರಿಸಿ ನಮ್ಮ ವಂಶವನ್ನು ಉದ್ಧಾರ ಮಾಡು"— ಎಂದು ಹೇಳುತ್ತ ಮಗಳ ಕೈಯನ್ನು ಹುಕ್ಕರಾಯನ ಕೈಯ್ಯಲ್ಲಿಟ್ಟು ವಿದ್ಯಾ ರಣ್ಯರ ಕಡೆಗೆ ನೋಡಿದನು. ಅವನ ಇಂಗಿತವನ್ನು ಅರಿತ ವಿದ್ಯಾರಣ್ಯರು— 'ತಥಾಸ್ತು' ಎಂದು ಆಶೀರ್ವದಿಸಿದರು. ಆ ವಧೂವರರು ನೀರು ತುಂಬಿದ ಕಣ್ಣುಗಳಿಂದ ಒಬ್ಬರನ್ನೊಬ್ಬರು ನೋಡಿದರು.

ಸರಿಹೊತ್ತು ಕಳೆಯುತ್ತ ಬಂತು. ವಿದ್ಯಾರಣ್ಯರ ಮಾತಿನಂತೆ ಗಿರಿಜಾದೇವಿಯು ಆಶ್ರಮ ವಟುವಿನಂತೆ ವೇಷವನ್ನು ಬದಲಾಯಿಸಿಕೊಂಡು ಅವರ ಸಂಗಡ ಹೊರಡಲು ಅನುವಾದಳು. ಪ್ರಯಾಣ ಕಾಲದಲ್ಲಿ ಆನೆಗೊಂದಿಯ ಜನರಿಗೇ ಆಗಲಿ ಅಥವಾ ಮಾರ್ಗ ಮಧ್ಯದಲ್ಲಿ ಶತ್ರು ಪಕ್ಷದ ಗೂಢಚಾರರಿಗೇ ಆಗಲಿ ರಾಜಕುಮಾರಿಯ ಸುಳುವು ತಿಳಿಯಬಾರದೆಂದೂ ಮತ್ತು ಅವಳನ್ನು ಇತರರು ಯಾರೇ ಆಗಲಿ ಗುರುತಿಸಬಾರದೆಂದೂ ವಿದ್ಯಾರಣ್ಯರು ಉದ್ದೇಶಿಸಿದರು. ಆವಳು ತಾಯಿ ತಂದೆಗಳ ಪಾದಕ್ಕೆ ಭಕ್ತಿಯಿಂದ ನಮಸ್ಕರಿಸಿ, ಗುರುಗಳಿಗೆ ಅಭಿವಂದಿಸಿ ಅರಮನೆಯಿಂದ ನಿಶೀಸಮಯದಲ್ಲಿ ಹೊರಟಳು. ಹುಕ್ಕ ಬುಕ್ಕರು ಸುಸಜ್ಜಿತರಾಗಿ ಹಿಂಬಾಲಿಸಿದರು. ಮುಂದುಗಡೆ ಹುಕ್ಕನೂ, ಅವನ ಹಿಂದೆ ವಿದ್ಯಾರಣ್ಯರೂ, ಅವರ ಹಿಂದೆ ವಟುವೇಷಧಾರಿಣಿ ಗಿರಿಜಾದೇವಿಯೂ, ಆಕೆಯ ಹಿಂದೆ ಸದಾಶಿವ ಮತ್ತು ಚಂದ್ರಶೇಖರ ಶಿಷ್ಯರೂ, ಹಿಂದುಗಡೆಯಲ್ಲಿ ಬುಕ್ಕರಾಯನೂ ನಡೆದು ಹೋಗುತ್ತಿದ್ದರು. ಬೆಳಕು ಹರಿಯುವದಕ್ಕೆ ಮುಂಚಿತವಾಗಿಯೇ ಆವರು ಆಶ್ರಮವನ್ನು ಸೇರಿದರು. ಹುಕ್ಕ ಬುಕ್ಕರು ವಿದ್ಯಾರಣ್ಯರ ಅನುಮತಿಯನ್ನು ಪಡೆದು ಕೂಡಲೇ ಅಲ್ಲಿಂದ ಹಿಂದಿರುಗಿ ಆನೆಗೊಂದಿಯನ್ನು ಸೇರಿದರು.

ಮುಸಲ್ಮಾನರ ದಂಡು ಒಂದೆರಡು ದಿನಗಳಲ್ಲಿಯೇ ಬಂತು. ಮೊದಲೇ ಜಂಬುಕೇಶ್ವರರಾಯನು ಅರಮನೆಯಲ್ಲಿದ್ದ ಅಪಾರ ಐಶ್ವರ್ಯವನ್ನೆಲ್ಲ ರಹಸ್ಯವಾಗಿ ಸಾಗಿಸಿ ನಿರ್ಜನ ಪ್ರದೇಶದಲ್ಲಿ ಅದನ್ನು ನೆಲದ ಮರೆಯಲ್ಲಿ ಅಡಗಿಸಿದ್ದನು. ಅದನ್ನು ಹುಕ್ಕನಿಗೆ ಮಾತ್ರ ಹೇಳಿದ್ದನು. ಮುಸಲ್ಮಾನರ ದಂಡು ಬಂದು ಆನೆಗೊಂದಿಯನ್ನು ಮುತ್ತಿತು. ಹುಕ್ಕ ಬುಕ್ಕರು ಅಸಾಧಾರಣ ಪರಾಕ್ರಮದಿಂದ ಯುದ್ಧ ಮಾಡುತ್ತ ಶತ್ರು ಸೈನಿಕರನ್ನು ಧ್ವಂಸ ಮಾಡುತ್ತಿದ್ದರು. ಮಂತ್ರಿ ದೇವರಾಯನು ಪಟ್ಟಣದ ಪಶ್ಚಿಮದಿಕ್ಕಿನ ಬಯಲಿನಲ್ಲಿ ಹಗೆಗಳೊಂದಿಗೆ ಸಾಹಸದಿಂದ ಕಾದಾಡುತ್ತ ಮಡಿದು ಬಿದ್ದನು. ಮಂತ್ರಿಯು ಸತ್ತುಹೋದುದನ್ನು ಕಂಡು ಆನೆಗೊಂದಿಯ ಸೈನಿಕರು ದಿಕ್ಕುಗೆಟ್ಟು ಓಡಿದರು. ಶತ್ರು ಸೈನಿಕರು ಉತ್ಸಾಹದಿಂದ ಅರಮನೆಯ ಕಡೆಗೆ ನುಗ್ಗಿದರು. ಜಂಬುಕೇಶ್ವರರಾಯನು ಮುದುಕನಾದರೂ ಎದೆಗೆಡದೆ ಯುದ್ಧ ಮಾಡುತ್ತಲೇ ಇದ್ದನು. ಶತ್ರುಗಳ ಏಟು ಬಲವಾಯಿತು. ಮಂತ್ರಿಯು

ಸತ್ತುಹೋದನೆಂದು ಆನೆಗೊಂದಿಯ ಸೈನಿಕರು ಕೂಗುತ್ತ ಯುದ್ಧಭೂಮಿ ಯಿಂದ ಓಡುತ್ತಿದ್ದರು. ರಾಜನಿಗೆ ಅದು ಕೇಳಿಸಿತು. ಅದುವರೆಗಾಗಲೇ ಅವನೂ ಕೈಸೋತು ನಿಂತು ಹೋರಾಡುತ್ತಿದ್ದನು. ಮುಸಲ್ಮಾನರು ಅವ ನನ್ನು ಸುತ್ತುಗಟ್ಟಿದರು. ಅವನು ಕುಳಿತಿದ್ದ ಕುದುರೆಗೆ ಏಟುಬಿದ್ದು ಅದು ನೆಲಕ್ಕುರುಳಿತು. ಅದರೊಂದಿಗೆ ರಾಜನೂ ಕೆಳಗೆ ಬಿದ್ದನು. ಮುಸ ಲ್ಮಾನರು ಆ ಗಡಿಬಿಡಿಯಲ್ಲಿ ಅವನ ತಲೆಯನ್ನು ಕತ್ತರಿಸಿಹಾಕಿದರು. ಆನೆ ಗೊಂದಿಯ ಸೈನ್ಯ ಕಾಲಿಗೆ ಬುದ್ಧಿಹೇಳಿತು. ಅಂತಃಪುರದ ಸ್ತ್ರೀಯರು ಅಗ್ನಿಪ್ರವೇಶ ಮಾಡಿದರು. ಹುಕ್ಕ ಬುಕ್ಕರು ಕೈಸೆರೆಯಾದರು. ಯುದ್ಧ ಮುಗಿಯಿತು. ಪಟ್ಟಣವನ್ನು ಸೂರೆಮಾಡಿ ಕೈಗೆ ಸಿಕ್ಕಿದ ಕೊಳ್ಳೆಯನ್ನು ಶತ್ರುಗಳು ತಂದು ಸುಲ್ತಾನನಿಗೆ ಒಪ್ಪಿಸಿದರು. ತೊಗಲಕನು ಹುಕ್ಕಬುಕ್ಕರ ಸಾಹಸವನ್ನು ಕಣ್ಣಾರೆ ನೋಡಿ ಮೆಚ್ಚಿಕೊಂಡಿದ್ದುದರಿಂದ, ಅವನು ಅವರನ್ನು ಸೆರೆಯಿಂದ ಬಿಡಿಸಿ ಆನೆಗೊಂದಿಯ ರಾಜ್ಯದಲ್ಲಿ ಅವರು ಮಂತ್ರಿಸೇನಾಪತಿ ಗಳಾಗಿರುವಂತೆ ನೇಮಕಮಾಡಿ, ತನ್ನ ಕಡೆಯ ಅಧಿಕಾರಿಯೊಬ್ಬನನ್ನು ರಾಜಪ್ರತಿನಿಧಿಯಾಗಿರುವಂತೆ ಗೊತ್ತುಮಾಡಿದನು. ದೆಹಲಿಗೆ ಬಹುದೂರ ದಲ್ಲಿರುವ ಆನೆಗೊಂದಿಯಂಥ ರಾಜ್ಯದಲ್ಲಿ ಅಲ್ಲಿದ್ದ ಅಧಿಕಾರಿಗಳನ್ನೇ ನೇಮಿಸು ವುದರಿಂದ ಪ್ರಜೆಗಳ ಪ್ರೀತಿವಿಶ್ವಾಸಗಳನ್ನು ಗಳಿಸಬಹುದೆಂದು ಅವನು ಯೋಚಿಸಿದನು. ತರುವಾಯ ಬಹಾಉದ್ದೀನನನ್ನು ಕೈಸೆರೆ ಹಿಡಿದು ಕೊಂಡು ದೆಹಲಿಗೆ ಹಿಂತಿರುಗಿದನು.

ವಿಜಯೋತ್ಸಾಹದಿಂದ ಬಾದಷಹನು ದೆಹಲಿಗೆ ಹಿಂತಿರುಗಿದನು. ಹುಕ್ಕಬುಕ್ಕರು ಆನೆಗೊಂದಿಯಲ್ಲಿ ಅಧಿಕಾರಿಗಳಾಗಿ ನಿಂತರು. ವಿದ್ಯಾರಣ್ಯರು ಮುಂದೆ ಸ್ವತಂತ್ರ ಕರ್ಣಾಟಕ ರಾಜ್ಯಸ್ಥಾಪನೆಯ ಕಾಲವನ್ನು ನಿರೀಕ್ಷಿಸು ತ್ತಿದ್ದರು.

---

## ಆರನೆಯ ಅಧ್ಯಾಯ

### ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯ.

ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ ।
ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾತ್ಮಶುದ್ಧಯೇ ॥
—ಗೀತಾ

ಆನೆಗೊಂದಿ ರಾಜ್ಯ ಹಿಂದೂ ರಾಜವಂಶದ ಕೈತಪ್ಪಿ ಮುಸಲ್ಮಾನರ ಅಧಿಕಾರಕ್ಕೆ ಒಳಪಟ್ಟಿತು. ಮಲಿಕನಾಯಬನೆಂಬ ಸರದಾರನು ದೆಹಲಿ ರಾಜನ ಪ್ರತಿನಿಧಿಯಾಗಿ ಆನೆಗೊಂದಿಯಲ್ಲಿ ನಿಂತನು. ಅವನು ಹುಕ್ಕ ಬುಕ್ಕರ ಸಹಾಯದಿಂದ ರಾಜಕಾರ್ಯಗಳನ್ನು ನಡೆಯಿಸುತ್ತಿದ್ದನಾದರೂ ಆನೆಗೊಂದಿ ಎಂದಿದ್ದರೂ ದೆಹಲಿ ರಾಜನ ಕೈಬಿಟ್ಟು ಹೋಗುವುದೆಂದು ತಿಳಿದುಕೊಂಡಿದ್ದನು. ಆನೆಗೊಂದಿ ಯುದ್ಧವಾದಮೇಲೆ ದೇಶದಲ್ಲಿ ಶಾಂತಿ ಸಮಾಧಾನಗಳೇ ಇರಲಿಲ್ಲ. ಅಲ್ಲಲ್ಲಿ ದಂಗೆ ದರೋಡೆಗಳು ನಡೆಯುತ್ತಿದ್ದುವು. ಅವುಗಳನ್ನು ಅಡಗಿಸಿ ರಾಜ್ಯವನ್ನು ತಹಬಂದಿಗೆ ತರುವುದೇನೂ ಸುಲಭಸಾಧ್ಯವಾಗಿರಲಿಲ್ಲ. ಅವನಿಗೆ ಯಾವುದೊಂದು ಸೈನ್ಯಸಹಾಯವೇ ಆಗಲಿ ದೆಹಲಿಯಿಂದ ಶೀಘ್ರವಾಗಿ ಬರುವಂತಿರಲಿಲ್ಲ. ತೊಗಲಕನು ಮಹತ್ವಾಕಾಂಕ್ಷೆಯಿಂದ ತನ್ನ ಸೈನ್ಯವನ್ನು ಭರತಖಂಡದ ಹೊರಗೆ ಕಳುಹಿಸಿ ಅನೇಕ ಕಷ್ಟನಷ್ಟಗಳಿಗೆ ಒಳಗಾಗುತ್ತಿದ್ದನು. ಅಲ್ಲದೆ ಮುಸಲ್ಮಾನ ಸೈನಿಕರು ದೆಹಲಿಯ ವಿಲಾಸ ಜೀವನವನ್ನು ಬಿಟ್ಟು ಬಹುದೂರದ ಆನೆಗೊಂದಿಯಲ್ಲಿ ಹಿಂದುಗಳ ನಡುವೆ ಕಾಲ ಕಳೆಯಲು ಬೇಸರಪಡುತ್ತಿದ್ದರು. ಹೊಸ ಜನರು, ಹೊಸ ಸ್ಥಳ, ಹೊಸ ಸನ್ನಿವೇಶಗಳು ಅವರಿಗೆ ಅಷ್ಟಾಗಿ ಒಗ್ಗಲಿಲ್ಲ. ಆನೆಗೊಂದಿಯ ಸೈನಿಕರು ಚೆಲ್ಲಾಪಿಲ್ಲಿಯಾಗಿ ಹೋಗಿ ತಮತಮಗೆ ಅನುಕೂಲ ಕಂಡ ಸ್ಥಳಗಳಲ್ಲಿ ನೆಲಸಿದ್ದರು. ಇದರಿಂದ ಆನೆಗೊಂದಿಯ ಸೈನ್ಯ ಬಲವನ್ನು ಹೆಚ್ಚಿಸಿ ಸುವ್ಯವಸ್ಥಿತವಾದ ಆಡಳಿತವನ್ನು ರೂಢಿಸುವ ಭಾರ ಹುಕ್ಕನ ಪಾಲಿಗೆ ಬಂತು. ಹೀಗೆ ಸೈನ್ಯ ಶೇಖರಣೆಯನ್ನು ಮಾಡಿ, ಅವರಿಗೆ ಯುದ್ಧ ಶಿಕ್ಷಣವನ್ನು ಕೊಡುವುದರಲ್ಲಿ ಮಲಿಕನಾಯಬನು ಯಾವ ಆಕ್ಷೇಪಣೆಯನ್ನೂ ಮಾಡುತ್ತಿರಲಿಲ್ಲ. ಇದೇ ಸಮಯವೆಂದು, ದೇಶಾಭಿಮಾನದಿಂದ ಅನೇಕ ತರುಣರು ಆನೆಗೊಂದಿಯ ಸೈನ್ಯಕ್ಕೆ ಸೇರಿ ಶಿಕ್ಷಣ ಪಡೆಯುತ್ತಿದ್ದರು.

ವಿದ್ಯಾರಣ್ಯರ ಆಶ್ರಮದಲ್ಲಿ ಹುಕ್ಕಬುಕ್ಕರು ಆಗಾಗ ಸೇರಿ ಆಚಾರ್ಯ ರೊಂದಿಗೆ ಮುಂದಿನ ಕಾರ್ಯ ವಿವರಗಳನ್ನು ಕುರಿತು ಸಮಾಲೋಚನೆ ಮಾಡುತ್ತಿದ್ದರು. ರಾಜನೀತಿಶಾಸ್ತ್ರ ನಿಪುಣರಾದ ವಿದ್ಯಾರಣ್ಯರು ಆಗಿನ ಕಾಲ ದೇಶ ಪರಿಸ್ಥಿತಿಗಳನ್ನು ವಿಮರ್ಶಿಸಿ, ಹುಕ್ಕಬುಕ್ಕರಿಗೆ ತಕ್ಕ ಮಂತ್ರಾಲೋಚನೆ ಯನ್ನು ಹೇಳುತ್ತಿದ್ದರು. "ಯಾವ ಕಾರ್ಯವನ್ನೂ ಮುಂದಾಲೋಚನೆ ಯಿಲ್ಲದೆ ನಡೆಯಿಸಬಾರದು. ಆಪ್ತರೂ, ಸದ್ವಂಶೀಯರೂ, ಸ್ನೇಹಪರರೂ ಜ್ಞಾನವಂತರೂ ಚತುರರೂ ಮತ್ತು ದೇಶಾಭಿಮಾನಿಗಳೂ ಆದ ಜನರನ್ನು ರಾಜಕಾರ್ಯಗಳಲ್ಲಿ ನಿಯೋಜಿಸಬೇಕು. ಒಳ್ಳೆಯ ಮನೆತನದಲ್ಲಿ ಹುಟ್ಟಿ ದ್ದರೂ ದುಷ್ಟರನ್ನು ನಂಬಬಾರದು. ಮಲಯಗಿರಿಯ ಚಂದನದಿಂದ ಹುಟ್ಟಿದ್ದ ಬೆಂಕಿಯಾದರೂ ಸುಟ್ಟೇಸುಡುವುದು. ಬೆಕ್ಕುಗಳ ಗುಂಪಿಗೆ ಹಾಲನ್ನು ಕೊಟ್ಟಂತೆ ಅನರ್ಹರಾದ ಅಧಿಕಾರಿಗಳ ಕೈಗೆ ಆಡಳಿತವನ್ನು ಕೊಟ್ಟು ಸ್ವೇಚ್ಛಾವಿಹಾರಿಯಾಗಿ ವ್ಯೆಮರೆತರೆ ಶುಭವುಂಟಾಗುವುದಿಲ್ಲ. ಯಾವ ಕೆಲಸವನ್ನಾದರೂ ಸ್ವತಃ ಪರಾಂಬರಿಸಿ ನೋಡಬೇಕು. ಎಲ್ಲರನ್ನೂ ಅಂತರಂಗಕ್ಕೆ ತೆಗೆದುಕೊಳ್ಳಬಾರದು. ಆರಿಸಿದ ಆಣಿಮುತ್ತುಗಳಂಥ ಕೆಲವ ರನ್ನು ಮಾತ್ರ ತನ್ನ ಅಂತರಂಗಕ್ಕೆ ಸೇರಿಸಿಕೊಳ್ಳಬೇಕು." ಎಂಬುದಾಗಿ ಒಂದು ದಿನ ವಿದ್ಯಾರಣ್ಯರು ಹುಕ್ಕಬುಕ್ಕರಿಗೆ ಹೇಳಿ, ಅವರು ಜಾಗರೂಕತೆ ಯಿಂದ ಕೆಲಸಮಾಡುತ್ತಿರಬೇಕೆಂದು ತಿಳಿಸಿದರು. ಎಲ್ಲ ಸಮಯಗಳಲ್ಲಿಯೂ ಅವರು ವಿದ್ಯಾರಣ್ಯರ ಮಾತಿನಂತೆ ನಡೆಯುತ್ತಿದ್ದರು.

ಗಿರಿಜಾಂಬೆಯು ಆಶ್ರಮದಲ್ಲಿ ಋಷಿಕುಮಾರಿಯಂತೆ ಕಾಲ ಕಳೆಯು ತ್ತಿದ್ದಳು. ವೈತಿಹೋತ್ರೀದೇವಿಯು ಆಕೆಯನ್ನು ಹೊಟ್ಟೆಯಲ್ಲಿ ಹುಟ್ಟಿದ ಮಗಳೆಂದೇ ಭಾವಿಸಿ ಪ್ರೀತಿಸುತ್ತಿದ್ದಳು. ಕಣ್ವಾಶ್ರಮದಲ್ಲಿ ಬಳೆಯುತ್ತಿದ್ದ ಶಕುಂತಲಾ ದೇವಿಯಂತೆ ಅವಳು ವಿದ್ಯಾರಣ್ಯರ ಆಶ್ರಮದಲ್ಲಿ ನಲಿಯು ತ್ತಿದ್ದಳು. ವನರಾಜ್ಯದ ಶ್ರೀ ಲಕ್ಷ್ಮಿಯಂತೆ ಕಾಣುತ್ತಿದ್ದಳು. ಅವಳ ಮುದ್ದು ಮಾತುಗಳನ್ನು ಕಾಡಿನ ಅರಗಿಣಿಗಳು ಉಲಿಯುತ್ತಿದ್ದುವು. ಅವಳ ಕಲಕಂಠ ಮಾಧುರ್ಯವನ್ನು ವಸಂತಕಾಲದ ಕೋಗಿಲೆಗಳು ಕೇಳಿ ತಾವೂ ಆ ಇಂಚರ ವನ್ನು ನುಡಿಯುತ್ತಿದ್ದುವು. ತಿಳಿಗೊಳದಲ್ಲಿ ಸಂಚರಿಸುತ್ತಿದ್ದ ಅರಸಂಚೆ ಹಿಂಡು ಗಿರಿಜಾಂಬೆಯ ಗಂಭೀರ ಮಂದಗಮನವನ್ನು ಕಲಿಯುತ್ತಿದ್ದುವು.

ಜಿಂಕೆ ತನ್ನ ಚಂಚಲಾಕ್ಷಿಯ ಸೆಳೆ ನೋಟವನ್ನು ಅವಳಿಂದ ಕಲಿಯುತ್ತಿತ್ತು. ಅವಳು ಪ್ರತಿನಿತ್ಯವೂ ವೈತಿಹೋತ್ರೀದೇವಿಯೊಂದಿಗೆ ತುಂಗಭದ್ರಾನದಿಯಲ್ಲಿ ಮಿಂದು ಮಡಿಯುಟ್ಟು ಕೇಶರಾಜಿಯ ನೀರ್ಗಂಟಿನಲ್ಲಿ ಕಾಡು ಹೂಗಳ ಗೊಂಚಲೊಂದನ್ನು ಮುಡಿದು ನೀರು ತುಂಬಿದ ಕೊಡವನ್ನು ಹೊತ್ತುಕೊಂಡು, ಸೆಳೆನಡು ಬಳುಕುತ್ತಿರಲು ಆಶ್ರಮದತ್ತ ಹೋಗುತ್ತಿದ್ದರೆ ಸಾಕ್ಷಾತ್ ತುಂಗಭದ್ರಾದೇವಿಯೇ ಪೂರ್ಣ ಕುಂಭವನ್ನು ಧರಿಸಿ ವಿದ್ಯಾರಣ್ಯರ ಪಾದಪ್ರಕ್ಷಾಳನವನ್ನು ಮಾಡಲು ಆ ಪುಣ್ಯ ತಪೋಭೂಮಿಗೆ ಹೋಗುತ್ತಿರುವಂತೆ ಭಾಸವಾಗುತ್ತಿತ್ತು.

ಕ್ಷತ್ರಿಯ ಕುಮಾರಿಯಾದ ಗಿರಿಜಾಂಬೆಯು ಕೇವಲ ಋಷಿ ಪುತ್ರಿಯರಂತೆ ಆಶ್ರಮ ಜೀವನವನ್ನು ಸಾಗಿಸುತ್ತಿರಲಿಲ್ಲ. ಆಕೆ ಆಗಾಗ ವಿದ್ಯಾರಣ್ಯರ ಆಜ್ಞೆಯನ್ನು ಪಡೆದು ಆಶ್ರಮದ ವಟುಗಳು ಸಮಿತ್ತುಗಳನ್ನು ತರಲು ಕಾಡಿಗೆ ಹೋಗುತ್ತಿದ್ದ ಸಮಯದಲ್ಲಿ ಅವರೊಂದಿಗೆ ಬೇಟೆಗಾಗಿ ಹೋಗುತ್ತಿದ್ದಳು. ಕೈಯ್ಯಲ್ಲಿ ಬಿಲ್ಲುಬಾಣಗಳನ್ನು ಹಿಡಿದು ದಿಟ್ಟತನದಿಂದ ಮುನ್ನುಗ್ಗುತ್ತ ಕಾಡಿನಲ್ಲಿ ಹಂದಿ, ಕೋಣ, ಚಿರತೆಗಳನ್ನು ಗುರಿಯಿಟ್ಟು ಹೊಡೆದು ಸಂಹರಿಸುತ್ತಿದ್ದಳು. ವಟುಗಳು ಆಕೆಯ ಸಾಹಸವನ್ನು ಕಂಡು ಬೆರಗಾಗುತ್ತಿದ್ದರು. ವಿದ್ಯಾರಣ್ಯರು ಅನೇಕ ಸಂದರ್ಭಗಳಲ್ಲಿ ಆಕೆಯ ಕೈಚಳಕವನ್ನು ಕಣ್ಣಾರೆ ಕಂಡು ಮನಸ್ಸಿನಲ್ಲಿಯೇ ಹಿಗ್ಗುತ್ತಿದ್ದರು. "ತಾಯೀ, ಕರ್ನಾಟಕ ವೀರಮಾತೆಯಾಗಿ ಬಾಳು ನೀನು ವೀರಕ್ಷತ್ರಿಯ ಕನ್ಯೆ. ಹುಕ್ಕರಾಯನ ಕೈಹಿಡಿದು ಕನ್ನಡ ನಾಡಿನ ಏಳ್ಗೆಯನ್ನು ಸಾಧಿಸುವ ಮಹಾ ಕಾರ್ಯದಲ್ಲಿ ಕೃತಕೃತ್ಯಳಾಗು. ಭುವನೇಶ್ವರಿಯು ನಿನ್ನನ್ನು ಅನುಗ್ರಹಿಸಲಿ" ಎಂದು ಆಕೆಯನ್ನು ಹರಸುತ್ತಿದ್ದರು. ಆಗಾಗ ಹುಕ್ಕಬುಕ್ಕರು ಆಶ್ರಮಕ್ಕೆ ಬಂದು ಆನೆಗೊಂದಿಯ ಪರಿಸ್ಥಿತಿಯನ್ನೇ ಅಲ್ಲದೆ, ಸುತ್ತಮುತ್ತಣ ಪ್ರಾಂತಗಳಲ್ಲಿ ನಡೆಯುತ್ತಿದ್ದ ಅನೇಕ ಸಂದರ್ಭಗಳನ್ನೂ ವಿದ್ಯಾರಣ್ಯರಿಗೆ ತಿಳಿಸುತ್ತಿದ್ದರು. ಆಕೆ ಎಲ್ಲ ವಿಷಯಗಳನ್ನೂ ಕುತೂಹಲದಿಂದ ಕೇಳಿ ತಿಳಿದುಕೊಳ್ಳುತ್ತಿದ್ದಳು.

ಆನೆಗೊಂದಿ ಮತ್ತು ಕಂಪಿಲ ರಾಜ್ಯಗಳಲ್ಲಿ ಮುಸಲ್ಮಾನ ಸೈನಿಕರು ಆಗಾಗ ಅಲ್ಲಲ್ಲಿ ಜನರನ್ನು ಹಿಂಸಿಸುತ್ತ ನಾನಾ ವಿಧವಾಗಿ ತೊಂದರೆ

ಗಳನ್ನು ಲೂಟಿಮಾಡುತ್ತಿದ್ದರು. ಮಲಿಕನಾಯಬನಿಗೆ ಈ ಸಂಗತಿಗಳು ಗೊತ್ತಾದರೂ ಅವನು ಸರಿಯಾದ ವ್ಯವಸ್ಥೆಯನ್ನು ಮಾಡುತ್ತಿರಲಿಲ್ಲ. ಅಬ್ದುಲ್ ರಹಮಾನಖಾನ ಎಂಬ ಮತ್ತೊಬ್ಬ ಮುಸಲ್ಮಾನ ಅಧಿಕಾರಿಯೇ ಈ ದರೋಡೆಗಳನ್ನು ನಡೆಯಿಸುತ್ತಿದ್ದನು. ಹಿಂದೂಗಳನ್ನು ಅತ್ಯಂತ ನಿರ್ದಯೆಯಿಂದ ಹಿಂಸಿಸುತ್ತ ಅನೇಕ ಕಿರುಕುಳಗಳನ್ನು ಕೊಡುತ್ತಿದ್ದನು. ಅಲ್ಲದೆ, ಹುಕ್ಕಬುಕ್ಕರು ವಿದ್ಯಾರಣ್ಯರೊಂದಿಗೆ ನಡಸುತ್ತಿದ್ದ ಸಂಧಾನಗಳನ್ನೆಲ್ಲ ಅವನು ಎಚ್ಚರಿಕೆಯಿಂದ ನೋಡುತ್ತಿದ್ದನು. ಆ ಇಬ್ಬರು ಎಂದಾದರೊಂದು ದಿನ ಪ್ರಬಲಿಸಿ, ಆನೆಗೊಂದಿಯಿಂದ ಮುಸಲ್ಮಾನರನ್ನು ಓಡಿಸಿಯೇಬಿಡುತ್ತಾರೆಂದು ತಿಳಿದುಕೊಂಡಿದ್ದನು. ವಿದ್ಯಾರಣ್ಯರು ಸಂನ್ಯಾಸಿಯಂತೆ ಕಂಡರೂ ಮುಸಲ್ಮಾನರ ಹಿತಶತ್ರುವೆಂಬುದನ್ನೂ ಅವನು ತಿಳಿದಿದ್ದನು. ಮಲಿಕನಾಯಬನಿಗೆ ಈ ವಿಚಾರಗಳನ್ನು ಸಮಯವರಿತು ಅವನ ಮನಸ್ಸಿಗೆ ಹಿಡಿಯುವಂತೆ ಅವನು ಹೇಳುತ್ತಿದ್ದನು. ಸರದಾರನೂ ಹುಕ್ಕಬುಕ್ಕರ ವಿಷಯದಲ್ಲಿ ಸಂಶಯಪಡುತ್ತಿದ್ದನು. ದಿನದಿನಕ್ಕೆ ಅವನ ಸಂಶಯ ಹೆಚ್ಚುತ್ತಲೇ ಬಂತು. ಮುಸಲ್ಮಾನ ಅಧಿಕಾರಿಗಳು ರಾಜಾದಾಯವನ್ನು ವಸೂಲುಮಾಡುವುದರಲ್ಲಿ ಹಿಂದುಗಳಿಗೆ ಚಿತ್ರಹಿಂಸೆಕೊಡುತ್ತಿದ್ದರು. ಅವರ ಗೋವುಗಳನ್ನು ಹಿಡಿದುಕೊಂಡು ಅವರ ಎದುರಿಗೆ ಅವುಗಳನ್ನು ಕೊಲ್ಲುತ್ತಿದ್ದರು. ಇಂಥ ದುಷ್ಕೃತ್ಯಗಳಿಂದ ಜನರು ರೇಗಿ ಒಳಗೊಳಗೇ ಕುದಿಯುತ್ತಿದ್ದರು. ಜನರು ಬಂದು ದೂರುಹೇಳಿಕೊಂಡರೂ, ನಾಯಬನು ಉದಾಸೀನಭಾವದಿಂದಲೇ ವರ್ತಿಸುತ್ತಿದ್ದನು. ಅವನು ತನ್ನ ಕೈಕೆಳಗಿನ ದುಷ್ಟ ಅಧಿಕಾರಿಗಳನ್ನು ದಂಡಿಸಿ, ಪ್ರಜಾ ನೆಮ್ಮದಿಗೆ ಭಂಗಬಾರದಂತೆ ಜತನದಿಂದ ನಡೆದುಕೊಂಡು ಪ್ರಜೆಗಳ ಪ್ರೀತಿ ವಿಶ್ವಾಸಗಳನ್ನು ಗಳಿಸಿಕೊಳ್ಳುವಷ್ಟು ಚತುರನಾಗಿರಲಿಲ್ಲ. ಹಾಗೆ ಮಾಡುವುದಕ್ಕೆ ಪ್ರತಿಯಾಗಿ ಹಿಂದೂಗಳನ್ನು ದ್ವೇಷಬುದ್ಧಿಯಿಂದ ಕಾಣುತ್ತ, ಇವರಿಗೆಲ್ಲ ಹಿಂಬಲವಾಗಿ ನಿಂತಿರತಕ್ಕವರು ಹುಕ್ಕಬುಕ್ಕರೆಂದೂ, ಅವರಿಗೆ ಮಾರ್ಗದರ್ಶಕರಾಗಿರುವವರು ವಿದ್ಯಾರಣ್ಯರೆಂದೂ ತಿಳಿದು ಮೊಟ್ಟಮೊದಲು ಹುಕ್ಕಬುಕ್ಕರನ್ನೂ ವಿದ್ಯಾರಣ್ಯರನ್ನೂ ದಂಡಿಸಿ ಅವರಿಗೆ ಬುದ್ಧಿ ಕಲಿಸಬೇಕೆಂದು ಬಗೆದನು. ಅವರನ್ನು ದಂಡಿಸಿ ಭಯಪಡಿಸುವುದರಿಂದ ಆನೆಗೊಂದಿ ಮತ್ತು ಕಂಪಿಲರಾಜ್ಯದ ಪ್ರಜೆಗಳು ತನ್ನ ವಶವರ್ತಿಗಳಾಗುವರೆಂದೂ

ಅವನು ತಪ್ಪು ತಿಳಿದುಕೊಂಡನು. ಮಲಿಕನಾಯಬನ ಈ ವಿಚಿತ್ರ ಆಲೋಚನೆಯನ್ನು ಅಬ್ದುಲ್ ರಹಮಾನ್‌ಖಾನನೂ ಅನುಮೋದಿಸಿದನು. ಇನ್ನು ಹೇಳಬೇಕಾದುದೇನು ! ಮಲಿಕನಾಯಬನು ವಿದ್ಯಾರಣ್ಯರಿಗೆ ಒಂದು ಪತ್ರವನ್ನು ಬರೆದು ಬೇಹುಕಾರನ ಸಂಗಡ ಕಳುಹಿಸಿಕೊಟ್ಟನು. "ಶ್ರೀ ವಿದ್ಯಾರಣ್ಯಸ್ವಾಮಿಗಳವರಿಗೆ, ಮಲಿಕನಾಯಬನ ಸಲಾಮುಗಳು. ಆಶ್ರಮದ ಕಡೆಯ ಕ್ಷೇಮಕ್ಕೆ ಪತ್ರ ಬರೆಯಿಸಬೇಕಾಗಿ ವಿನಂತಿ. ನಮ್ಮ ಒಡೆಯರಾದ ಬಾದಷಹ ಮಹಮ್ಮದ್ ತೊಗಲಕರು ಆನೆಗೊಂದಿಯ ಜಂಬುಕೇಶ್ವರ ರಾಯನನ್ನು ಯುದ್ಧದಲ್ಲಿ ಜಯಿಸಿ, ರಾಜ್ಯವನ್ನು ಸ್ವಾಧೀನಪಡಿಸಿಕೊಂಡರಷ್ಟೆ. ಅಂದಿನಿಂದ ನಾನು ರಾಜಪ್ರತಿನಿಧಿಯಾಗಿ ಆನೆಗೊಂದಿಯಲ್ಲಿ ಆಡಳಿತಗಳನ್ನು ನಡೆಯಿಸುತ್ತಿದ್ದೇನೆಂಬುದನ್ನೂ ನೀವು ಬಲ್ಲಿರಿ. ಈಚೆಗೆ ನನಗೆ ಬರುತ್ತಿರುವ ವರ್ತಮಾನಗಳಂತೆ ನೀವು ಹುಕ್ಕಬುಕ್ಕರೆಂಬ ಇಬ್ಬರು ಪುಂಡಗಾರರಿಗೆ ಆಶ್ರಯಕೊಟ್ಟು ಏನೇನೋ ಒಳಸಂಚು ಮಾಡುತ್ತಿರುವಿರಿ. ಆ ಇಬ್ಬರೂ ನಮ್ಮ ರಾಜ್ಯದ ಅಧಿಕಾರಿಗಳೇ ಆಗಿದ್ದು ಇಂಥ ರಾಜದ್ರೋಹ ಕಾರ್ಯದಲ್ಲಿ ನಿರತರಾಗಿರುವುದನ್ನು ತಿಳಿದು ಮನಸ್ಸಿಗೆ ವ್ಯಾಕುಲವಾಗಿದೆ. ಆನೆಗೊಂದಿಯ ಯುದ್ಧವಾದಮೇಲೆ ಬಾದಷಹರು ಮನಸ್ಸುಮಾಡಿದ್ದರೆ ಆ ಇಬ್ಬರನ್ನೂ ಸೆರೆಹಿಡಿದುಕೊಂಡು ದೆಹಲಿಗೆ ಕೊಂಡೊಯ್ಯಬಹುದಾಗಿತ್ತು. ಆದರೆ ಅವರು ದೊಡ್ಡ ಮನಸ್ಸುಮಾಡಿ ನಮ್ಮ ರಾಜ್ಯದಲ್ಲಿಯೇ ಅಧಿಕಾರಿಗಳಾಗಿರುವಂತೆ ಆಜ್ಞೆಮಾಡಿದರು. ಆ ಉಪಕಾರವನ್ನೂ ಮರೆತು ಈಗ ಅವರು ಕೃತಘ್ನರಾಗಿರುವುದನ್ನು ಕಂಡು ನನಗೆ ಆಶ್ಚರ್ಯವಾಗುತ್ತಿದೆ. ಅಂಥ ರಾಜದ್ರೋಹಿಗಳಿಗೆ ಆಶ್ರಯಕೊಟ್ಟು ಅವರಿಗೆ ಸಹಾಯಕರಾಗಿರುವ ನಿಮ್ಮನ್ನು ನಾವು ಏನೆಂದು ಕರೆಯ-ಬೇಕೋ ತಿಳಿಯದು. ಅವರಿಗೆ ತಕ್ಕ ಶಾಸನ್ನ ಮಾಡತಕ್ಕ ಶಕ್ತಿ ನನಗಿದೆಯೆಂಬುದನ್ನು ನೀವು ಅವರಿಗೆ ತಿಳಿಸಿರಿ. ಈ ವಿಚಾರವನ್ನು ಬಾದಷಹರಿಗೂ ಅರಿಕೆ ಮಾಡಿಕೊಂಡಿರುತ್ತೇನೆ. ಇನು ಮುಂದಾದರೂ ಅವರು ಸರಿಯಾದ ರೀತಿಯಲ್ಲಿ ವರ್ತಿಸುವುದಾದರೆ ಬಾದಷಹರು ಅವರನ್ನು ಮನ್ನಿಸಬಲ್ಲರು. ಇಲ್ಲವಾದರೆ ನಿಮಗಾಗಲಿ ಅವರಿಗಾಗಲಿ ಅಥವಾ ನಿಮ್ಮನ್ನು ನಂಬಿರಬಹುದಾದ ಯಾರಿಗೇ ಆಗಲಿ ಸುಖವಿಲ್ಲ. ಇದರಿಂದ ಉಂಟಾಗಬಹುದಾದ ಅನರ್ಥಗಳಿಗೆ ನೀವೇ ಕಾರಣರಾಗಬೇಕಾ

ಗಿದೆ. ನಿಮಗೆ ಹೆಚ್ಚಿಗೆ ಬರೆಯಬೇಕಾದುದೇನೂ ಇಲ್ಲ ನನ್ನ ಪತ್ರದಂತೆ ನೀವು ನಡೆಯದಿದ್ದರೆ ನಾವು ಯುದ್ಧ ಮುಖಾಂತರವಾಗಿ ನಿಮಗೆ ತಕ್ಕ ಬುದ್ಧಿ ಯನ್ನು ಕಲಿಸಬೇಕಾಗುತ್ತದೆ. ಇತಿ ಸಲಾಮುಗಳು'' ಎಂದು ಒಕ್ಕ ಣಿಸಿ ಪತ್ರ ಬರೆದಿದ್ದನು.

ಬೇಹುಕಾರನು ಪತ್ರವನ್ನು ತಂದುಕೊಟ್ಟಾಗ ಆಶ್ರಮದಲ್ಲಿ ವಿದ್ಯಾ ರಣ್ಯರು ಹುಕ್ಕಬುಕ್ಕರೊಂದಿಗೆ ಯಾವುದೋ ರಾಜಕಾರ್ಯದಲ್ಲಿ ತೊಡಗಿ ದ್ದರು. ಗಿರಿಜಾಂಬೆಯೂ ವೈತಿಹೋತ್ರಿಯೂ ಅಲ್ಲಿಯೇ ಇದ್ದರು. ವಿದ್ಯಾ ರಣ್ಯರು ಕಾಗದವನ್ನು ಬಿಚ್ಚಿ ಓದಿಕೊಂಡು ಉದ್ವೇಗ ಪರವಶರಾದರು. ಅವರ ಮನಸ್ಸಿನಲ್ಲಿ ಏಳುತ್ತಿದ್ದ ಆಲೋಚನೆಯ ತರಂಗಗಳು ಅವರ ಮುಖದ ಮೇಲೆ ಮೂಡುತ್ತಿದ್ದುವು. ಹುಕ್ಕಬುಕ್ಕರೂ, ಗಿರಿಜಾಂಬೆಯೂ ಕುತೂ ಹಲವಿಷ್ಟರಾಗಿ ಅವರನ್ನೇ ನೋಡುತ್ತಿದ್ದರು. ವಿದಾರಣ್ಯರು ಆ ಕಾಗದ ವನ್ನು ಮತ್ತೊಮ್ಮೆ ಗಟ್ಟಿಯಾಗಿ ಅವರಿಗೆಲ್ಲ ಓದಿ ಹೇಳಿದರು. ಆ ಪತ್ರದ ಅರ್ಥವನ್ನು ಗ್ರಹಿಸಿದ ರಾಜಪುತ್ರಿ ಉರಿದುಬಿದ್ದಳು. ಮಲಿಕನಾಯಬನ ಉದ್ಧ ಟತನವನ್ನು ಉರಿದು ಮುಕ್ಕಬೇಕೆಂದೂ ಕನ್ನಡ ನಾಡಿನ ಕೀರ್ತಿಯನ್ನು ಉಳಿಸಬೇಕೆಂದೂ ಆಕೆ, ಹುಕ್ಕಬುಕ್ಕರ ಕಡೆಗೆ ನೋಡಿದಳು. ವಿದ್ಯಾರಣ್ಯರು ಆಕೆಯ ಇಂಗಿತವನ್ನು ಅರಿತು—"ಕುಮಾರೀ, ದುಡುಕಬಾರದು. ಈಗ ನಮಗೆ ಒಂದು ಸದವಕಾಶವನ್ನು ನಾಯಬನೇ ಒದಗಿಸಿಕೊಟ್ಟಂತಾಯಿತು. ಕಾರಣವಿಲ್ಲದೆ ನಾವು ಕಾಲು ಕೆರೆದು ಜಗಳಕ್ಕೆ ಹೋಗಬೇಕಾಗಿಲ್ಲ. ತನಗೆ ತಾನೇ ಸಮಯ ಬಂದಿದೆ. ಈಗ ಆನೆಗೊಂದಿ ಮತ್ತು ಕಂಪಿಲರಾಜ್ಯಗಳಲ್ಲಿ ಪ್ರಜೆಗಳು ಹುಕ್ಕಬುಕ್ಕರಿಗೆ ಅನುಕೂಲವಾಗಿಯೇ ಇದ್ದಾರೆ. ಈಗಾಗಲೇ ಹುಕ್ಕರಾಯನ ಕೈಕೆಳಗೆ ಯುದ್ಧ ಶಿಕ್ಷಣವನ್ನು ಪಡೆಯುತ್ತಿರುವ ಯೋಧ ರನ್ನೂ ರಾಜ್ಯದ ಮುಖಂಡರನ್ನೂ ಕರೆಯಿಸಿ ಅವರೆಲ್ಲರ ಅಭಿಪ್ರಾಯವನ್ನು ಕೇಳಿ, ಅವರ ನೆರವನ್ನು ಗಳಿಸೋಣ. ಆ ಒಳಗಾಗಿಯೇ ನಮ್ಮ ಬೇಹು ಕಾರರು ದೆಹಲಿಯ ಕಡೆಯಿಂದ ಸಮಾಚಾರವನ್ನು ತರಬಹುದು. ಅಲ್ಲಿ ಸುಲ್ತಾನನಿಗಿರತಕ್ಕ ರಾಜಕಾರಣಸ್ಥಿತಿಯನ್ನು ತಿಳಿದು ನಾವು ಇಲ್ಲಿ ಆನೆ ಗೊಂದಿಯಮೇಲೆ ಕಾರ್ಯಭಾರ ನಡೆಯಿಸುವುದು ಒಳ್ಳೆಯದು. ಹುಕ್ಕ ಬುಕ್ಕರೆ, ಕಾಲ ಒದಗಿಬಂದಿದೆ. ನೀವು ಈಗ ಧೈರ್ಯದಿಂದ ವರ್ತಿಸಬೇಕು.

ಇನ್ನು ಮೂರು ದಿನಗಳ ಗಡುವಿನಲ್ಲಿ ನೀವು ರಾಜ್ಯದ ಪ್ರಮುಖ ಪ್ರಜೆಗಳನ್ನು ಸಂಧಿಸಿ ಅವರನ್ನು ಆಶ್ರಮಕ್ಕೆ ಬರುವಂತೆ ತಿಳಿಸಿಬನ್ನಿರಿ. ಮುಂದಿನ ಕಾರ್ಯವನ್ನು ಆ ದಿನವೇ ನಿರ್ಧರಿಸೋಣ. ನೀವು ಶಾಂತಚಿತ್ತರಾಗಿಯೇ ಕಾರ್ಯಮಾಡುತ್ತಿರಬೇಕು. ಈ ನನ್ನ ಆಲೋಚನೆಯನ್ನು ಬಹುಶಃ ಶೂರರಾದ ನೀವೂ ಮತ್ತು ರಾಜಪುತ್ರಿಯಾದ ಗಿರಿಜಾಂಬೆಯೂ, ಮಂತ್ರಿಪುತ್ರಿಯಾದ ವೈತಿಹೋತ್ರೀ ದೇವಿಯೂ ಅನುಮೋದಿಸುತ್ತೀರೆಂದು ನಂಬಿದ್ದೇನೆ" ಎಂದು ಹೇಳಿದರು. ಹುಕ್ಕಬುಕ್ಕರೂ ಒಪ್ಪಿದರು. ರಾಜಪುತ್ರಿಯೂ ಅನುಮೋದಿಸಿದಳು. ವೈತ್ರಿಹೋತ್ರಿ ಸಮ್ಮತಿಸಿದಳು.

ಹುಕ್ಕಬುಕ್ಕರು ಬಹು ಚಟುವಟಿಕೆಯಿಂದ ಕೆಲಸ ಮಾಡಲಾರಂಭಿಸಿದರು. ಮೂರುದಿನಗಳೊಳಗಾಗಿಯೇ ಮುಖ್ಯ ಮುಖ್ಯ ಜನರನ್ನು ಕಂಡು ಮಾತನಾಡಿದರು. ಆಶ್ರಮದಲ್ಲಿ ಎಲ್ಲರೂ ರಹಸ್ಯವಾಗಿ ಸಭೆ ನೇರಿದರು. ಆ ವೇಳೆಗೆ ದೆಹಲಿಯ ಕಡೆಯಿಂದ ಗೂಢಚಾರರು ವರ್ತಮಾನವನ್ನೂ ತಂದಿದ್ದರು. ತೊಗಲಕನು ಆಗ ಉತ್ತರದ ಕಡೆ ಶತ್ರುಗಳನ್ನು ಜಯಿಸುವ ಮಹಾ ಪ್ರಯತ್ನದಲ್ಲಿ ನಿರತನಾಗಿದ್ದುದರಿಂದ ಅವನು ದಕ್ಷಿಣದ ಕಡೆಗೆ ಆಗ ಗಮನ ಕೊಡುವಂತಿರಲಿಲ್ಲ. ವಿದ್ಯಾರಣ್ಯರು ಇದೇ ಸಮಯದಲ್ಲಿ ಕಂಪಿಲ ನಗರದ ಕೋಟೆಯನ್ನು ಮುತ್ತಿ ಹಿಡಿಯಬೇಕೆಂದು ನಿರ್ಧರಿಸಿದರು. ಎಲ್ಲರೂ ಅವರ ಸಲಹೆಯನ್ನು ಒಪ್ಪಿದರು.

ಅಂದಿನ ಸಭೆಯಲ್ಲಿ ನಿರ್ಣಯವಾದಂತೆ ಬುಕ್ಕರಾಯನು ಕೋಟೆಯನ್ನು ಸುತ್ತುಗಟ್ಟಿ ಶತ್ರುಗಳನ್ನು ಎದುರಿಸಬೇಕೆಂದೂ ಹುಕ್ಕರಾಯನು ವಿಾಸಲು ಪಡೆಯೊಂದಿಗೆ ಕೋಟೆಯ ಹೊರಭಾಗದಲ್ಲಿ ಕಾವಲಿದ್ದು ಸಮಯವರಿತು ಶತ್ರುಗಳಮೇಲೆ ನುಗ್ಗಬೇಕೆಂದೂ ಗೊತ್ತಾಯಿತು. ವಿದ್ಯಾರಣ್ಯರು ಮಲಿಕನಾಯಬನಿಗೆ ಪ್ರತ್ಯುತ್ತರವನ್ನು ಬರೆದು ಕಳುಹಿಸಿದರು. ಆ ಪತ್ರದ ಸಾರಾಂಶವಿದು: ಆನೆಗೊಂದಿ ರಾಜ್ಯದಲ್ಲಿ ದೆಹಲಿ ಸುಲ್ತಾನರ ಪ್ರತಿನಿಧಿಗಳಾಗಿರುವ ಮಲಿಕನಾಯಬರಿಗೆ, ವಿನಂತಿಗಳು. ತಮ್ಮ ಪತ್ರದಲ್ಲಿ ಸೂಚಿಸಿರುವಂತೆ ಹುಕ್ಕಬುಕ್ಕರು ಪುಂಡುಗಾರರಲ್ಲ; ಅವರು ರಾಜದ್ರೋಹಿಗಳೂ ಅಲ್ಲ. ನಾನು ಸಂನ್ಯಾಸಿ, ಧರ್ಮರಕ್ಷಣೆಯ ದೃಷ್ಟಿಯಿಂದ ನಾನು ಸದಾ ಜನರ ಸಹಕಾರವನ್ನು ಅಪೇಕ್ಷಿಸುತ್ತಿದ್ದೇನೆ. ಆಧ್ಯಾತ್ಮಿಕ ಧರ್ಮ

ದಂತೆಯೇ ರಾಜಧರ್ಮ, ಪ್ರಜಾಧರ್ಮ, ರಾಷ್ಟ್ರಧರ್ಮಗಳ ಅಭಿವೃದ್ಧಿಯೂ ಆಗಬೇಕೆಂದು ನಾನು ಆಶಿಸುತ್ತೇನೆ. ಇದರಲ್ಲಿ ಯಾವ ತಪ್ಪೂ ಇಲ್ಲ. ಕನ್ನಡಿಗರು ಸ್ವಾತಂತ್ರ್ಯಸಾಧನೆಗಾಗಿ ಪ್ರಾಣಾರ್ಪಣೆಮಾಡಲು ಸದಾ ಸಿದ್ಧ ರಾಗಿದ್ದಾರೆ. ಅವರು ಕಷ್ಟನಷ್ಟಗಳಿಗೆ ಹೆದರುವವರಲ್ಲ. ಲೋಕಶಾಂತಿ ಯನ್ನು ಬಯಸುವುದೇ ನನ್ನ ಜೀವನ ತಪಸ್ಸಿನ ಗುರಿ. ಆಶ್ರಮವಾಸಿ ಯಾದ ನನಗೆ ಮಾತೃಭೂಮಿಯ ಪ್ರೇಮವಿರಬಾರದೆ! "ಜನನೀ ಜನ್ಮ ಭೂಮಿಶ್ಚ ಸ್ವರ್ಗಾದಪಿ ಗರೀಯಸೀ" ಎಂಬುದು ಆರ್ಯ ಸಂಸ್ಕೃತಿಯ ಮಹಾ ಮಂತ್ರ. ಇತಿ ವಿನಂತಿಗಳು. ಎಂಬ ಅರ್ಥ ಬರುವಂತೆ ಪತ್ರವನ್ನು ಬರೆದು ಕಳುಹಿಸಿದರು. ನಾಯುಬನು ಅದನ್ನು ಓದಿಸಿ ಅದರ ಅರ್ಥವನ್ನು ಉರ್ದು ಭಾಷೆಯ ಮೂಲಕ ತಿಳಿದುಕೊಂಡನು. ಇದರಿಂದ ವಿದ್ಯಾರಣ್ಯರ ಅಭಿ ಪ್ರಾಯ ಅವನಿಗೆ ಸ್ಪಷ್ಟವಾಗಿ ತಿಳಿಯಿತು. ಒಂದೆರಡು ದಿನಗಳಲ್ಲಿ ಕಂಪಿಲ ನಗರದಲ್ಲಿ ಜನರು ದಂಗೆಯೆದ್ದಿರುವರೆಂದೂ ಬುಕ್ಕನು ಆ ನಗರದ ಕೋಟೆ ಯನ್ನು ಮುತ್ತಿರುವನೆಂದೂ ನಾಯುಬನಿಗೆ ಸುದ್ದಿ ಬಂತು. ಅವನು ಕೂಡಲೆ ತನ್ನ ಕಡೆಯ ಅಧಿಕಾರಿಯಾದ ರಹಮಾನಖಾನನೊಂದಿಗೆ ಸೈನ್ಯವನ್ನು ಕಂಪಿಲ ನಗರಿಗೆ ಕಳುಹಿಸಿದನು. ಬುಕ್ಕನ ಸೈನ್ಯ ಕೋಟೆಯನ್ನು ಸುತ್ತು ಗಟ್ಟಿ ನಿಂತಿತ್ತು. ಕೋಟೆಯ ಒಳಕ್ಕೆ ಯಾರೂ ಹೋಗುವಂತಿರಲಿಲ್ಲ ; ಒಳಗಿ ನಿಂದ ಯಾರೂ ಈಚೆಗೆ ಬರುವಂತಿರಲಿಲ್ಲ. ಅಲ್ಲದೆ ಜನಗಳು ದಂಗೆಯೆದ್ದು ನಗರದಲ್ಲಿದ್ದ ಶತ್ರುಪಕ್ಷದ ಜನಗಳನ್ನು ಸಿಕ್ಕಿದ ಕಡೆ ಹಿಡಿದು ದಂಡಿಸುತ್ತಿದ್ದರು. ಖಾನನ ದಂಡು ಬಂದು ಬುಕ್ಕನ ಸೈನ್ಯದಮೇಲೆ ಬಿತ್ತು. ಕೈಕೈ ಸೇರಿ ಕಾಳಗ ನಡೆಯಿತು. ಅದೇ ಸಮಯದಲ್ಲಿ ಹುಕ್ಕನು ಬಂದು ಶತ್ರುಗಳ ಮೇಲೆ ಬಿದ್ದನು. ಹಗೆಗಳು ಎರಡು ಸೈನ್ಯಗಳ ನಡುವೆ ಸಿಕ್ಕಿಬಿದ್ದು ಕಂಗೆಟ್ಟರು. ಅನೇಕರು ಕೈಸೆರೆಯಾದರು. ಹಲವರು ತಪ್ಪಿಸಿಕೊಂಡು ಓಡಿಹೋದರು. ಖಾನನು ಸೆರೆ ಸಿಕ್ಕಿದನು. ಕಂಪಿಲ ನಗರದ ಕೋಟೆಯಮೇಲೆ ಜಯಧ್ವಜ ಗಳನ್ನು ಹಾರಿಸಿದರು. ಈ ವರ್ತಮಾನ ಆನೆಗೊಂದಿಗೂ ತಲುಪಿತು. ನಾಯುಬನು ಮುಂದುಗಾಣದೆ ಧೈರ್ಯಗುಂದಿ ಕುಳಿತುಬಿಟ್ಟನು. ಈ ವಿಜಯ ವಾರ್ತೆಯನ್ನು ಕೇಳಿದ ಆನೆಗೊಂದಿಯ ಜನರು ಇದೇ ಸಮಯ ವೆಂದು ನಾಯುಬನಮೇಲೆ ತಿರುಗಿಬಿದ್ದರು. ಈ ಒಳದಂಗೆಯನ್ನು ಅಡಗಿ

ಸಲು ಅವನಿಗೆ ಸಾಕಾದಷ್ಟು ಸೈನ್ಯಬಲವಾಗಲಿ ಅಥವಾ ಮನಸ್ಥೈರ್ಯ ವಾಗಲಿ ಇರಲಿಲ್ಲ. ಅಷ್ಟು ಹೊತ್ತಿಗೆ ಹುಕ್ಕನೂ ಆನೆಗೊಂದಿಯಮೇಲೆ ದಂಡೆತ್ತಿ ಬಂದನು. ಆಗ ರಾಜಪುತ್ರಿ ಗಿರಿಜಾಂಬೆಯು ವೀರರುಡುಗೆ ಯನ್ನು ತೊಟ್ಟು ಕುದುರೆಯ ಮೇಲೆ ಕುಳಿತು ಶಸ್ತ್ರಧಾರಿಣಿಯಾಗಿ ಸೈನ್ಯ ಮಧ್ಯದಲ್ಲಿ ಬರುತ್ತಿದ್ದಳು. ಸೈನ್ಯ ಆನೆಗೊಂದಿಯನ್ನು ಮುತ್ತಿತು. ಆಕೆಯ ಸುತ್ತಲು ಬಲಿಷ್ಠರಾದ ವ್ಯೆಗಾವಲಿನ ಸೈನಿಕರು ಶಸ್ತ್ರಸಜ್ಜಿತರಾಗಿದ್ದರು. ಬೀದಿ ಬೀದಿಗಳಲ್ಲಿಯೂ ಜನರು ಕಿಕ್ಕಿರಿದು ಶತ್ರುಗಳಮೇಲೆ ಸೇಡು ತೀರಿಸಿಕೊಳ್ಳಲು ಸಜ್ಜಾಗುತ್ತಿದ್ದರು. . ಅವರೆಲ್ಲ ಅರಮನೆಯ ಕಡೆಗೆ ಓಡುತ್ತ ಬಂದು ನಾಯ ಬನನ್ನು ಕೊನೆಗಾಣಿಸಬೇಕೆಂದು ಕೂಗುತ್ತಿದ್ದರು. ಅಷ್ಟು ಹೊತ್ತಿಗೆ ಗಿರಿಜಾದೇವಿಯೂ ಅರಮನೆಯ ಕಡೆಗೆ ಕುದುರೆಯನ್ನು ಓಡಿಸುತ್ತ ಬಂದಳು. ಆಕೆ ರಾಜಪುತ್ರಿ ಎಂಬುದು ಯಾರಿಗೂ ತಿಳಿಯದು. ಅವಳು ಅಲ್ಲಿ ನೆರೆದಿದ್ದ ಜನರನ್ನು ಉದ್ದೇಶಿಸಿ – "ಆನೆಗೊಂದಿಯ ರಾಜನಿಷ್ಠ ಪ್ರಜೆಗಳೇ, ಸೈನಿಕರೆ, ನಾನು ಇಂದು ನಿಮ್ಮ ಮಧ್ಯದಲ್ಲಿ ನಿಂತಿದ್ದೇನೆ. ನಾನು ನಿಮ್ಮ ಪ್ರಭು ಜಂಬುಕೇಶ್ವರರಾಯನ ಮಗಳು ! ನಾನು ಈಗ ಪುರುಷವೇಷದಲ್ಲಿ ಬಂದಿರುವು ದಾದರೂ ನಮ್ಮ ರಾಜ್ಯದ ಗೌರವವನ್ನು ಉಳಿಸಬೇಕೆಂದು. ನನಗೆ ಮರಣ ಭಯವಿಲ್ಲ. ನಮ್ಮ ಸ್ವಾತಂತ್ರ್ಯ ಹೋಗಿರುವಾಗ ನಾವು ಬದುಕಿದ್ದು ಪ್ರಯೋ ಜನವೇನು ? ನೀವೆಲ್ಲರೂ ಆನೆಗೊಂದಿಯ ಕೀರ್ತಿಯನ್ನು ಉಳಿಸಲು ಅವ ಕಾಶ ಒದಗಿದರೆ ಪ್ರಾಣವನ್ನೊಪ್ಪಿಸಲು ಸಿದ್ಧರಾಗಿರಿ. ಕನ್ನಡಿಗರು ಕಲಿಗಳ ಲ್ಲವೆ ? ವೀರಸಂತಾನವಲ್ಲವೆ ? ಇಲ್ಲಿಗೆ ಒಂದು ವರ್ಷದ ಹಿಂದೆ ನಮ್ಮ ನಗರದ ಹೆಂಗಳೆಯರು ಅಗ್ನಿಪ್ರವೇಶಮಾಡಲಿಲ್ಲವೆ ? ಆ ಅಗ್ನಿಜ್ವಾಲೆ ಇಂದು ನಿಮ್ಮ ಹೃದಯಗಳನ್ನು ದಹಿಸುತ್ತಿಲ್ಲವೆ ? ನಿಮ್ಮ ಪ್ರಭು ಜಂಬುಕೇಶ್ವರ ರಾಯನು ಇದ್ದ ಅರಮನೆಯಲ್ಲಿ ಪರಕೀಯರು ಇರುವುದನ್ನು ನೋಡಿ ನೀವು ಸಹಿಸುತ್ತಿರುವಿರಾ ! ನಾನು ಈ ಯುದ್ಧದಲ್ಲಿ ಸತ್ತರೂ ಚಿಂತೆಯಿಲ್ಲ. ನೀವು ಮಾತ್ರ ಸ್ವಾತಂತ್ರ್ಯವನ್ನು ಗಳಿಸುವವರೆಗೂ ಹಿಂದೆಗೆಯಬಾರದು. ನಾನು ಸತ್ತರೆ, ಇಗೋ ನೋಡಿ, ಈತನೇ ಹುಕ್ಕರಾಯ ! ಮುಂದೆ ನೀವು ಆತ ನನ್ನು ಪ್ರಭುವೆಂದು ಅಂಗೀಕರಿಸಿ ಯುದ್ಧಮಾಡಬೇಕು. ಆಚಾರ್ಯ ವಿದ್ಯಾ ರಣ್ಯರ ನಾಮಸಂಕೀರ್ತನಮಾಡುತ್ತ ಶತ್ರುಗಳಮೇಲೆ ಬಿದ್ದು ಅವರನ್ನು ಪುಡಿ

ಪುಡಿ ಮಾಡಬೇಕು. ಕನ್ನಡ ವೀರರೇ, ಸಾಗಿ ಬನ್ನಿ" ಎಂದು ವೀರಾವೇಶ ದಿಂದ ಹೇಳಿದ ಮಾತುಗಳನ್ನು ಕೇಳಿ ಜನರೆಲ್ಲ ಬೆಕ್ಕಸಬೆರಗಾದರು. ಗಿರಿಜಾ ದೇವಿಯ ಸಾಹಸವನ್ನು ಹೊಗಳುತ್ತ–ವಿದ್ಯಾರಣ್ಯರಿಗೆ ಜಯವಾಗಲಿ, ಕನ್ನಡ ನಾಡಿಗೆ ಜಯವಾಗಲಿ, ಗಿರಿಜಾಂಬೆಗೆ ಜಯವಾಗಲಿ, ಹುಕ್ಕರಾಯರಿಗೆ ಜಯವಾಗಲಿ, ಆನೆಗೊಂದಿ ರಾಜ್ಯಕ್ಕೆ ಜಯವಾಗಲಿ – ಎಂದು ಜಯಧ್ವನಿ ಮಾಡುತ್ತ ಶತ್ರು ಪಾಳೆಯದ ಕಡೆಗೆ ನುಗ್ಗಿದರು. ಅರಮನೆಯ ಉಪ್ಪರಿಗೆ ಯಿಂದ ಇದನ್ನೆಲ್ಲ ನೋಡುತ್ತ ನಿಂತಿದ್ದ ಮಲಿಕನಾಯಬನು ತತ್ತರಿಸಿದನು. ಆನೆಗೊಂದಿಯ ಸೈನ್ಯ ಅರಮನೆಯನ್ನೂ ಮುತ್ತಿತು. ಮುಸಲ್ಮಾನರು ಕನ್ನ ಡಿಗರ ಏಟಿಗೆ ನಿಲ್ಲಲಾರದೆ ಕಾಲ್ಕಿಗೆಯುತ್ತಿದ್ದರು. ಹುಕ್ಕನ ಏಟೂ ಬಲವಾ ಯಿತು. ಗಿರಿಜಾದೇವಿಯಂತೂ ಪ್ರಳಯ ಭೈರವಿಯಂತೆ ಕಾದುತ್ತಿದ್ದಳು. ಮಲಿಕನಾಯಬನು ಪರಾಕ್ರಮದಿಂದ ಯುದ್ಧ ಮಾಡುತ್ತ ಮಡಿದುಬಿದ್ದನು. ಶತ್ರು ಸೈನ್ಯ ದಿಕ್ಕುಗೆಟ್ಟು ಓಡಲಾರಂಭಿಸಿತು. ರಾಜಧಾನಿಯ ಸುತ್ತಲೂ ಹೆಣಗಳ ಬಣವೆ, ರಕ್ತದ ಕಾಲುವೆ ಮತ್ತು ಭೀಕರ ದೃಶ್ಯ–ಇವು ಕಾಣುತ್ತಿ ದ್ದುವು. ಸಂಜೆಯಾಗುವುದರೊಳಗಾಗಿಯೇ ಆನೆಗೊಂದಿ ಸ್ವತಂತ್ರವಾ ಯಿತು.

ಮರುದಿನ ಗಿರಿಜಾದೇವಿಯ ವಿವಾಹ. ಆನೆಗೊಂದಿಯ ಅರಮನೆಯ ಮೇಲೆ ವಿಜಯಪತಾಕೆ ಹಾರಾಡುತ್ತಿತ್ತು. ವಿದ್ಯಾರಣ್ಯರು ಅರಮನೆಯ ಕಡೆಗೆ ಬರುತ್ತಿದ್ದರು. ಮಂಗಳವಾದ್ಯಗಳು ಮೊಳಗುತ್ತಿದ್ದುವು. ಆ ದಿನ ಎಲ್ಲ ದೇವಾಲಯಗಳಲ್ಲಿಯೂ ವಿಶೇಷ ಪೂಜೋತ್ಸವಗಳು ನಡೆಯಲು ಏರ್ಪಾ ಟಾಗಿತ್ತು. ನಗರ ಲಕ್ಷ್ಮಿಯು ಶೃಂಗಾರವಾಗಿ ಕಾಣುತ್ತಿದ್ದಳು. ಸೈನಿಕರು ಹೊಸ ಉಡುಪುಗಳನ್ನು ಧರಿಸಿ ಮೈದಾನದಲ್ಲಿ ಸಾಲುಸಾಲಾಗಿ ನಿಂತಿದ್ದರು. ಪಟ್ಟದಾನೆಯನ್ನು ಮತ್ತು ಪಟ್ಟದ ಕುದುರೆಯನ್ನು ಅಲಂಕರಿಸಿದ್ದರು. ಆಸ್ಥಾನಮಂಟಪದಲ್ಲಿ ಅಧಿಕಾರಿಗಳೂ, ಪ್ರಮುಖರೂ, ಪಂಡಿತರೂ ಅನು ಪಂತು ಕುಳಿತಿದ್ದರು. ವಿದ್ಯಾರಣ್ಯರು ಅರಮನೆಯ ಬಾಗಲಿಗೆ ಬಂದಾಗ ಹುಕ್ಕಬುಕ್ಕರು ಅವರನ್ನು ಎದುರುಗೊಂಡು ಮರ್ಯಾದೆಯಿಂದ ಒಳಗೆ ಕರೆದುಕೊಂಡುಹೋಗಿ ವ್ಯಾಘ್ರಾಸನದಲ್ಲಿ ಕುಳ್ಳಿರಿಸಿದರು. ಪುರೋಹಿತರು ಮಂತ್ರಗಳನ್ನು ಉಚ್ಚರಿಸುತ್ತ ಮದುವೆಯ ಕಾರ್ಯಗಳನ್ನು ಯಥಾಕ್ರಮ

ವಾಗಿ ನಡಸುತ್ತಿದ್ದರು. ಲಗ್ನದ ಸಮಯ ಬಂತು. ಮುತ್ತೈದೆಯರು ಗಿರಿಜಾ ದೇವಿಯನ್ನು ಮದುವೆಯ ಮಂಟಪಕ್ಕೆ ಕರೆತಂದರು. ಹುಕ್ಕನು ಮದುವ ಣಿಗನಾಗಿ ತಮ್ಮನ ಜೊತೆಯಲ್ಲಿ ನಿಂತಿದ್ದನು. ಹುಕ್ಕ–ಗಿರಿಜಾದೇವಿಯರ ಪಾಣಿಗ್ರಹಣ ಮಹೋತ್ಸವ ಧಾರಾಪೂರ್ವಕವಾಗಿ ನಡೆಯಿತು. ಆನೆಗೊಂ ದಿಯ ಪ್ರಜೆಗಳು ತಮ್ಮ ರಾಜಪುತ್ರಿಯನ್ನು ಕಣ್ಣಾರೆ ಕಂಡು ಹರ್ಷಿಸಿದರು. ಆದಿನ ರಾತ್ರಿ ಆನೆಯಮೇಲೆ ಅಂಬಾರಿಯಲ್ಲಿ ನೂತನ ರಾಜದಂಪತಿಗಳ ಮೆರ ವಣಿಗೆಯು ವೈಭವದಿಂದ ನಡೆಯಿತು.

ಆನೆಗೊಂದಿ ಮತ್ತು ಕಂಪಿಲರಾಜ್ಯಗಳು ಮುಸಲ್ಮಾನರ ಕೈತಪ್ಪಿ ಪುನಃ ಹಿಂದೂರಾಜರ ಆಡಳಿತಕ್ಕೆ ಒಳಪಟ್ಟುವು. ಗಿರಿಜಾದೇವಿಯನ್ನು ಪ್ರಜೆಗಳು ಮಹಾರಾಣಿಯೆಂದು ಗೌರವಿಸಿ ಆಕೆಯ ಆಜ್ಞಾನುವರ್ತಿಗಳಾಗಿಯೇ ವರ್ತಿ ಸುತ್ತಿದ್ದರು. ಹುಕ್ಕಬುಕ್ಕರು ರಾಜ್ಯಾಡಳಿತಗಳನ್ನು ನಡೆಯಿಸುತ್ತ ರಾಷ್ಟ್ರ ಶಕ್ತಿಯನ್ನು ಸಾಧಿಸುತ್ತಿದ್ದರು.

ವಿದ್ಯಾರಣ್ಯರು ಇಷ್ಟರಿಂದಲೇ ತೃಪ್ತರಾಗಿರಲಿಲ್ಲ. ಆನೆಗೊಂದಿಯನ್ನು ರಾಜಧಾನಿಯಾಗಿ ಮಾಡಿಕೊಂಡಿರುವುದು ಸೂಕ್ತವೆಂದು ಕಾಣಲಿಲ್ಲ. ಅದು ಸುರಕ್ಷಿತವಾದ ಸ್ಥಳವಾಗಿರಲಿಲ್ಲ. ದಿನ ದಿನಕ್ಕೆ ಮುಸಲ್ಮಾನರ ಶಕ್ತಿಯೂ ದಕ್ಷಿಣದಲ್ಲಿ ಬೆಳೆಯುತ್ತಿತ್ತು. ಇದರಿಂದ ಹೊಸ ಕನ್ನಡ ರಾಜ್ಯವನ್ನು ಸುಭದ್ರ ವಾಗಿ ನೆಲೆಗೊಳಿಸಬೇಕಾದರೆ ಕೋಟೆ ಕೊತ್ತಲುಗಳಿಂದ ಕೂಡಿದ ಅಭೇದ್ಯ ವಾದ ಸ್ಥಳದಲ್ಲಿ ರಾಜಧಾನಿಯನ್ನು ಸ್ಥಾಪಿಸಬೇಕೆಂದು ಆಲೋಚಿಸಿದರು. ಕಂಪಿಲನಗರದ ಮಣ್ಣಿನಕೋಟೆ ಶಿಥಿಲವಾಗಿತ್ತು. ಅದನ್ನು ಪುನಃ ಭದ್ರಪಡಿ ಸುವುದಾಗಲಿ ಅಥವಾ ಕಂಪಿಲನಗರವನ್ನು ರಾಜಧಾನಿಯನ್ನಾಗಿ ಮಾಡಿ ಕೊಳ್ಳುವುದಾಗಲಿ ರಾಜ್ಯತಂತ್ರಜ್ಞರಾದ ವಿದ್ಯಾರಣ್ಯರಿಗೆ ಸರಿದೋರಲಿಲ್ಲ. ವಿಶಾಲವಾದ ಸಾಮ್ರಾಜ್ಯವನ್ನು ಸ್ಥಾಪಿಸುವ ಉದ್ದೇಶವಿದ್ದುದರಿಂದ ಅಂಥ ಸಾಮ್ರಾಜ್ಯಕ್ಕೆ ಅನುಗುಣವಾದ ರಾಜಧಾನಿ ಇರಬೇಕೆಂದು ಅವರು ನಿಶ್ಚ ಯಿಸಿದರು. ಯಾವ ದೃಷ್ಟಿಯಿಂದ ನೋಡಿದರೂ ಆನೆಗೊಂದಿಯಾಗಲಿ, ಕಂಪಿಲ ನಗರವಾಗಲಿ ಮಹಾ ಸಾಮ್ರಾಜ್ಯದ ರಾಜಧಾನಿಯೆನಿಸಿಕೊಳ್ಳಲು ಅರ್ಹವಾದ ಸ್ಥಳಗಳಾಗಿರಲಿಲ್ಲ.

ಹುಕ್ಕ ಬುಕ್ಕರು ವಿದ್ಯಾರಣ್ಯರ ದರ್ಶನಮಾಡುತ್ತ ಆಗಾಗ ಭಾವೀ ರಾಜ್ಯಾಂಗ ರಚನೆಯನ್ನು ಆಲೋಚಿಸುತ್ತಿದ್ದರು. ಎಂದಿನಂತೆಯೇ ಒಂದು ದಿನ ಹುಕ್ಕ ಬುಕ್ಕರು ಆಶ್ರಮಕ್ಕೆ ಬಂದು ವಿದ್ಯಾರಣ್ಯರನ್ನು ಕಂಡು ಅಭಿವಂದಿಸಿದರು.

ವಿದ್ಯಾರಣ್ಯರು :—ಹುಕ್ಕರಾಯ, ಮಹಾದೇವಿಯ ದಯೆಯಿಂದ ನಮ್ಮ ಕಾರ್ಯಸಿದ್ಧಿಯಾಗುವ ಶುಭ ಸೂಚನೆಗಳು ಕಾಣುತ್ತಿವೆ. ಪ್ರಜೆಗಳ ನೆಮ್ಮದಿಗೆ ಭಂಗ ಬರದಂತೆ ನೋಡಿಕೊಳ್ಳಬೇಕು. ತರುಣರನ್ನು ಹೆಚ್ಚು ಹೆಚ್ಚು ಸೈನಿಕರನ್ನಾಗಿ ಸೇರಿಸಿಕೊಂಡು ಅವರಿಗೆ ಯುದ್ಧ ಶಿಕ್ಷಣ ಕೊಡಬೇಕು. ಕನ್ನಡ ನಾಡು ಗಂಡುಭೂಮಿಯೆಂಬುದನ್ನು ಯಾರೂ ಮರೆಯಬಾರದು.

ಹುಕ್ಕ :—ಸ್ವಾಮಿ, ನಿನ್ನೆಯದಿನ ನಾನೂ ಬುಕ್ಕಣ್ಣನೂ ತುಂಗಭದ್ರಾನದಿಯ ತೀರದಲ್ಲಿ ಬೇಟೆಯಾಡುತ್ತಿದ್ದೆವು. ಆ ಸಮಯದಲ್ಲಿ ಆಶ್ಚರ್ಯಕರವಾದ ಸಂಗತಿ ನಡೆಯಿತು. ಒಂದು ಮೊಲ ನಮ್ಮ ಬೇಟೆನಾಯಿಯ ಮೇಲೆ ತಿರುಗಿ ಬಿತ್ತು. .

ಬುಕ್ಕ :—ನಾನಂತೂ ಚಕ್ಕಸಬೆರಗಾದೆನು.

ವಿದ್ಯಾರಣ್ಯರು :—ಅದು ಗಂಡುಭೂಮಿ ಎಂಬುದರಲ್ಲಿ ಸಂಶಯವಿಲ್ಲ. ನಾವು ಹೊಸರಾಜಧಾನಿಯನ್ನು ಅಲ್ಲಿಯೇ ನಿರ್ಮಿಸೋಣ.

ಹುಕ್ಕ :—ಅದೇ ಸ್ಥಳದಲ್ಲಿ ಹಿಂದೆ ಯಾವುದೋ ಕೋಟೆಯಿದ್ದು ಈಗ ಹಾಳು ಬಿದ್ದಿರುವಂತೆ ಕಾಣುತ್ತಿದೆ.

ವಿದ್ಯಾರಣ್ಯರು :—ಹುಕ್ಕರಾಯ, ಬಹಳ ಹಿಂದೆಯೇ ವಿಜಯಧ್ವಜನೆಂಬುವನು ಅಲ್ಲಿ ಕೋಟೆಯನ್ನು ಕಟ್ಟಿಸಿ ಕೇವಲ ಯುದ್ಧ ಪ್ರಸಕ್ತಿ ಬಂದಾಗ ಅದನ್ನು ಉಪಯೋಗಿಸಿಕೊಳ್ಳುತ್ತಿದ್ದನು. ಅವನು ಹಿಂದೆ ಆನೆಗೊಂದಿಯ ರಾಜನಾಗಿದ್ದನೆಂದು ಇತಿಹಾಸದಿಂದ ತಿಳಿಯುತ್ತದೆ.

ಹುಕ್ಕ :—ಅದೇ ಪ್ರಶಸ್ತವಾದ ಸ್ಥಳವಾಗಿ ಕಾಣುವದಿಲ್ಲವೆ ?

ವಿದ್ಯಾರಣ್ಯರು :—ಅಷ್ಟೇ ಅಲ್ಲ. ಹಿಂದೆ ನಾನು ನಿಮ್ಮನ್ನು ಕಾಡಿನಲ್ಲಿ ಕಂಡ ದಿನ ನಡೆದ ಆಶ್ಚರ್ಯಕರ ಘಟನೆಯನ್ನು ನಿಮಗೆ ಇದುವರೆಗೂ ತಿಳಿಸಿರಲಿಲ್ಲ.

ಹುಕ್ಕ :—ಏನು ನಡೆಯಿತು ?

ವಿದ್ಯಾರಣ್ಯರು :—ನೀವು ಮಾರ್ಗಾಯಾಸದಿಂದ ಮರದಕೆಳಗೆ ಮಲಗಿ ನಿದ್ರಿಸುತ್ತಿದ್ದಾಗ, ಕೃಷ್ಣಸರ್ಪವೊಂದು ತನ್ನ ಹೆಡೆಯನ್ನು ಎತ್ತಿ ನಿನ್ನ ಮುಖದಮೇಲೆ ಬಿಸಿಲು ಬೀಳದಹಾಗೆ ಆಡಿಸುತ್ತಿತ್ತು. ಅದು ಎಷ್ಟು ಹೊತ್ತಿನಿಂದ ಹಾಗೆ ಹೆಡೆಯಾಡಿಸುತ್ತಿತ್ತೋ ಏನೋ! ನಾನು ಬಂದಾಗ ಅದು ನನ್ನನ್ನು ಕಂಡು ಕಾಡಿನ ಮಧ್ಯದಲ್ಲಿ ಸರಸರನೆ ಹರಿದುಹೋಯಿತು. ಸದಾಶಿವ ಮತ್ತು ಚಂದ್ರಶೇಖರ ಇಬ್ಬರೂ ಕಂಡು ಆಶ್ಚರ್ಯಪಟ್ಟರು. ಆಗ ನಾನು ನಿಮ್ಮನ್ನು ಎಚ್ಚರಗೊಳಿಸಿ ಆಶ್ರಮಕ್ಕೆ ಕರೆದುಕೊಂಡುಹೋದೆನು. ನೀವು ಅದೃಷ್ಟಶಾಲಿಗಳೆಂದೂ ನಿಮ್ಮಿಂದ ಕನ್ನಡ ರಾಜ್ಯವನ್ನು. ಉದ್ಧಾರ ಮಾಡಿಸಬಹುದೆಂದೂ ನಾನು ಮನಗಂಡೆನು.

ಹುಕ್ಕ :—ಗುರುದೇವ, ಧನ್ಯರಾದೆವು.

ವಿದ್ಯಾರಣ್ಯರು :—ರಾಜಪುತ್ರರಾದ ನಿಮ್ಮನ್ನು ದೇವಿಯು ತಾನಾಗಿಯೇ ನನಗೆ ತೋರಿಸಿ ಅನುಗ್ರಹಮಾಡಿರುವಳು. ಮುಂದೆ ನಾವು ನಿರ್ಮಿಸಬೇಕಾಗಿರುವ ಕನ್ನಡ ರಾಜ್ಯಕ್ಕೆ ರಾಜಧಾನಿಯನ್ನು ಎಲ್ಲಿ ಕಟ್ಟಬೇಕೆಂಬ ಯೋಚನೆಯಲ್ಲಿಯೇ ನಾನು ಸದಾ ಚಿಂತಿಸುತ್ತಿದ್ದೆನು. ನನ್ನ ಆಲೋಚನೆ ಶ್ರೀದೇವಿಗೆ ಅರಿಕೆ ಆಯಿತೋ ಎಂಬಂತೆ ನಿನ್ನೆಯ ರಾತ್ರಿ ನನಗೆ ಸ್ವಪ್ನದಲ್ಲಿ ದರ್ಶನ ಕೊಟ್ಟು "ಹಿಂದೆ ಹುಕ್ಕ ಬುಕ್ಕರು ಕಾಡಿನಲ್ಲಿ ಮಲಗಿದ್ದಾಗ ಸರ್ಪ ಹೆಡೆಯಾಡಿಸುತ್ತಿದ್ದ ಸ್ಥಳದಲ್ಲಿ ಧರ್ಮರಾಯನ ಸಿಂಹಾಸನ ಭೂಸ್ಥಾಯಿಯಾಗಿದೆ. ಅದನ್ನು ತೆಗೆಯಿಸಿ ಕನ್ನಡರಾಜ್ಯ ಪ್ರಭುವಾಗಲಿರುವ ಹುಕ್ಕನನ್ನು ಅದರಮೇಲೆ ಕೂರಿಸಿ ಪಟ್ಟಗಟ್ಟಬೇಕು. ಅದೇ ಸ್ಥಳದಲ್ಲಿ ಹೇರಳವಾದ ನಿಧಿಯು ದೊರಕುವುದು. ಅದರ ಸಹಾಯದಿಂದ ಹೊಸ ನಗರವನ್ನು ಸ್ಥಾಪಿಸಿ, ರಾಜ್ಯ ಕಟ್ಟಬೇಕು" ಎಂದು ಮಹಾದೇವಿಯು ತಿಳಿಸಿದಂತೆ ಭಾಸವಾಯಿತು

ಹುಕ್ಕ :—ಅಷ್ಟೊಂದು ನಿಧಿ ದೊರಕುವುದರಿಂದ ದೇವಿಯು ಸುವರ್ಣ ವೃಷ್ಟಿಯನ್ನು ಸುರಿಸಿ ಅನುಗ್ರಹಿಸಿದಂತೆಯೇ ಆಯಿತು.

ಬುಕ್ಕ :—ಗುರುದೇವ, ಧರ್ಮರಾಯನ ಸಿಂಹಾಸನ ಅಲ್ಲಿ ಭೂಸ್ಥಾಯಿಯಾಗಿರಲು ಕಾರಣವೇನು ?

ವಿದ್ಯಾರಣ್ಯರು :—ನಮ್ಮ ಗುರು ವಿದ್ಯಾತೀರ್ಥರು ಆ ವಿಷಯವನ್ನು

ನನಗೆ ತಿಳಿಸಿದ್ದರು. ಅದನ್ನೇ ನಾನು ನಿಮಗೆ ಹೇಳುತ್ತೇನೆ. ಇದು ಧರ್ಮ ಸಿಂಹಾಸನ. ಅನೇಕ ಧರ್ಮ ಹೃದಯ ರಾಜರು ಅದರಮೇಲೆ ಮಂಡಿಸಿ ರಾಜ್ಯಭಾರ ಮಾಡಿದ್ದಾರೆ. ಅದು ಕಾಲಕ್ರಮದಲ್ಲಿ ಬೇರೆ ಬೇರೆ ರಾಜವಂಶ ಗಳ ಅರಸರ ಕೈಸೇರಿ, ಕೊನೆಗೆ ಕಂಪಿಲರಾಜ್ಯದ ಪ್ರಭುಗಳಿಗೆ ಬಂತು.

ಹುಕ್ಕ :—ಯಾವಯಾವ ಮಹಾಪುರುಷರು ಆ ಸಿಂಹಾಸನದಮೇಲೆ ಕುಳಿತು ರಾಜ್ಯಲಕ್ಷ್ಮಿಯಿಂದ ಓಲೈಸಿಕೊಂಡರೆಂಬುದನ್ನು ತಿಳಿಯಲು ಕುತೂಹಲಿಯಾಗಿದ್ದೇನೆ.

ವಿದ್ಯಾರಣ್ಯರು :—ಮೊಟ್ಟಮೊದಲು ಪಾಂಡುಪುತ್ರನಾದ ಧರ್ಮರಾಯನು ಈ ಸಿಂಹಾಸನದಮೇಲೆ ಮಂಡಿಸುತ್ತಿದ್ದನು. ಅವನ ತರುವಾಯ ಅವನ ಮೊಮ್ಮಗ ಪರೀಕ್ಷಿತರಾಯನೇ ಮೊದಲುಗೊಂಡು ಪ್ರವೀಕರಾಯನ ವರೆಗೆ ಇಪ್ಪತ್ತೊಂದು ಮಂದಿ ರಾಜ್ಯವಾಳಿದರು. ಆಮೇಲೆ ಆ ಸಿಂಹಾಸನ ಮಗಧ ವಂಶದ ಸುಮಾಲಿ ಎಂಬುವನ ವಶವಾಯಿತು. ಆ ವಂಶದ ಮೂವತ್ತುಮಂದಿ ರಾಜರಾಳಿದಮೇಲೆ ಅದು ಮಯೂರವರ್ಮನ ಕೈಸೇರಿತು. ವೃಷಳರಾಯ, ದುರ್ಮಿತ್ರರಾಯ ಮತ್ತು ಕದಂಬರಾಯ ಮುಂತಾದ ಪ್ರಸಿದ್ಧ ರಾಜರಾಳಿದಮೇಲೆ, ವಿಕ್ರಮರಾಯನ ವಶಕ್ಕೆ ಈ ಸಿಂಹಾಸನ ಬಂತು. ಮಾಲವ ರಾಜವಂಶದವರ ತರುವಾಯ ಅವಂತೀ ದೇಶದ ಭೋಜರಾಯನು ಇದರಮೇಲೆ ಮಂಡಿಸುತ್ತಿದ್ದನು. ಅನಂತರ ಶಾಲೀವಾಹನನೇ ಮೊದಲಾದ ಆಭೀರ ಕುಲದವರು ಆಳಿದಮೇಲೆ ನವಬಳ್ಳಾಳರು ಒಡೆಯರಾದರು. ಬಹಳ ಕಾಲ ಇದು ಅನಾರ್ಯವಂಶದ ರಾಜರ ಕೈಸೇರಿದ್ದು, ತರುವಾಯ ಓರಂಗಲ್ಲು ಪ್ರತಾಪರುದ್ರರಾಯನ ಕೈಸೇರಿ, ಆಮೇಲೆ ಕಂಪಿಲರಾಯನ ವಶಕ್ಕೆ ಬಂತು. ಕಾಲಧರ್ಮ ಸಂಯೋಗದಿಂದ ಈಗ ಆ ಸಿಂಹಾಸನ ಭೂಸ್ಥಾಯಿಯಾಗಿದೆ. ಆ ದಿನ ಕೃಷ್ಣಸರ್ಪ ನಿನ್ನ ತಲೆಯಮೇಲೆ ಹೆಡೆಯಾಡಿಸುತ್ತಿದ್ದ ಸ್ಥಳದಲ್ಲಿಯೇ ಅದನ್ನು ಹುದುಗಿಸಿಟ್ಟಿದ್ದಾರೆ. ಈಗ ನಾವು ಅದನ್ನು ತೆಗೆಯಿಸಿಕೊಂಡು ಬರಬೇಕು.

ಹುಕ್ಕ :—ಮಹಾತ್ಮಾ, ಅಂಥ ಮಹಾಮಹಿಮರೂ ಪ್ರಚಂಡ ಪರಾಕ್ರಮಿಗಳೂ, ಸತ್ಯಸಂಧರೂ ಆಳಿದ ಸಿಂಹಾಸನ ನನ್ನಂಥ ಸಾಮಾನ್ಯನಿಗೆ ಲಭಿಸುವುದೆ ?

ವಿದ್ಯಾರಣ್ಯ :—ಹುಕ್ಕ ! ನೀನು ಸಾಮಾನ್ಯನಲ್ಲ. ನಿನ್ನಿಂದ ಕರ್ಣಾಟಕ ಕೀರ್ತಿಲತೆ ಕುಡಿವರಿಯಬೇಕಾಗಿದೆ. ಈಗ ನಾವು ಆ ಸಿಂಹಾಸನವನ್ನು ತರಿಸಿ, ನೂತನ ರಾಜ್ಯಸ್ಥಾಪನೆ ಮಾಡಿಸಲು ಹಿಂದು ಮುಂದು ನೋಡಬಾರದು. ಬೇಟೆನಾಯಿಯಮೇಲೆ ಮೊಲವು ತಿರುಗಿಬಿದ್ದ ಗಂಡುಭೂಮಿಯಲ್ಲಿ ಹೊಸ ಪಟ್ಟಣವನ್ನು ಕಟ್ಟಿಸಲು ಇಂದಿಗೆ ಮೂರನೆಯ ದಿನ ಪ್ರಶಸ್ತವಾಗಿದೆ. ಆದಿನ ಸಲ್ಲುವ ಶುಭ ವಿಜಯಲಗ್ನದಲ್ಲಿ ಶಂಕುಸ್ಥಾಪನೆ ಮಾಡಬೇಕು. ಆ ಲಗ್ನ ಹೆಚ್ಚು ಕಡಮೆಯಾದರೆ ನಾವು ಸ್ಥಾಪಿಸುವ ರಾಜ್ಯ ಮುನ್ನೂರು ವರ್ಷ ಕಾಲ ಮಾತ್ರ ಉಚ್ಚ್ರಾಯಸ್ಥಿತಿಯಲ್ಲಿರುವುದು. ಆಮೇಲೆ ಕರ್ಣಾಟಕ ರಾಜ್ಯಲಕ್ಷ್ಮಿ ಕಾವೇರೀನದಿಯ ತೀರದಲ್ಲಿ ಶಾಶ್ವತವಾಗಿ ನೆಲಸುವಳು. ಕರ್ಣಾಟಕ ರತ್ನ ಸಿಂಹಾಸನಾಧೀಶ್ವರರ ವಂಶವು ಆಚಂದ್ರಾರ್ಕವಾಗಿ ಮೆರೆಯುವುದು.

ಹುಕ್ಕ :—ತಮ್ಮ ಅಭೀಷ್ಟದಂತಾಗಲಿ.

ಭೂಮಿಯಲ್ಲಿ ಹೂತಿಟ್ಟಿದ್ದ ಸಿಂಹಾಸನವನ್ನು ತೆಗೆಯಿಸಿಕೊಂಡು ಬಂದರು. ಶಂಕುಸ್ಥಾಪನಗೆ ಬೇಕಾದ ಸಿದ್ಧತೆಗಳು ನಡೆದುವು. ಆ ದಿನ ಹುಕ್ಕ ಬುಕ್ಕರು ಅಶ್ವಾರೂಢರಾಗಿ ನೆರೆದಿದ್ದ ಜನ ಸಮೂಹದೊಂದಿಗೆ ಪರ್ಣ ಕುಟೀರದಿಂದ ಹೊರಟರು. ವಿದ್ಯಾರಣ್ಯರು ಪಾಲಕಿಯಲ್ಲಿ ಕುಳಿತರು. ಮಂಗಳವಾದ್ಯಗಳು ಮೊಳಗುತ್ತಿದ್ದುವು. ಸುವಾಸಿನಿಯರು ಕಲಶ ಕನ್ನಡಿಗಳನ್ನು ಹಿಡಿದುಕೊಂಡು ಬರುತ್ತಿದ್ದರು. ಉತ್ಸವವು ವೈಭವದಿಂದ ಭುವನೇಶ್ವರಿಯ ದೇವಾಲಯವನ್ನು ಸೇರಿತು. ಅಲ್ಲಿ ದೇವಿಯ ಪೂಜೆಯನ್ನು ನೆರವೇರಿಸಿಕೊಂಡು ಶಂಕುಸ್ಥಾಪನೆಯ ಸ್ಥಳಕ್ಕೆ ಬಂದರು. ವಾದ್ಯಗಳ ಧ್ವನಿ ನಿಂತಿತು. ಉತ್ತರ ಕ್ಷಣದಲ್ಲಿಯೇ ಬಹು ಗಂಭೀರವಾದ ಶಂಖಧ್ವನಿಯು ಮೊಳಗಿತು. ಆ ವಿಜಯ ಮುಹೂರ್ತದಲ್ಲಿ ವಿದ್ಯಾರಣ್ಯರು ತಮ್ಮ ಪುಣ್ಯಹಸ್ತದಿಂದ ಶಂಕುಸ್ಥಾಪನೆ ಮಾಡಿದರು. ಆ ಸಮಯದಲ್ಲಿ ಅವರು ಅಲ್ಲಿ ಸೇರಿದ್ದ ಪ್ರಜಾ ಸಮೂಹವನ್ನು ಉದ್ದೇಶಿಸಿ "ಮುದ್ದು ಕನ್ನಡನಾಡಿನ ಪ್ರಜೆಗಳೇ, ನಾವೆಲ್ಲರೂ ಕನ್ನಡ ತಾಯಿಯ ಮಕ್ಕಳು. ನಾವೆಲ್ಲರೂ ಐಕಮತ್ಯದಿಂದ ಕೂಡಿ ಬಾಳಬೇಕು. ಇಂದು ನಾವು ಇಲ್ಲಿ ಸ್ಥಾಪಿಸಿದ ನೂತನ ನಗರವನ್ನು ವಿಜಯನಗರವೆಂದು ಕರೆಯೋಣ. ಹಿಂದೆ ವಿಜಯಧ್ವಜ ಮಹಾ

ರಾಜನು ಇಲ್ಲಿಯೇ ಕೋಟೆಯನ್ನು ಕಟ್ಟಿಸಿದ್ದನು. ಹುಕ್ಕಣ್ಣನೇ ನಮಗೆಲ್ಲ ದೊರೆ ; ಬುಕ್ಕಣ್ಣನೇ ಯುವರಾಜ. ಜಂಬುಕೇಶ್ವರರಾಯನ ಮಗಳು ಗಿರಿಜಾಂಬೆಯೇ ನಮ್ಮ ರಾಜ್ಯದ ಮಹಾರಾಜ್ಞಿ. ಇನ್ನು ಮುಂದೆ ಹುಕ್ಕಣ್ಣನಿಗೆ ಹರಿಹರರಾಯನೆಂದು ಹೆಸರಿರಲಿ. ಈ ನೂತನ ರಾಜ್ಯ ದಿನ ದಿನಕ್ಕೆ ಅಭಿವೃದ್ಧಿಗೆ ಬರಲಿ. ಭುವನೇಶ್ವರೀ ದೇವಿಯು ನಮ್ಮ ರಾಜ್ಯವನ್ನು ಸದಾ ರಕ್ಷಿಸುತ್ತಿರಲಿ. ಶ್ರೀ ವಿರೂಪಾಕ್ಷಸ್ವಾಮಿಯ ಅಂಕಿತದಿಂದ ನಮ್ಮ ಹೊಸ ಮಹಾರಾಜರು ರಾಜ್ಯಭಾರ ಮಾಡುತ್ತಾರೆ. ಸರ್ವೇ ಜನಾಃ ಸುಖಿನೋ ಭವಂತು" ಎಂದು ಅಮೃತವಾಣಿಯಿಂದ ಸಂದೇಶವನ್ನಿತ್ತರು.

ವಿದ್ಯಾರಣ್ಯರು "ಕರ್ಣಾಟಕ ಸಿಂಹಾಸನ ಸ್ಥಾಪನಾಚಾರ್ಯ"ರೆಂಬ ಶೃಂಗೇರಿ ಗುರುಪರಂಪರೆಗೆ ಬಂದಿದ್ದ ಬಿರುದನ್ನು ಅನ್ವರ್ಥಕಗೊಳಿಸಿದರು.



# ಏಳನೆಯ ಅಧ್ಯಾಯ

## ವಿದ್ಯಾರಣ್ಯರ ಮಂತ್ರಿತ್ವ, ರಾಜ್ಯಾಭ್ಯುದಯ

ಅತಿಗಂಭೀರನುದಾರ ಧೀರನು ಮಹಾಸಂಪನ್ನ ಸರ್ವಾತ್ಮನೂ ।
ರ್ಜಿತ ನಾನಾಲಿಪಿ ಭಾಷೆಯೊಳ್ ಪರಿಚಿತಂ ಲಂಚಕ್ಕೆ ಕೆಟ್ಟಾಡದ ॥
ಪ್ರತಿಸದ್ಧರ್ಮನು ಯುಕ್ತಿಶಾಲಿ ಚತುರೋಪಾಯಂಗಳಂ ಬಲ್ಲವಂ ।
ಪತಿಕಾರ್ಯಂ ಹಿತಮಂತ್ರಿಯೈ ಹರಹರ ಶ್ರೀಚನ್ನಸೋಮೇಶ್ವರಾ ॥

ವಿದ್ಯಾರಣ್ಯರು ಸಂತತವಾದ ಪ್ರಯತ್ನಬಲದಿಂದ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಅವರು ದಕ್ಷಿಣಾಪಥದಲ್ಲಿ ಪ್ರಬಲ ಹಿಂದೂ ರಾಜ್ಯವನ್ನು ಕಟ್ಟಿ ಉತ್ತರ ಹಿಂದೂಸ್ಥಾನದಿಂದ ಬರುತ್ತಿದ್ದ ಮುಸಲ್ಮಾನರ ಹಾವಳಿಯನ್ನು ತಡೆಯಬೇಕೆಂಬ ಸಂಕಲ್ಪವನ್ನು ಸಾಧಿಸಿದಂತಾಯಿತು. ಅಷ್ಟರಿಂದಲೇ ಅವರು ತೃಪ್ತರಾಗುವಂತಿರಲಿಲ್ಲ. ಹೊಸದಾಗಿ ಸ್ಥಾಪಿತವಾದ ರಾಜ್ಯದಲ್ಲಿ ಪ್ರಜೆಗಳ ನೆಮ್ಮದಿಗೆ ಭಂಗ ಬರದಂತೆಯೂ ಪರರಾಯರೊಡನೆ ಸ್ನೇಹಸಂಬಂಧವನ್ನು ಬೆಳಸುವಂತೆಯೂ, ಅಲ್ಲದೆ ರಾಜ್ಯದ ನಾನಾ ಮುಖವಾದ ಅಭಿವೃದ್ಧಿಯನ್ನು ಸಾಧಿಸುವಂತೆಯೂ ಹರಿಹರನಿಗೆ ಮಂತ್ರಾಲೋಚನೆಯನ್ನು ಹೇಳುತ್ತ ರಾಜ್ಯವಿಸ್ತರಣ ಮಾಡಬೇಕಾದ ಆವಶ್ಯಕತೆಯಿತ್ತು. ಇದನ್ನು ಹರಿಹರನೂ ಮನಗಂಡಿದ್ದನು. ವಿದ್ಯಾರಣ್ಯರು ರಾಜಧಾನಿಯಲ್ಲಿಯೇ ಇದ್ದುಕೊಂಡು ರಾಜಕಾರ್ಯಗಳಲ್ಲಿ ತನಗೆ ಯಾವಾಗಲೂ ನೆರವಾಗುತ್ತಿರಬೇಕೆಂದು ಅವನು ಅವರನ್ನು ಬೇಡಿದನು. ಮರಿಹಕ್ಕಿಯ ರೆಕ್ಕೆಪುಕ್ಕಗಳು ಬಲಿತು ಅದು ತಾನಾಗಿಯೇ ಆಕಾಶದಲ್ಲಿ ಹಾರಬಲ್ಲ ಶಕ್ತಿಯನ್ನು ಪಡೆಯುವವರೆಗೂ ತಾಯಿ ಹಕ್ಕಿ ಅದನ್ನು ಎಚ್ಚರಿಕೆಯಿಂದ ನೋಡಿಕೊಳ್ಳುವಂತೆ, ವಿಜಯನಗರರಾಜ್ಯ ಸರ್ವಾಂಗ ಪರಿಪುಷ್ಟವಾಗಿ ಬೆಳೆದು ಅಭೇದ್ಯಶಕ್ತಿಯನ್ನು ಗಳಿಸಿಕೊಳ್ಳುವವರೆಗೂ ವಿದ್ಯಾರಣ್ಯರು ರಾಜಕೀಯ ರಂಗದಿಂದ ಹಿಂದೆ ಸರಿಯುವಂತಿರಲಿಲ್ಲ. ಆದ್ದರಿಂದ ಅವರು ಹರಿಹರನಿಗೆ ಪರಮ ಗುರುವಾಗಿಯೇ ಅಲ್ಲದೆ ಹಿತಮಂತ್ರಿಯಾಗಿಯೂ ನಿಲ್ಲಬೇಕಾಯಿತು. ಇಂಥ ಪುಣ್ಯ ಯಾವ ರಾಜನಿಗುಂಟು ! ಅವರ ಆತ್ಮಶಕ್ತಿಯ ಬಲ, ಕ್ರಿಯಾಸಿದ್ಧಿಯ ಫಲ, ಇವು ಹರಿಹರನಿಗೆ ಲಭಿಸಿ ಅವನ ಕೀರ್ತಿ, ತೇಜಸ್ಸು, ಐಶ್ವರ್ಯ, ಬಲ, ಪರಾಕ್ರಮಗಳು ದಿನದಿನಕ್ಕೆ ವೃದ್ಧಿಯಾಗು

ತ್ತಿದ್ದುವು. ಬ್ರಹ್ಮತೇಜೋಬಲದಿಂದ ಕ್ಷಾತ್ರತೇಜಸ್ಸು ಅವ್ಯಾಹತವಾಗಿ ಬೆಳೆಯುತ್ತಿತ್ತು. ಆಧ್ಯಾತ್ಮಿಕ ಸಂನ್ಯಾಸಿ ತನ್ನ ಆತ್ಮಶ್ರೇಯಸ್ಸಿಗಾಗಿ ದುಡಿಯದೆ ಲೋಕ ಕಲ್ಯಾಣವನ್ನು ಸಾಧಿಸುವ ಕರ್ಮ ಸಂನ್ಯಾಸಿಯಾಗುವುದು ಇತಿಹಾಸದಲ್ಲಿ ಬಹಳ ಅಪೂರ್ವ. ವಿದ್ಯಾರಣ್ಯರು ಮಹರ್ಷಿಯಾಗಿದ್ದರು; ಮಹಾ ಮಂತ್ರಿಯಾಗಿ ನಿಂತರು. ಅವರು ಚಿಕ್ಕ ಸಂಸಾರವನ್ನು ಬಿಟ್ಟು ವಿಶ್ವಸಂಸಾರವನ್ನು ಹೊಕ್ಕರು. ಆದರೂ ಅವರು ನಿರ್ಲಿಪ್ತರು, ವಿಶ್ವಪ್ರೇಮಿಗಳು.

*ಪ್ರಾಚೀನ ಕಾಲದಲ್ಲಿ ಇಂದ್ರನಿಗೆ ಬೃಹಸ್ಪತಿ, ನಲನಿಗೆ ಸುಮತಿ, ಶೈಬ್ಯನಿಗೆ ಮೇಧಾತಿಥಿ, ಯುಧಿಷ್ಠಿರನಿಗೆ ಧೌಮ್ಯ, ಪೃಥುವಿಗೆ ಸ್ವೌಜಾ, ನಿಮಿಗೆ ಶತಾನಂದ ಮತ್ತು ರಾಮಚಂದ್ರನಿಗೆ ವಶಿಷ್ಠರು ಮಂತ್ರಿಗಳಾಗಿದ್ದಂತೆಯೇ ಮಹಾಜ್ಞಾನಿಗಳೂ, ಗುರುವರ್ಯರೂ ಆದ ವಿದ್ಯಾರಣ್ಯರು ಹರಿಹರನಿಗೆ ಮುಖ್ಯಮಂತ್ರಿಯಾದರು. ರಾಜನೀತಿಯೆಂಬುದು ವಿದ್ಯಾರಣ್ಯರನ್ನು ಆಶ್ರಯಿಸಿ ಕೀರ್ತಿಯನ್ನು ಪಡೆಯಿತು. ಅವರು ವಿದ್ಯಾವೀರರಾಗಿದ್ದಂತೆಯೇ ರಣವೀರರೂ ಆಗಿದ್ದರೆಂದು ಕಂಡುಬರುತ್ತದೆ.

ವಿದ್ಯಾರಣ್ಯರು ಎಲ್ಲ ಸಣ್ಣ ಪುಟ್ಟ ರಾಜ್ಯಗಳನ್ನು ಒಟ್ಟುಗೂಡಿಸಿ ವಿಜಯನಗರದ ಅಧೀನವಾಗಿರುವಂತೆ ಮಾಡಿದರು. ಅಪಾರವಾದ ಸೇನೆಯನ್ನು ಕೂಡಿಸಿದರು. ಶಿಲ್ಪಶಾಸ್ತ್ರವನ್ನು ಅನುಸರಿಸಿ ರಾಜಧಾನಿಯಲ್ಲಿ ಗಜಾಶ್ವಶಾಲೆಗಳನ್ನೂ ಬೇರೆ ಬೇರೆ ಮತಪಂಗಡಗಳ ಜನರ ಅಭಿರುಚಿಗೆ ಅನುಗುಣವಾಗಿರುವಂತೆ ಪೇಟೆಗಳನ್ನೂ ಕಟ್ಟಿಸಿದರು. ಆನೆಗೊಂದಿ, ಕಂಪಿಲ, ಹಳೇಬೀಡು, ಪೆನಗೊಂಡೆ ಮುಂತಾದ ಕಡೆಗಳಿಂದ ವರ್ತಕರೂ, ಶ್ರಮಜೀವಿಗಳೂ, ಪಂಡಿತರೂ ವಿಜಯನಗರಕ್ಕೆ ಬಂದು ಒಕ್ಕಲು ನಿಂತರು.

---

*ಇಂದ್ರಸ್ಯಾಂಗೀರಸೋ ನಲಸ್ಯ ಸುಮತಿಃ ಶೈಬ್ಯಸ್ಯ ಮೇಧಾತಿಥಿಃ ।
ಧೌಮ್ಯೋ ಧರ್ಮಸುತಸ್ಯ ವೈನ್ಯ ನೃಪತೇಃ ಸ್ವೌಜಾನಿಮೇರ್ಗೌತಮಃ ॥
ಪ್ರತ್ಯಗ್ದೃಷ್ಟಿರರುಂಧತೀ ಸಹಚರೋ ರಾಮಸ್ಯ ಪುಣ್ಯಾತ್ಮನೋ ।
ಯದ್ವತ್ತಸ್ಯ ವಿಭೋರಭೂತ್ ಕುಲಗುರುರ್ಮಂತ್ರೀ ತಥಾಮಾಧವಃ ॥
—ಮಾಧವೀಯ.

ನೀರಿನ ವಸತಿ, ವಾಯುಗುಣ ಜನರಿಗೆ ಅನುಕೂಲವಾಗಿದ್ದುವು. ನಗರ ದಿನದಿನಕ್ಕೆ ಬೆಳೆಯುತ್ತಿತ್ತು. ಹರಿಹರನ ಕೀರ್ತಿ ಪ್ರತಿಷ್ಠೆಗಳು ಸರ್ವತ್ರ ವ್ಯಾಪಿಸಿದುವು. ವಿದ್ಯಾರಣ್ಯರು ನೆಟ್ಟ ಸಾಮ್ರಾಜ್ಯ ವೃಕ್ಷ ಅನಂತ ಶಾಖೋಪಶಾಖೆಗಳಾಗಿ ಹಬ್ಬಿ ಲೋಕಕ್ಕೆ ಆನಂದದಾಯಕವಾಯಿತು. ಸ್ವಯಂ ವಿದ್ವಾಂಸರಾಗಿದ್ದ ವಿದ್ಯಾರಣ್ಯರು ರಾಜಾಸ್ಥಾನದಲ್ಲಿ ಪಂಡಿತರಿಗೆ ವಿಶೇಷವಾದ ರಾಜಾಶ್ರಯವನ್ನು ನೀಡುತ್ತ ಸಾಹಿತ್ಯ ಸಂಪತ್ತನ್ನು ನಿರ್ಮಾತ್ಸರ್ಯದಿಂದ ಬೆಳೆಯಿಸುತ್ತಿದ್ದರು. ಎಲ್ಲ ಧರ್ಮದವರಿಗೂ ಅನುಕೂಲವಾಗಿರುವಂತೆ ದೇವಾಲಯಗಳನ್ನು ಕಟ್ಟಿಸಿ ಆಯಾ ಮತೀಯರು ತಮ್ಮ ತಮ್ಮ ಮತ ಧರ್ಮಗಳನ್ನು ಪರಿಪಾಲಿಸಿಕೊಂಡು ಬರುವಂತೆ ಏರ್ಪಾಟು ಮಾಡಿಸಿದರು. ಇದರಿಂದ ಸಂಸ್ಕೃತಿಯು ಅಚ್ಚಳಿಯದೆ ಉಳಿಯುವಂತಾಯಿತು. ರಾಜಾಯವನ್ನು ಹೆಚ್ಚಿಸಲು ತುಂಗಭದ್ರಾ ನದಿಯಿಂದ ಕಾಲುವೆಗಳನ್ನು ಮಾಡಿಸಿ ಭೂವ್ಯವಸಾಯವನ್ನು ಹೆಚ್ಚಿಸಿದರು. ಕೃಷೀವಲರು ಸಂತುಷ್ಟರಾಗಿ ರಾಜಭಕ್ತಿಯಿಂದ ಬಾಳುತ್ತಿದ್ದರು. ವರ್ತಕರು ದೇಶ ವಿದೇಶಗಳಿಗೆ ಹೋಗಿ ವ್ಯಾಪಾರ ಮಾಡುತ್ತ ಐಶ್ವರ್ಯವನ್ನು ಸಂಪಾದಿಸುತ್ತಿದ್ದರು. ಕಳ್ಳಕಾಕರ ಭಯವಿಲ್ಲದಂತೆ ವ್ಯಾಪಾರೋದ್ಯಮಗಳು ನಿರಾತಂಕವಾಗಿ ನಡೆಯುತ್ತಿದ್ದುವು. ವರ್ತಕರಮೇಲೆ ಹೆಚ್ಚಿಗೆ ತೆರಿಗೆಯನ್ನು ಹಾಕದೆ, ರಾಜಾಯವನ್ನು ಸರಿತೂಗಿಸಲು ಅವರು ಸಾಧನೋಪಾಯಗಳನ್ನು ಕಂಡುಹಿಡಿಯುತ್ತಿದ್ದರು.

ಸೈನಿಕರಿಗೆ ಕೈತುಂಬ ಮಾಸಾಶನಗಳನ್ನು ಕೊಡುತ್ತಿದ್ದರು. ಯುದ್ಧ ಸಮಯದಲ್ಲಿ ಅವರಿಗೆ ವಿಶೇಷರೀತಿಯ ಬಹುಮಾನಗಳೂ ದೊರೆಯುತ್ತಿದ್ದುವು. ಯುದ್ಧದಲ್ಲಿ ಮಡಿದವರ ಕುಟುಂಬಗಳನ್ನು ಸುರಕ್ಷಿತವಾಗಿ ಕಾಪಾಡುತ್ತಿದ್ದರು. ಇದರಿಂದ ಯೋಧರು ರಾಜ್ಯಕ್ಕಾಗಿ ಪ್ರಾಣಗಳನ್ನು ತೆರಲು ಸಂತೋಷದಿಂದ ಮುನ್ನುಗ್ಗುತ್ತಿದ್ದರು. ವಿಜಯನಗರ ರಾಜ್ಯ ವಿಸ್ತಾರವಾಗಿ ಬೆಳೆಯುತ್ತ ಬಂತು.

ಹರಿಹರನು ತುಂಬ ಪರಾಕ್ರಮಿಯಾಗಿದ್ದಂತೆಯೇ ರಾಜಕಾರ್ಯ ವಿಚಕ್ಷಣನೂ ಆಗಿದ್ದನು. ಆ ಕಾಲದಲ್ಲಿದ್ದ ವಿಲಕ್ಷಣ ಪರಿಸ್ಥಿತಿಯನ್ನು ನೋಡಿದರೆ ರಾಜ್ಯಭಾರ ಮಾಡುವುದು ಸಾಧಾರಣ ಕಾರ್ಯವೇನೂ ಆಗಿರಲಿಲ್ಲ. ಅನ್ಯಾಕ್ರಮಣದ ವಿಪತ್ತಿಗೆ ಒಳಗಾಗಿದ್ದ ರಾಜ್ಯ ಆಗತಾನೆ ತಲೆಯೆತ್ತುತ್ತಿತ್ತು. ಶತ್ರು

ಗಳು ತಮ್ಮ ಒಡೆತನವನ್ನು ಪುನಃ ಸ್ಥಾಪಿಸಲು ಸಮಯಸಿರೀಕ್ಷೆ ಮಾಡುತ್ತಿದ್ದರು. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ವಿಜಯೋತ್ಸವವು ನೆರವೇರಿದಮೇಲೆ ಒಂದು ವರ್ಷ ಕಳೆದಿತ್ತು. ಮುಸಲ್ಮಾನರು ಆಗತಾನೆ ಕಲ್ಬುರ್ಗಿಯಲ್ಲಿ ಬಹಮನೀ ರಾಜ್ಯವನ್ನು ಸ್ಥಾಪಿಸಿ ತಮ್ಮ ಶಕ್ತಿಯನ್ನು ಒಟ್ಟುಗೂಡಿಸುತ್ತಿದ್ದರು. ಹೀಗೆ ವಿಜಯನಗರಕ್ಕೆ ಪ್ರತಿಸ್ಪರ್ಧಿಯಾಗಿ ಇನ್ನೊಂದು ರಾಜ್ಯ ನೆರೆ ನಾಡಿನಲ್ಲಿ ಕಾಣಿಸಿಕೊಂಡಿತು. ಹರಿಹರನು ಆ ಸಂದರ್ಭದಲ್ಲಿ ತನ್ನ ರಾಜ್ಯ ಶಕ್ತಿಯನ್ನು ಸುಭದ್ರವಾಗಿ ಕಾಪಾಡಲು ತಕ್ಕ ಸಿದ್ಧತೆಗಳನ್ನು ಮಾಡಲೇಬೇಕಾಗಿದ್ದಿತು. ಇದಲ್ಲದೆ, ಆಗತಾನೆ ರಾಜ್ಯಕ್ರಾಂತಿಯು ನಡೆದು ಹರಿಹರನು ಹೊಸ ರಾಜ್ಯದಲ್ಲಿ ಹೊಸ ಅರಸನಾಗಿದ್ದನು. ಅದುವರೆಗೆ ಅರಾಜಕತೆಯೇ ದೇಶದಲ್ಲಿ ತುಂಬಿತ್ತು. ರಾಜಕೀಯ ಮತ್ತು ಸಾಮಾಜಿಕ ಜನಜೀವನ ಅಸ್ತವ್ಯಸ್ತವಾಗಿತ್ತು. ಇವೆಲ್ಲವನ್ನೂ ಸರಿಪಡಿಸಿ ರಾಜದಲ್ಲಿ ಶಾಂತಿ ಸಮಾಧಾನಗಳನ್ನು ಸ್ಥಾಪಿಸಬೇಕಾದರೆ ಹರಿಹರನಂಥ ಧೀರೋದಾತ್ತ ಪ್ರಭುವೂ ವಿದ್ಯಾರಣ್ಯರಂಥ ಮೇಧಾವಿ ಮಂತ್ರಿಯೂ ಅವಶ್ಯಕವಾಗಿದ್ದರು.

ಹರಿಹರನು ಎಚ್ಚರದಿಂದ ಉತ್ತರದ ಸೀಮೆಗಳನ್ನು ಕಾಯುತ್ತ ದೇಶವನ್ನು ವೈರಿಗಳು ಆಕ್ರಮಿಸದಂತೆ ಕಾಪಾಡುತ್ತಿದ್ದನು. ಅವನ ತಮ್ಮಂದಿರಾದ ಕಂಪಣ್ಣ, ಬುಕ್ಕ, ಮಾರಪ್ಪ, ಮುದ್ದಣ್ಣ, ಈ ನಾಲ್ವರೂ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಮಾಂಡಲಿಕರಾಗಿ ದರ್ಪದಿಂದ ರಾಜ್ಯವಾಳುತ್ತಿದ್ದರು. ಹರಿಹರನು ಹತ್ತು ವರ್ಷಕಾಲ ರಾಜ್ಯವಾಳಿದನು. ಈ ಅವಧಿಯಲ್ಲಿ ಅವನು ಅಪ್ರತಿಹತವಾದ ಹೋರಾಟಗಳನ್ನು ಹೂಡಿ ಹಿಂದು ಜನಾಂಗದಲ್ಲಿ ಸಂಘಶಕ್ತಿಯನ್ನುಂಟುಮಾಡಿದನು. ಆವೇಳೆಗೆ ಅವನಿಗೆ ದೈವಾನುಕೂಲವೂ ಲಭಿಸಿತು. ಆಗ ಕೇವಲ ಹೆಸರಿಗೆ ಮಾತ್ರ ದೊರೆಯಾಗಿದ್ದ ಹೊಯ್ಸಳ ವಂಶದ ನಾಲ್ಕಡಿ ವಿರೂಪಾಕ್ಷ ಬಲ್ಲಾಳನು ಕಾಲವಾದನು. ಅಲ್ಲಿಗೆ ಹೊಯ್ಸಳ ಮನೆತನ ಕೊನೆಗೊಂಡಿತು. ಆಗ ಪ್ರಬಲನಾಗಿದ್ದ ಹರಿಹರನ ಒಡೆತನವನ್ನು ಎಲ್ಲ ಜನಾಂಗವೂ ವಿರೋಧವಿಲ್ಲದೆ ಒಪ್ಪಿಕೊಂಡಿತು.

ದಕ್ಷಿಣ ಭಾರತದಲ್ಲೆಲ್ಲಾ ಹರಿಹರನ ಪ್ರಭಾವ ಮೆರೆಯಿತು. ಅವನು ಮಹಾಮಂಡಲೇಶ್ವರನಾದನು. **ಭಾಷೆಗೆ ತಪ್ಪುವ ರಾಯರ ಗಂಡ, ಅವಿ**

**ರಾಯ ವಿಭಾಡ** ಎಂದು ಹೊಗಳಿಸಿಕೊಂಡನು. ತನ್ನ ಶ್ರೇಯಸ್ಸಿಗೆ ಸಹಾಯಕರಾದ ವಿದ್ಯಾರಣ್ಯರನ್ನು ರಾಜವೈಭವದಿಂದ ಮರ್ಯಾದಿಸಲು ಅವರನ್ನು ಶೃಂಗೇರಿಯ ಗುರುಪೀಠದಲ್ಲಿ ಕುಳ್ಳಿರಿಸಿ ಕನಕಾಭಿಷೇಕ ಮಾಡಿದನು. ಅವನ ತಮ್ಮಂದಿರೂ, ಅಳಿಯ ಬಲ್ಲಪ್ಪ ದಂಡನಾಯಕನೂ ಮತ್ತು ಕುಮಾರ ಸೋಮಣ್ಣ ಒಡೆಯನೂ ಅಲ್ಲದೆ ಅನೇಕ ಆಪ್ತಬಾಂಧವರೂ ಆಗ ಶೃಂಗೇರಿಗೆ ಬಂದಿದ್ದರು. ಹರಿಹರನು ವಿದ್ಯಾರಣ್ಯರ ಹೆಸರಿನಲ್ಲಿ ಅನೇಕ ದಾನ ಧರ್ಮಗಳನ್ನು ಮಾಡಿ ತನ್ನ ಗುರುಭಕ್ತಿಯನ್ನು ಪ್ರದರ್ಶಿಸಿದನು.

ವಿದ್ಯಾರಣ್ಯರ ಪ್ರೇರಣೆಯಿಂದಲೂ, ಸಮಯ ಸ್ಫೂರ್ತಿಯಿಂದಲೂ ಹರಿಹರ ಬುಕ್ಕರಾಯರ ಸಾಹಸ ಪರಾಕ್ರಮಗಳಿಂದಲೂ ದಕ್ಷಿಣ ಭಾರತದಲ್ಲಿ ಆರ್ಯ ಸಂಸ್ಕೃತಿಯನ್ನು ಉದ್ಧರಿಸಲು ವಿಜಯನಗರ ಸಾಮ್ರಾಜ್ಯಸ್ಥಾಪನೆಯಾಯಿತು. ಈ ಮಹಾಕಾರ್ಯ ಸಾಧನೆಯು ಕೈಗೂಡಲು ವಿದ್ಯಾರಣ್ಯರು ಹತ್ತು ವರ್ಷಕಾಲ ಅವಿಶ್ರಾಂತವಾಗಿ ದುಡಿದರು. ತಮ್ಮ ಅಧ್ಯಾತ್ಮ ಜೀವನ ತಪಸ್ಸನ್ನೇ ಧಾರೆಯೆರೆದರು.

ಹರಿಹರನ ರಾಜ್ಯ ಪೂರ್ವ ಸಮುದ್ರದಿಂದ ಪಶ್ಚಿಮ ಸಮುದ್ರದವರೆಗೂ ಹಬ್ಬಿತು. ದಕ್ಷಿಣಕ್ಕೆ ಕನ್ಯಾಕುಮಾರಿಯ ತನಕ ವ್ಯಾಪಿಸಿತು. ಉತ್ತರಕ್ಕೆ ಕೃಷ್ಣಾ ನದಿಯವರೆಗೆ ಅವನ ಪ್ರಭಾವ ಹರಡಿತು. ವೈರಿಗಳು ತಣ್ಣಗಾದರು. ಜನತೆಯಲ್ಲಿ ಪ್ರಚಂಡ ಜಾಗೃತಿಯುಂಟಾಯಿತು. ಕನ್ನಡನಾಡು ಅಪೂರ್ವ ಕ್ರಾಂತಿಯಿಂದ ಪ್ರವರ್ಧಮಾನವಾಗುತ್ತಿತ್ತು. ಸನಾತನ ಧರ್ಮ ಸಂಸ್ಕೃತಿಗಳಲ್ಲಿ ಜೀವಕಳೆ ತುಂಬಿ ಬಂತು. ಹರಿಹರನು **ಚತುಃಸಮುದ್ರಾಧಿಪತಿ, ಮಹಾರಾಜಾಧಿರಾಜ, ರಾಜಪರಮೇಶ್ವರ, ವೀರ ಪ್ರತಾಪ** ಎಂಬ ಬಿರುದುಗಳನ್ನು ಧರಿಸಿದನು. ಅವನು ಸ್ವಾಮಿ ವಿರೂಪಾಕ್ಷನ ಅಂಕಿತದಲ್ಲಿ ತನ್ನ ರಾಜ ಕಾರ್ಯಗಳನ್ನು ದರ್ಪದಿಂದ ನಡೆಯಿಸುತ್ತ ವಿದ್ಯಾರಣ್ಯರ ಶುಶ್ರೂಷೆಯನ್ನು ಭಕ್ತಿಯಿಂದ ಮಾಡುತ್ತಿದ್ದನು.

ವಿದ್ಯಾರಣ್ಯರ ರಾಜನೀತಿಬಲದಿಂದ ರಾಜಕಾರ್ಯಗಳು ಸುಲಲಿತವಾಗಿ ನಡೆಯುತ್ತಿದ್ದುವು. ಅವರು ಮಂತ್ರಿಯಾಗಿದ್ದುಕೊಂಡು ಲೌಕಿಕ ಕಾರ್ಯ

ಗಳಲ್ಲಿ ನಿರತರಾಗಿದ್ದುದರಿಂದ ಶೃಂಗೇರಿಯಲ್ಲಿ ವಿದ್ಯಾತೀರ್ಥರು ಗುರುವಾಗಿದ್ದರು. ಆಗ ಶೃಂಗೇರಿ ಕೇವಲ ತಪೋವನದಂತಿತ್ತು. ಅದನ್ನು ವಸಿಷ್ಠಾಶ್ರಮವೆಂದು ಕರೆಯುತ್ತಿದ್ದರು. ವಿದ್ಯಾತೀರ್ಥರು "ಲಂಬಿಕಾಯೋಗ" ಸಾಧನೆಯಲ್ಲಿ ಪರಿಪೂರ್ಣ ಸಮಾಧಿಸ್ಥಿತಿಯನ್ನು ಹೊಂದಿ ಈಗಲೂ ಆ ಯೋಗ ನಿದ್ರೆಯಲ್ಲಿಯೇ ಇರುವರೆಂದು ಹೇಳುತ್ತಾರೆ. ಅವರು ಹಾಗೆ ಸಮಾಧಿಸ್ಥರಾದಮೇಲೆ ವಿದ್ಯಾರಣ್ಯರು ಆ ಸ್ಥಳದಲ್ಲಿ ವಿದ್ಯಾಶಂಕರ ಎಂಬ ಹೆಸರಿನ ಶಿವಲಿಂಗವನ್ನು ಪ್ರತಿಷ್ಠೆ ಮಾಡಿಸಿ ತಮ್ಮ ಗುರುಭಕ್ತಿಯನ್ನು ವ್ಯಕ್ತಪಡಿಸಿದರು. ಶಿಲ್ಪಕಲಾ ಸೌಂದರ್ಯದಿಂದ ತುಂಬಿತುಳುಕುತ್ತಿರುವ ದೇವಾಲಯವನ್ನೂ ಕಟ್ಟಿಸಿದರು. ಅಲ್ಲದೆ ಕರ್ಣಾಟಕದ ಅನೇಕ ಸ್ಥಳಗಳಲ್ಲಿ ವಿದ್ಯಾಶಂಕರ ದೇವಾಲಯಗಳನ್ನು ಕಟ್ಟಿಸುವ ಏರ್ಪಾಟು ಮಾಡಿದರು. ಈಗ ಶೃಂಗೇರಿಯಲ್ಲಿರುವ ವಿದ್ಯಾರಣ್ಯಾಪುರವನ್ನು ನಿರ್ಮಿಸಿ ಅಲ್ಲಿ ಸತ್ರ ಮತ್ತು ದೇವಾಲಯಗಳನ್ನು ಕಟ್ಟಿಸಿದರು. ಶೃಂಗೇರಿಯ ಮಠದ ಕಾಗದ ಪತ್ರಗಳಿಗೆ ''ವಿದ್ಯಾಶಂಕರ" ಎಂಬ ಮುದ್ರಿಕೆಯನ್ನು ಉಪಯೋಗಿಸಲು ಪ್ರಾರಂಭಿಸಿದರು. ಅವರು ಶ್ರೀ ಶಂಕರಾಚಾರ್ಯರ ಮೂರ್ತಿಯನ್ನು ಪ್ರತಿಷ್ಠಾಪನೆಮಾಡಿಸಿ ''ಶಂಕರ ವಿಜಯ" ಎಂಬ ಗ್ರಂಥವನ್ನು ಬರೆಯಿಸಿ. ಸನಾತನಧರ್ಮವನ್ನು ಊರ್ಜಿತಗೊಳಿಸಿದರು. ಆಗ ಮಠದಲ್ಲಿ ದಾರುಮಯ ಶಾರದಾದೇವಿಯ ಮೂರ್ತಿಯಿತ್ತು. ಅವರು ಅದಕ್ಕೆ ಬದಲಾಗಿ ಹೆಚ್ಚು ಸುವರ್ಣಮಿಶ್ರವಾದ ಪಂಚಲೋಹದ ಪ್ರತಿಮೆಯನ್ನು ಮಾಡಿಸಿಟ್ಟರು. ಮಠದಲ್ಲಿ ದೇವತಾಕಾರ್ಯಗಳು ಸುಸೂತ್ರವಾಗಿ ನಡೆಯಲು ಅನುಕೂಲಿಸುವಂತೆ ವ್ಯವಸಾಯಕ್ಕೆ ತಕ್ಕುದಾದ ಭೂಮಿಯನ್ನು ಮಾನ್ಯವಾಗಿ ಬಿಟ್ಟುಕೊಟ್ಟರು. ದೇವರಿಗೆ ಚಿನ್ನ ಬೆಳ್ಳಿಯ ಆಭರಣಗಳನ್ನು ವಿಶೇಷವಾಗಿ ಮಾಡಿಸಿಕೊಟ್ಟರು. ವೇದಾಧ್ಯಯನ ಸಂಪನ್ನರಾದ ಬ್ರಾಹ್ಮಣರಿಗೆ ಅಗ್ರಹಾರವನ್ನು ಕಟ್ಟಿಸಿ ವೃತ್ತಿಗಳನ್ನು ಕಲ್ಪಿಸಿಕೊಟ್ಟರು. ಹೀಗೆ ಅವರು ಲೌಕಿಕ ಮತ್ತು ಪಾರಮಾರ್ಥಿಕ ದೃಷ್ಟಿಗಳಿಂದ ಲೋಕಕಲ್ಯಾಣವನ್ನು ಸಾಧಿಸುತ್ತ ಜೀವನತಪಸ್ಸನ್ನಾಚರಿಸುತ್ತಿದ್ದರು.

ವಿದ್ಯಾತೀರ್ಥರು ಯೋಗಸಮಾಧಿಯನ್ನು ಪಡೆದಮೇಲೆ ಭಾರತೀ ಕೃಷ್ಣತೀರ್ಥರು ಮಠದ ಮುಖ್ಯ ಗುರುಗಳಾದರು. ಆಗ ವಿದ್ಯಾರಣ್ಯರು ಮಠದ ಸ್ವಾಮಿಗಳಾಗಿ ಅಧಿಕಾರವನ್ನು ವಹಿಸಿರಲಿಲ್ಲ. ಸಂನ್ಯಾಸಾಶ್ರಮವನ್ನು ಸ್ವೀಕಾರ

ಮಾಡಿದ್ದರೂ ಅವರು ವಿಜಯ ನಗರದಲ್ಲಿ ರಾಜಕೀಯ ಲೌಕಿಕ ಕಾರ್ಯಗಳಲ್ಲಿ ನಿರತರಾಗಿದ್ದುದರಿಂದ ಹಂಪೆಯ ಮಠದಲ್ಲಿಯೇ ಹೆಚ್ಚುಕಾಲವಿರುತ್ತಿದ್ದರು.

ಯುವರಾಜ ಬುಕ್ಕರಾಯನು ಹರಿಹರನ ಆಳಿಕೆಯಲ್ಲಿ ಮಹಾಮಂಡಲೇಶ್ವರನಾಗಿದ್ದನು. ಕಂಪಣ್ಣನು ಆಂಧ್ರ ಪ್ರಾಂತದ ಉದಯಗಿರಿ ರಾಜ್ಯಕ್ಕೆ ಒಡೆಯನಾಗಿದ್ದನು. ವಿಕ್ರಮಸಿಂಹಪುರ ಈತನ ರಾಜಧಾನಿಯಾಗಿತ್ತು. ಇದನ್ನು ಈಗ ನೆಲ್ಲೂರು ಎಂದು ಕರೆಯುತ್ತಾರೆ. ಕಂಪಣ್ಣನ ತರುವಾಯ ಆತನ ಮಗ ಇಮ್ಮಡಿ ಸಂಗಮನು ಉದಯಗಿರಿಯ ರಾಜನಾದನು. ಅವನಿಗೆ ಸಾಯಣಾಚಾರ್ಯರು ಮಂತ್ರಿಯಾಗಿದ್ದರು. ಮಾರಪ್ಪನು ಮಲೆನಾಡಿಗೆ ಒಡೆಯನಾಗಿದ್ದನು. ಚಂದ್ರಗುತ್ತಿ ಈತನ ರಾಜಧಾನಿಯಾಗಿತ್ತು. ಪಂಡಿತೋತ್ತಮನಾದ ಚೌಂಡಮಾಧವನು ಈತನ ಮಂತ್ರಿಯಾಗಿದ್ದನು. ಈ ಮಾಧವನಿಗೆ 'ಉಪನಿಷನ್ಮಾರ್ಗಪ್ರತಿಷ್ಠಾಗುರು' ಎಂಬ ಅನ್ವರ್ಥಕವಾದ ಬಿರುದು ಪ್ರಾಪ್ತವಾಯಿತು. ಇವರೇ ಅಲ್ಲದೆ, ಇವರ ಮಕ್ಕಳೂ ಇತರ ಆಪ್ತೇಷ್ಟರೂ ಬೇರೆಬೇರೆ ಕಡೆಯಲ್ಲಿ ಚಿಕ್ಕ ದೊಡ್ಡ ಪ್ರಾಂತಗಳ ಅಧಿಕಾರಿಗಳಾಗಿದ್ದರು.

ವಿದ್ಯಾರಣ್ಯರು ಹರಿಹರನಿಗೆ ರಾಜ್ಯಗುರುವಾಗಿದ್ದರೂ, ಅವರು ಇತರ ಪಂಗಡಗಳ ಗುರುಗಳನ್ನು ಸನ್ಮಾನಿಸುತ್ತಿದ್ದರು. ಇಂಥ ವಿಶಾಲ ಧರ್ಮದೃಷ್ಟಿ ವಿದ್ಯಾರಣ್ಯರಲ್ಲಿತ್ತು. ಅದರಿಂದಲೇ ಕಾಳಾಮುಖರೆಂಬ ಶೈವಪಂಗಡದ ಕಾಶೀ ವಿಲಾಸ ಕ್ರಿಯಾಶಕ್ತಿ ಆಚಾರ್ಯರು ಹರಿಹರನಿಗೆ ರಾಜಗುರುಗಳಾಗಿದ್ದರು. ಶೃಂಗೇರಿಯ ಜಗದ್ಗುರುಗಳಲ್ಲಿ ಆತನಿಗೆ ವಿಶೇಷ ಭಕ್ತಿಯಿತ್ತು. ಆಗ ವಿದ್ಯಾತೀರ್ಥರು ಶೃಂಗೇರಿಯ ಧರ್ಮ ಸಿಂಹಾಸನವನ್ನು ಅಲಂಕರಿಸಿದ್ದರು.

ವಿಜಯನಗರ ಸಾಮ್ರಾಜ್ಯದ ಮೊದಲನೆಯ ಸಾರ್ವಭೌಮನಾಗಿ ಹತ್ತು ವರ್ಷ ರಾಜ್ಯಭಾರಮಾಡಿ ಹರಿಹರನು ಕಾಲವಾದನು. ಕಂಪಣ್ಣನು ಮುಂಚೆಯೇ ಕಾಲಾಧೀನನಾಗಿದ್ದುದರಿಂದ ಬುಕ್ಕರಾಯನು ವಿಜಯನಗರ ಸಾಮ್ರಾಜ್ಯಕ್ಕೆ ಒಡೆಯನಾದನು.

ವಿದ್ಯಾರಣ್ಯರು ಮಂತ್ರಿ ಪದವಿಯನ್ನು ಬಿಟ್ಟು ಶೃಂಗೇರಿಗೆ ಪ್ರಯಾಣ ಮಾಡಬೇಕೆಂದು ಆಲೋಚಿಸಿದರು. ಆದರೆ ಬುಕ್ಕರಾಯನು ಅವರನ್ನು

ಬಿಟ್ಟಿರಲು ಒಪ್ಪಲಿಲ್ಲ. ಇನ್ನೂ ಕೆಲವು ಕಾಲ ಅವರು ತನಗೆ ಆಪ್ತ ಮಂತ್ರಿಯಾಗಿರಬೇಕೆಂದು ಪ್ರಾರ್ಥಿಸಿದನು. ತಮ್ಮ ಪ್ರಯತ್ನ ವಿಶೇಷದಿಂದ ರೂಪುಗೊಂಡಿದ್ದ ಸಾಮ್ರಾಜ್ಯ ವೃಕ್ಷಕ್ಕೆ ಕೈನೀರೆರದು ಪೋಷಿಸುವ ಭಾಗ್ಯ ಅವರಿಗೆ ಇನ್ನೂ ತಪ್ಪುವಂತಿರಲಿಲ್ಲ. ಬುಕ್ಕರಾಯನು ರತ್ನಸಿಂಹಾಸನಾರೂಢನಾಗಿ ರಾಜ್ಯವಾಳತೊಡಗಿದನು. ಸಾಮ್ರಾಜ್ಯದ ಎಲ್ಲ ಭಾಗಗಳಲ್ಲಿಯೂ ತನ್ನ ಅಧಿಕಾರವನ್ನು ಸ್ಥಿರವಾಗಿ ನೆಲೆಗೊಳಿಸಿದನು. ಬಹಮನೀರಾಜ್ಯ ಉತ್ತರದ ಕಡೆಯಲ್ಲಿ ಬೆಳೆಯುತ್ತಿತ್ತು. ಆದ್ದರಿಂದ ವಿಜಯನಗರ ಆ ಕಡೆಗೆ ತನ್ನ ಅಧಿಕಾರವನ್ನು ಪ್ರಸರಿಸಲು ಅನುವು ದೊರೆಯಲಿಲ್ಲ.

ಕಲ್ಬುರ್ಗಿಯ ಮಹಮುದ್‌ಷಹನಿಗೂ ಬುಕ್ಕರಾಯನಿಗೂ ಯುದ್ಧವಾಯಿತು. ಷಹನು ಗರ್ವಾಂಧನಾಗಿ ಬುಕ್ಕರಾಯನನ್ನು ತನ್ನ ಸಾಮಂತರಾಜನೆಂದು ಭಾವಿಸಿದುದೇ ಈ ಯುದ್ಧಕ್ಕೆ ಕಾರಣ. ವಿಲಾಸ ಜೀವನದಲ್ಲಿ ಮಗ್ನನಾಗಿದ್ದ ಷಹನು ಒಮ್ಮೆ ಗಾಯಕನಿಂದ ಸಂಗೀತವನ್ನು ಕೇಳಿ ಆನಂದಪಟ್ಟು ಅವನಿಗೆ ತಕ್ಕ ಸಂಭಾವನೆಯನ್ನು ಕೊಡುವಂತೆ ಬುಕ್ಕರಾಯನಿಗೆ ಅಧಿಕಾರಯುತವಾದ ಪತ್ರವನ್ನು ಬರೆದು ಕಳುಹಿಸಿದನು. ಇದರಿಂದ ಬುಕ್ಕಭೂಪಾಲನಿಗೆ ಅವಮಾನಮಾಡಿದಂತಾಯಿತು. ಆ ಕಾಗದ ತಂದವನನ್ನು ಕತ್ತೆಯ ಮೇಲೆ ಕುಳ್ಳಿರಿಸಿ ಊರಿನಲ್ಲೆಲ್ಲಾ ಮೆರವಣಿಗೆ ಮಾಡಿಸಿ ಹಿಂದಕ್ಕೆ ಕಳುಹಿಸಿದನು. ಷಹನ ಅಹಂಕಾರವನ್ನು ಮುರಿಯಲು ದೊಡ್ಡ ಸೈನ್ಯದೊಂದಿಗೆ ಬುಕ್ಕರಾಯನು ಆದವಾನಿಯ ಕೋಟೆಯನ್ನು ಹಿಡಿದು, ಮುದಗಲ್ ಕೋಟೆಯನ್ನು ಆಕ್ರಮಿಸಿ ಶತ್ರುಗಳನ್ನು ತುಂಡರಿಸಿದನು. ಹೀಗೆ ವಿಜಯನಗರದವರಿಗೂ ಬಹಮನೀಯವರಿಗೂ ಒಂಬತ್ತು ವರ್ಷಕಾಲ ಯುದ್ಧ ನಡೆಯಿತು. ಕೊನೆಗೆ ವಿಜಯನಗರವೇ ವಿಜಯವನ್ನು ಸಾಧಿಸಿತು.

ಇದೇ ರೀತಿಯಾಗಿ ಬುಕ್ಕರಾಯನು ದಕ್ಷಿಣದ ಕಡೆಯಲ್ಲಿಯೂ ವಿಜಯವನ್ನು ಗಳಿಸಿದನು. ಸಂಭವರಾಯನೆಂಬುವನು ಕಂಚೀ ಪ್ರದೇಶದಲ್ಲಿ ರಾಜಗಂಭೀರ ದುರ್ಗವನ್ನು ಆಶ್ರಯಿಸಿ ವಿಜಯನಗರಕ್ಕೆ ವಿರೋಧಿಯಾಗಿ ವರ್ತಿಸುತ್ತಿದ್ದನು. ಇಮ್ಮಡಿ ಸಂಗಮನ ಮಂತ್ರಿಯಾಗಿದ್ದ ಸಾಯಣಾಚಾರ್ಯರು ಹಿಂದೊಮ್ಮೆ ಅವನನ್ನು ದಂಡಿಸಿದ್ದರು. ಬುಕ್ಕರಾಯನ ಆಣತಿಯಂತೆ ಕುಮಾರ ಕಂಪಣ್ಣನು ದಂಡೆತ್ತಿ ಹೋಗಿ ಸಂಭವರಾಯನ ಸೊಕ್ಕು ಮುರಿದು

ಮಣ್ಣು ಮುಕ್ಕಿಸಿದನು. ಚಿದಂಬರ, ಶ್ರೀರಂಗ, ಮಧುರೆ, ಮುಂತಾದ ಪ್ರದೇಶಗಳಲ್ಲಿ ಮುಸಲ್ಮಾನರ ಪ್ರಾಬಲ್ಯವನ್ನು ಮುರಿದು ಮಧುರೆಯ ಸುಲ್ತಾನನನ್ನು ಜಯಿಸಿ ಕಂಪಣ್ಣನು ವಿಜಯನಗರದ ಕೀರ್ತಿಯನ್ನು ಹೆಚ್ಚಿಸಿದನು.

ವಿದ್ಯಾರಣ್ಯರು ಉತ್ತರದೇಶದ ತೀರ್ಥಯಾತ್ರೆಗೆ ಹೊರಟು ಕಾಶಿಯಲ್ಲಿ ಕೆಲವು ಕಾಲ ನಿಂತರು. ಬುಕ್ಕರಾಯನು ಅವರಿಗೆ ಬೇಕಾದ ಎಲ್ಲ ಸೌಕರ್ಯಗಳನ್ನೂ ಕಲ್ಪಿಸಿಕೊಟ್ಟನು.

ಬುಕ್ಕರಾಯನ ಪ್ರಭಾವದಿಂದ ವಿಜಯನಗರ ಸಾಮ್ರಾಜ್ಯ ವಿಸ್ತಾರವಾಯಿತು. ಜನರು ರಾಜನಿಷ್ಠರಾಗಿದ್ದರು. ವ್ಯಾಪಾರ ವ್ಯವಸಾಯಗಳಿಂದ ದೇಶದ ಐಶ್ವರ್ಯ ಹೆಚ್ಚಿತು. ರಾಜಧಾನಿಯ ಸೌಭಾಗ್ಯ ಇಮ್ಮಡಿಸಿತು.

ಕಾಶೀವಿಲಾಸ ಕ್ರಿಯಾಶಕ್ತಿ ಆಚಾರ್ಯರು ಬುಕ್ಕರಾಯನ ರಾಜಗುರುವಾಗಿದ್ದರು. ಶೃಂಗೇರಿಯ ವಿದ್ಯಾತೀರ್ಥ ಯತಿವರ್ಯರು ರಾಯನ ಪರಮಗುರುವಾಗಿದ್ದರು. ಅವನು ವಿದ್ಯಾರಣ್ಯರನ್ನು ಕಾಶಿಯಿಂದ ಬರಮಾಡಿಕೊಂಡು ರಾಜಧಾನಿಯಲ್ಲಿಯೇ ಇರಿಸಿಕೊಂಡನು. ಅವರು ಕುಲಗುರುವೂ ಹಿತಮಂತ್ರಿಯೂ ಆಗಿದ್ದರು. ಸಾಯಣಾಚಾರ್ಯರು ಇಮ್ಮಡಿ ಸಂಗಮನ ಆಸ್ಥಾನದಿಂದ ಬುಕ್ಕರಾಯನ ಆಸ್ಥಾನಕ್ಕೆ ಬಂದು ಗೌರವ ಪಡೆದರು. ಇವರಲ್ಲದೆ ಮಾರಪ್ಪನ ಮಂತ್ರಿಯಾದ ಚೌಂಡ ಮಾಧವನೂ, ಮುದ್ದ ದಂಡನಾಥನೂ ರಾಯನ ರಾಜಕೀಯ ಮಂತ್ರಿಗಳಾಗಿದ್ದರು. ರಾಜಾಶ್ರಯದಲ್ಲಿ ಸಾಹಿತ್ಯ ಬೆಳೆಯಿತು. ವಿದ್ಯಾರಣ್ಯರೂ ಸಾಯಣರೂ ರಾಜನ ಪ್ರೇರಣೆಯಿಂದ ನಾಲ್ಕು ವೇದಗಳಿಗೂ ಭಾಷ್ಯವನ್ನು ರಚಿಸುವ ಮಹಾಕಾರ್ಯವನ್ನು ಕೈಕೊಂಡರು. ಈ ಕಾರ್ಯ ಸುಮಾರು ಇಪ್ಪತ್ತು ವರ್ಷ ನಡೆಯಿತು. ಇದಕ್ಕೆ ಮಾಧವೀಯ ವೇದಾರ್ಥ ಪ್ರಕಾಶವೆಂದು ಹೆಸರು. **ಹಿಂದೂರಾಯ ಸುರತ್ರಾಣ**ನೆಂದು ಹೆಸರು ಪಡೆದಿದ್ದ ಬುಕ್ಕರಾಯನಿಗೆ **ವೈದಿಕಮಾರ್ಗ ಪ್ರವರ್ತಕ** ಎಂಬ ಕೀರ್ತಿಯೂ ಲಭಿಸಿತು. ರಾಯನು ಇಪ್ಪತ್ತು ವರ್ಷಕಾಲ ರಾಜ್ಯವಾಳಿದನು. ಬಳಿಕ ಆತನ ಮಗ ಇಮ್ಮಡಿ ಹರಿಹರನು ವಿಜಯನಗರ ಸಿಂಹಾಸನವನ್ನು ಏರಿದನು.

ವಿದ್ಯಾರಣ್ಯರು ಇಮ್ಮಡಿ ಹರಿಹರರಾಯನಿಗೆ ಕೆಲವು ಕಾಲ ಮಂತ್ರಿಯಾಗಿದ್ದರು. ಈ ರಾಯನು ವಿಜಯನಗರ ಸಾಮ್ರಾಜ್ಯದ ಸಾಮರ್ಥ್ಯವನ್ನೂ

ವೈಭವವನ್ನೂ ಹೆಚ್ಚಿಸಿದ. ಮಹಾರಾಜಾಧಿರಾಜ ರಾಜಪರಮೇಶ್ವರ ಎಂದು ಹೊಗಳಿಸಿಕೊಂಡನು. ವಿದ್ಯಾರಣ್ಯರು ಗೋವೆಯನ್ನು ವಿಜಯನಗರ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳಲು ಯುದ್ಧ ಹೂಡಿಸಿ ಜಯಶಾಲಿಗಳಾದರು. ಆಗ ರಾಯನ ಮಂತ್ರಿಯಾಗಿದ್ದ ವಸಂತ ಮಾಧವರಾಯನು ಅತುಲ ಪರಾಕ್ರಮದಿಂದ ಕಾದಿದನು. ಆಗ ವಿದ್ಯಾರಣ್ಯರು ಮಂತ್ರಿ ಪದವಿಯನ್ನು ಬಿಟ್ಟು ಶೃಂಗೇರಿಯ ಧರ್ಮ ಸಾಮ್ರಾಜ್ಯದ ಸಾರ್ವಭೌಮರಾಗಿ ಒಪ್ಪುತ್ತಿದ್ದರು. ಅವರು ಹನ್ನೆರಡು ವರ್ಷಕಾಲ ಗುರು ಪೀಠದಲ್ಲಿ ಮಂಡಿಸಿ ತರುವಾಯ ಕೈವಲ್ಯವನ್ನು ಹೊಂದಿದರು.

ವಿದ್ಯಾರಣ್ಯರಲ್ಲಿ ಇಮ್ಮಡಿ ಹರಿಹರರಾಯನಿಗೆ ವಿಶೇಷ ಭಕ್ತಿ ಗೌರವಗಳಿದ್ದುವು. ರಾಯನ ರಾಜಕಾರ್ಯಗಳಲ್ಲಿ ವಿದ್ಯಾರಣ್ಯರ ಮಂತ್ರಾಲೋಚನೆಯಿಂದ ಬಹಳ ಸಹಾಯವಾಗುತ್ತಿತ್ತು. ರಾಯನು ವಿದ್ಯಾರಣ್ಯಯತಿಗಳ ಅನುಗ್ರಹದಿಂದ ಅತ್ಯಂತ ಜ್ಞಾನಶಕ್ತಿಯನ್ನು ಪಡೆದನು. ಬುಕ್ಕರಾಯನ ಆಳಿಕೆಯಲ್ಲಿ ಆರಂಭವಾದ ವೇದಭಾಷ್ಯವನ್ನು ಈ ರಾಯನ ಆಳಿಕೆಯಲ್ಲಿ ಮಾಧವ, ಸಾಯಣರು ಮುಗಿಸಿದರು. ಹೀಗೆ ವಿದ್ಯಾರಣ್ಯರು ವಿಜಯನಗರ ರಾಜವಂಶದ ಮೊದಲನೆಯ ಮೂರುಮಂದಿ ಅರಸರ ಆಳಿಕೆಯಲ್ಲಿಯೂ ಮಂತ್ರಿಯಾಗಿದ್ದುಕೊಂಡು ಸಾಮ್ರಾಜ್ಯದ ಭದ್ರತೆಗೆ ತಳಹದಿಯನ್ನು ಹಾಕಿ ಅಜರಾಮರ ಕೀರ್ತಿಯನ್ನು ಗಳಿಸಿದರು. ಮುಂದೆ ಈ ಸಾಮ್ರಾಜ್ಯ ಸುಮಾರು ಇನ್ನೂರು ವರ್ಷಗಳ ಕಾಲ ಉಚ್ಛ್ರಾಯಸ್ಥಿತಿಯಲ್ಲಿದ್ದು ಹಿಂದೂ ಧರ್ಮ ಮತ್ತು ಸಂಸ್ಕೃತಿಗಳನ್ನು ಪರಿಪೋಷಿಸಿತು.*

---

*ದಯೆಯಿಟ್ಟು ಅನುಬಂಧವನ್ನು ನೋಡಿ.

# ಎಂಟನೆಯ ಅಧ್ಯಾಯ

## ಸನಾತನ ಧರ್ಮೋಜ್ಜೀವನ, ಸಾಹಿತ್ಯ ಪರಿಪೋಷಣೆ.

ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ ।
ಬೌದ್ಧಾ ಬುದ್ಧ ಇತಿ ಪ್ರಮಾಣ ಪಟವಃ ಕರ್ತೇತಿ ನೈಯಾಯಿಕಾಃ ॥
ಅರ್ಹಶ್ಚೇತಿ ಹ ಜೈನ ಶಾಸನಪರಾಃ ಕರ್ಮೇತಿ ಮೀಮಾಂಸಕಾಃ ।
ಸೋಽಯಂವೋ ವಿದಧಾತು ವಾಂಛಿತಫಲಂ ಶ್ರೀಕೇಶವಃ ಸರ್ವದಾ ॥

—ಶಾಸನವಾಣಿ.

ವಿದ್ಯಾರಣ್ಯರು ಲೌಕಿಕ ಸಾಮ್ರಾಜ್ಯವನ್ನು ಸ್ಥಾಪಿಸಲು ನಿರಂತರವೂ ಶ್ರಮಿಸಿ ಕೃತಕಾರ್ಯರಾದರು. ಅವರು ರಾಜ್ಯಬಲದಿಂದ ಸನಾತನಧರ್ಮೋಜ್ಜೀವನವನ್ನು ಸಾಧಿಸಿದರು. ಸಾಹಿತ್ಯ ಪರಿಪೋಷಣೆಯನ್ನು ಮಾಡಿದರು. ಪರಧರ್ಮೀಯರ ಪ್ರಾಬಲ್ಯದಿಂದ ಕಳೆಗುಂದಿ ಹೋಗುತ್ತಿದ್ದ ಸನಾತನ ಧರ್ಮವನ್ನು ಪರಿಪೋಷಿಸಿ, ಧರ್ಮ ಜಾಗೃತಿಯನ್ನುಂಟುಮಾಡಿದರು. ಧರ್ಮಾಶ್ರಯದಿಂದಲೇ ಈ ಜಗತ್ತು ನಿಂತಿದೆ. ಧರ್ಮ ಬಾಹಿರವಾದ ಯಾವ ಜನಾಂಗವೂ ಬಾಳುವಂತಿಲ್ಲ. ಧರ್ಮಭ್ರಷ್ಟನಾದಮೇಲೆ ಮನುಷ್ಯನಿಗೆ ಶ್ರೇಯಸ್ಸಿಲ್ಲ. ಆರ್ಯಮಹರ್ಷಿಗಳು ತೋರಿಸಿರುವ ಧರ್ಮಪಥದಲ್ಲಿ ನಡೆಯುವುದೇ ಮನುಷ್ಯನ ಕರ್ತವ್ಯ. ಜನ ಸಾಮಾನ್ಯವನ್ನು ಸರಿಯಾದ ಮಾರ್ಗದಲ್ಲಿ ಒಯ್ಯಬೇಕಾದರೆ ಮಹಾಪುರುಷರು ಆದರ್ಶಪ್ರಾಯರಾಗಿ ನಿಲ್ಲಬೇಕು. ನುಡಿದಂತೆ ನಡೆಯಬೇಕು. ಆಗ ಲೋಕ ಅವರನ್ನು ಅನುಸರಿಸುತ್ತದೆ. ಪರೋಪಕಾರ ಬುದ್ಧಿ, ಸದಾಚಾರ, ದೈವಭಕ್ತಿ, ಗುರುಭಕ್ತಿ, ರಾಜನಿಷ್ಠೆ, ಆತ್ಮ ತತ್ತ್ವಪರಿಜ್ಞಾನ, ಭೂತದಯೆ, ಧರ್ಮಶ್ರದ್ಧೆ, ಪರ ಧರ್ಮಸಹಿಷ್ಣುತೆ, ಈ ಮುಂತಾದ ಸುಗುಣಗಳು ಜನರಲ್ಲಿ ರೂಢಮೂಲವಾಗಿ ನೆಲಸಬೇಕಾದರೆ, ಮಹಾ ಪುರುಷರು ಮಾರ್ಗದರ್ಶಕರಾಗಿ ನಿಲ್ಲಬೇಕು.

ಯದ್ಯದಾಚರತಿ ಶ್ರೇಷ್ಠಃ ತತ್ತ ದೇವೇತರೋ ಜನಃ ।
ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥

ಎಂಬ ಧರ್ಮರಹಸ್ಯವನ್ನು ತಿಳಿದಿದ್ದ ವಿದ್ಯಾರಣ್ಯರು ಧರ್ಮೋದ್ಧಾರಕಾರ್ಯಗಳನ್ನು ನಡೆಯಿಸುತ್ತಿದ್ದರು.

ರಾಜಾಶ್ರಯದಲ್ಲಿ ಧರ್ಮೋದ್ಧಾರವನ್ನು ಮಾಡಲು ಅವರು ಎಲ್ಲ ಮತ -ಪಂಗಡಗಳವರ ದೇವಾಲಯಗಳಿಗೂ ದತ್ತಿಗಳನ್ನು ಬಿಟ್ಟುಕೊಟ್ಟರು. ದೇಶ ಮಧ್ಯದಲ್ಲಿ ಸತ್ರ, ಕೆರೆ, ಕಾಲುವೆಗಳನ್ನು ಕಟ್ಟಿಸಿ ಗುಂಡು ತೋಪುಗಳನ್ನೂ ಸಾಲುಮರಗಳನ್ನೂ ಹಾಕಿಸಿದರು.

ಅಗ್ರಹಾರಗಳನ್ನು ಕಟ್ಟಿಸಿ ವೇದಾಧ್ಯಯನಸಂಪನ್ನರಾದ ಬ್ರಾಹ್ಮಣರಿಗೆ ವಸತಿಗಳನ್ನು ಕಟ್ಟಿಸಿಕೊಟ್ಟರು. ಅವರ ಜೀವನ ಸುಗಮವಾಗಿ ನಡೆಯಲು ಅನುಕೂಲವಾಗುವಂತೆ ವ್ಯವಸಾಯದ ಭೂಮಿಗಳನ್ನು ಬಿಟ್ಟುಕೊಟ್ಟು ಅರ ಮನೆಯಿಂದ ಮಾಸಾಶನವನ್ನು ಸಲ್ಲಿಸುತ್ತಿದ್ದರು. ಒಂದೊಂದು ಮನೆಯೂ ವಿದ್ಯಾಲಯದಂತಿತ್ತು. ತರ್ಕ, ವ್ಯಾಕರಣ, ಜ್ಯೋತಿಷ, ವೇದಾಂತ ಮತ್ತು ಸಿದ್ಧಾಂತಗಳಲ್ಲಿ ನಿಷ್ಣಾತರಾದ ಪಂಡಿತರು ಶಿಷ್ಯರಿಗೆ ಪಾಠಪ್ರವಚನಗಳನ್ನು ಹೇಳಿಕೊಡುತ್ತ ನಾಡಿನಲ್ಲಿ ಸಾಹಿತ್ಯ ಸಂಪತ್ತನ್ನು ಹೆಚ್ಚಿಸುತ್ತಿದ್ದರು. ಶೃಂಗೇರಿ, ಕಂಚಿ, ಶ್ರೀರಂಗ, ಚಿದಂಬರ, ರಾಮೇಶ್ವರ ಮುಂತಾದ ಪುಣ್ಯ ಕ್ಷೇತ್ರಗ ಳಲ್ಲಿ ರಾಜರಿಂದ ಮಹಾದಾನಗಳನ್ನು ಮಾಡಿಸಿ ಧರ್ಮ ಜಾಗೃತಿಯು ನ್ನುಂಟುಮಾಡಿದರು. ವಿದ್ಯಾಸಂಪನ್ನರಾದ ಎಲ್ಲಮತದ ಪಂಡಿತರಿಗೂ ರಾಜಾ ಶ್ರಯದಲ್ಲಿ ತಕ್ಕ ಗೌರವವನ್ನೂ ಪ್ರೋತ್ಸಾಹವನ್ನೂ ಕೊಡುತ್ತಿದ್ದರು. ದಕ್ಷಿಣಾಪಥವೆಲ್ಲ ವಿಜಯನಗರ ಸಾಮ್ರಾಜ್ಯದ ಆಳಿಕೆಯಲ್ಲಿ ಸುಖದ ಬೀಡಾ ಯಿತು. ಇಮ್ಮಡಿ ಹರಿಹರರಾಯನಿಗೆ ವಿದ್ಯಾರಣ್ಯರು ಮಹಾಮಂತ್ರಿಯಾಗಿ ದ್ದರೂ ರಾಯನ ಮಂತ್ರಿಮಂಡಳದಲ್ಲಿ ಜೈನಮತದ ಬೈಚನೆಂಬುವನೂ ರಾಜನೀತಿಚತುರನಾದ ಮುದ್ದದಂಡನಾಥನೂ ಬಹಳ ಪ್ರಮುಖರಾಗಿ ದ್ದರು. ಎಲ್ಲ ಮತಧರ್ಮಗಳಲ್ಲಿಯೂ ಪರಸ್ಪರ ಪ್ರೇಮ ಒಡಮೂಡಿತ್ತು. ರಾಜ್ಯದಲ್ಲಿ ಶಾಂತಿಯೂ ಸುಸ್ಥಿತಿಯೂ ನೆಲೆಗೊಂಡವು. ದೇಶದಲ್ಲಿ ಸಸ್ಯ ಸಂಪತ್ತು ಹೆಚ್ಚಿತು. ನಾಗರಿಕತೆಯು ವಿಕಾಸಗೊಂಡಿತು. ರಾಜ್ಯದ ಆಡ ಳಿತ ಸುವ್ಯವಸ್ಥಿತವಾಯಿತು. ಜನತೆಗೆ ಜೀವನದ ಸೌಕರ್ಯಗಳು ಒದಗಿ ದುವು. ವ್ಯಾಪಾರವು ದಿನದಿನಕ್ಕೆ ಹೆಚ್ಚಿತು. ಜೀವನೋಪಾಯ ನಿರಾ ತಂಕವಾಗಿ ನಡೆಯುವುದಾದರೆ ಜನರಲ್ಲಿ ಧರ್ಮಬುದ್ಧಿಯೂ, ಆಸ್ತಿಕತೆಯೂ ವರ್ಧಿಸುತ್ತದೆ. ಅದರಂತೆಯೇ ನಾಡಿನಲ್ಲೆಲ್ಲಾ ಸನಾತನ ಧರ್ಮ ತೇಜಸ್ಸು ತುಂಬಿ ಮೆರೆಯುತ್ತಿತ್ತು. ದೇಶದಲ್ಲಿ ಪಟ್ಟಣಗಳ ಸಂಖ್ಯೆ ಹೆಚ್ಚಿತು.

ವಿಜಯನಗರವಲ್ಲದೆ, ದ್ವಾರಸಮುದ್ರ, ಪೆನಗೊಂಡ, ಉದಯಗಿರಿ, ಬಂಕಾಪುರ ಮೊದಲಾದ ಪಟ್ಟಣಗಳು ಉತ್ಕರ್ಷವನ್ನು ಹೊಂದಿದುವು. ಕಂಚಿ ಪ್ರಾಂತ ಸಾಮ್ರಾಜ್ಯದ ಪ್ರಮುಖ ನಾಡಾಯಿತು. ಅದು ಕನ್ನಡನಾಡಿಗೆ ಉಪರಾಜಧಾನಿಯೆನಿಸಿತು. ಆ ಕಾಲದಲ್ಲಿ ಕಂಚಿ ಪಟ್ಟಣವೆಂದರೆ ಪಂಡಿತೋತ್ತಮರ ತವರುಮನೆಯಾಯಿತು. ಅಲ್ಲಿರುವ ವರದರಾಜಸ್ವಾಮಿ ದೇವಾಲಯ ವೈಷ್ಣವ ಧರ್ಮಕ್ಷೇತ್ರವಾದಂತೆಯೇ ಏಕಾಂಮ್ರನಾಥೇಶ್ವರನ ದೇವಾಲಯ ಶೈವ ಧರ್ಮಕ್ಷೇತ್ರವಾಯಿತು.

ಮುಸಲ್ಮಾನರು ಚಿದಂಬರಂ, ಶ್ರೀರಂಗ ಮತ್ತು ಮಧುರೆ ಕ್ಷೇತ್ರಗಳಲ್ಲಿ ನಡಸುತ್ತಿದ್ದ ಅಮಾನುಷ ಕೃತ್ಯಗಳನ್ನು ತಡೆಯಲು ದಂಡನಾಯಕ ಗೋಪಣಾರ್ಯನನ್ನು ಕಳುಹಿಸಿದರು. ಆತನು ಶತ್ರುಗಳನ್ನು ಅಲ್ಲಿಂದ ಓಡಿಸಿ ತಿರುಪತಿಯಲ್ಲಿದ್ದ ಶ್ರೀರಂಗನಾಧ ಮೂರ್ತಿಯನ್ನು ತಂದು ಪುನಃ ಶ್ರೀರಂಗದಲ್ಲಿ ಪ್ರತಿಷ್ಠಾಪನೆ ಮಾಡಿದನು.

ವಿಜಯನಗರರಾಜ್ಯದಲ್ಲಿ ಅನೇಕ ಜಾತಿ, ಮತ, ಪಂಥಗಳಿಗೆ ಸೇರಿದ ಜನರು ನೆಲೆಸಿದ್ದರು. ಅವರೆಲ್ಲರೂ ಪರಸ್ಪರ ಸಹೋದರ ಭಾವದಿಂದ ವರ್ತಿಸುತ್ತಿದ್ದರು. ರಾಜರು ಎಲ್ಲರನ್ನೂ ಒಂದೇ ಸಮನಾಗಿ ಕಾಣುತ್ತಿದ್ದರು. ಒಮ್ಮೆ ಜೈನ ಮತ್ತು ರಾಮಾನುಜ ಮತೀಯರಲ್ಲಿ ಕಲಹ ಉಂಟಾಯಿತು. ಬುಕ್ಕರಾಯನಿಗೆ ದೂರು ಬಂತು. ರಾಯನು ಉಭಯ ಮತದ ಮುಖಂಡರನ್ನೂ ತನ್ನ ಓಲಗಕ್ಕೆ ಕರೆಸಿದನು. ಈ ಸಭೆಗೆ ಅಂತ್ಯಜರಾದ ತಿರುಕುಲ ಜಾಂಬವ ಕುಲದ ಜನರೂ ಪ್ರಮುಖ ಶ್ರೀವೈಷ್ಣವಾಚಾರ್ಯರೂ ಜೈನ ಮಹಾಜನರೂ ಬಂದಿದ್ದರು. ಆಗ ರಾಯನು ಜೈನರ ಕೈಯನ್ನು ಶ್ರೀವೈಷ್ಣವರ ಕೈಯಲ್ಲಿ ಕೊಟ್ಟು ಗದ್ಗದ ಕಂಠದಿಂದ "ವೈಷ್ಣವರೂ ಜೈನರೂ ಒಂದು. ವೈಷ್ಣವ ದರ್ಶನದಲ್ಲಿಯೂ ಜೈನ ದರ್ಶನದಲ್ಲಿಯೂ ಭೇದವಿಲ್ಲ. ಜೈನರು ಎಂದಿನಂತೆ ಪಂಚಮಹಾವಾದ್ಯ, ಕಳಸ ಮುಂತಾದ ಧಾರ್ಮಿಕ ಮರ್ಯಾದೆಗಳಿಗೆ ಬಾಧ್ಯಸ್ಥರು. ಜೈನಮತದ ಹಾನಿ ವೃದ್ಧಿಯೆಂದರೆ ಶ್ರೀವೈಷ್ಣವ ಮತದ ಹಾನಿ ವೃದ್ಧಿಯೆಂದು ಶ್ರೀವೈಷ್ಣವರು ಭಾವಿಸಿ, ರಾಜ್ಯದಲ್ಲಿರುವ ಎಲ್ಲ ಜೈನಬಸದಿಗಳಲ್ಲಿ ಇದರಂತೆ ಶಾಸನಗಳನ್ನು ನಿಲ್ಲಿಸಬೇಕು ; ಚಂದ್ರ ಸೂರ್ಯರಿರುವವರೆಗೆ ಜೈನ ಮತವನ್ನು ಸಂರಕ್ಷಿಸುವ ಹೊಣೆ ಶ್ರೀ

ವೈಷ್ಣವರ ಮೇಲೆ ; ಶ್ರೀ ವೈಷ್ಣವರೂ ಜೈನರೂ ಭಿನ್ನರಲ್ಲ, ಇಬ್ಬರ ದೇಹವೂ ಒಂದೇ; ತಿರುಪತಿಯ ಶ್ರೀವೈಷ್ಣವಾಚಾರ್ಯರು ಜೈನರ ಕರ ಭಾರದಿಂದ ಶ್ರವಣಬೆಳುಗೊಳ ಕ್ಷೇತ್ರದಲ್ಲಿ ಕಾವಲನ್ನಿರಿಸಿ ಜೈನ ಬಸದಿಗಳನ್ನು ಜೀರ್ಣೋದ್ಧಾರ ಮಾಡಬೇಕು" ; ಎಂದು ರಾಜಗಂಭೀರ ವಾಣಿಯಿಂದ ನುಡಿದು ಎರಡು ಪಂಗಡಗಳವರಲ್ಲಿಯೂ ಚಿರಸ್ನೇಹ ಸೌಹಾರ್ದ್ರತೆಗಳನ್ನುಂಟುಮಾಡಿದನು. ಎಂಥ ಧರ್ಮಸಹಿಷ್ಣುತೆ! ಇಂಥ ಸರ್ವಧರ್ಮ ಸಮನ್ವಯದೃಷ್ಟಿ ಪ್ರಸರಿಸುವಂತೆ ರಾಜ್ಯದ ಅಂತಃಪ್ರಾಣವಾಗಿ ನಿಂತಿರುವ ವಿದ್ಯಾರಣ್ಯರ ವಿಶಾಲ ಮನೋಭಾವನೆಗೆ ಎಣೆಯುಂಟೆ! ರಾಜ್ಯದಲ್ಲಿ-ಎಲ್ಲೆಲ್ಲಿಯೂ ಧಾರ್ಮಿಕ ಸಮಾರಂಭಗಳು ವೈಭವದಿಂದ ನಡೆಯಲಾರಂಭಿಸಿದುವು. ಹಿಂದೂ ಧರ್ಮ ಮತ್ತು ಸಂಸ್ಕೃತಿ ಪುನರುಜ್ಜೀವನ ಹೊಂದಿದುವು.

ವಿದ್ಯಾರಣ್ಯರು ಹರಿಹರರಾಯ ಬುಕ್ಕರಾಯ ಮತ್ತು ಕೆಲವು ಕಾಲ ಇಮ್ಮಡಿ ಹರಿಹರರಾಯ ಈ ಮೂರು ಮಂದಿ ರಾಜರಿಗೆ ರಾಜಕೀಯ ಗುರುಗಳಾಗಿದ್ದರು. ಎಡೆತಡೆಯಿಲ್ಲದೆ ರಾಜ್ಯ ಸೂತ್ರಗಳನ್ನು ನಡೆಯಿಸಿದರೂ ಅವರು ಮಾತ್ರ ರಾಜ್ಯವೈಭವದಿಂದ ನಿರ್ಲಿಪ್ತರಾಗಿದ್ದರು. ಅವರು ಸನಾತನ ಧರ್ಮೋಜ್ಜೀವನಕ್ಕೆ ಬೇಕಾದ ಸಹಾಯ ಸಂಪತ್ತುಗಳನ್ನು ಒದಗಿಸಿದಂತೆಯೇ ಸಾಹಿತ್ಯದ ಬೆಳವಣಿಗೆಗೂ ಅಪಾರವಾದ ಪ್ರೋತ್ಸಾಹವನ್ನು ನೀಡಿದರು. ಸಂಸ್ಕೃತ ವಿದ್ಯಾಭ್ಯಾಸ ದಕ್ಷಿಣಾಪಥದಲ್ಲಿ ಹೆಚ್ಚು ಹೆಚ್ಚು ಪ್ರಚಾರಕ್ಕೆ ಬಂತು. ಆ ಕಾಲದಲ್ಲಿ ಜ್ಯೋತಿಷ, ದರ್ಶನ, ಧರ್ಮಶಾಸ್ತ್ರ, ವ್ಯಾಕರಣ ಮತ್ತು ವೈದ್ಯಗ್ರಂಥಗಳು ಹುಟ್ಟಿದುವು. ವಿದ್ಯಾರಣ್ಯರೂ ಸಾಯಣಾಚಾರ್ಯರೂ ವೈದಿಕ ಸಾಹಿತ್ಯವನ್ನೂ, ಧಾರ್ಮಿಕ ಸಾಹಿತ್ಯವನ್ನೂ ವಿಪುಲವಾಗಿ ಬೆಳೆಯಿಸಿದರು. ಎಲ್ಲ ಶಾಸ್ತ್ರಗಳನ್ನು ಕುರಿತು ಇವರು ಗ್ರಂಥಗಳನ್ನು ಬರೆದಿರುವರು.

ವಿದ್ಯಾರಣ್ಯರು ಪೂರ್ವಾಶ್ರಮದಲ್ಲಿಯೇ ಅನೇಕ ಉದಾತ್ತ ಗ್ರಂಥಗಳನ್ನು ರಚಿಸಿದರು. ಇವರು ವೇದಗಳಿಗೆ ಭಾಷ್ಯಗಳನ್ನು ಬರೆದು, ಷಡ್ದರ್ಶನಗಳಿಗೆ ಟೀಕೆಗಳನ್ನು ಬರೆದರು. ಇವರ ಗ್ರಂಥಗಳಲ್ಲಿ ವಿಲಕ್ಷಣವಾದ ವಿಷಯ ವೈಚಿತ್ರ್ಯ ಕಂಡುಬರುತ್ತದೆ. ಅವರ ಗ್ರಂಥಗಳು ಈಗ ಆಯಾ ಶಾಸ್ತ್ರಗಳಲ್ಲಿ ಪ್ರಮಾಣಭೂತವಾಗಿವೆ. ಅವರು ಬರೆದ ವೇದಭಾಷ್ಯಾದಿ

ಗ್ರಂಥಗಳನ್ನು ಮೆಚ್ಚಿ ಆಗ ಕಾಶೀ ಕ್ಷೇತ್ರದಲ್ಲಿದ್ದ ಪಂಡಿತ ಪ್ರವರರು ಅವರನ್ನು ಅತ್ಯಂತ ಗೌರವದಿಂದ ಮನ್ನಿಸಿ ಸತ್ಕರಿಸಿದರು. ಅದೇ ಕಾಲದಲ್ಲಿ ಅಕ್ಷೋಭ್ಯ ತೀರ್ಥ, ವೇದಾಂತ ದೇಶಿಕಾಚಾರ್ಯ, ಸುದರ್ಶನಭಟ್ಟ ಮುಂತಾದ ಮಹಾ ಪಂಡಿತರು ಪ್ರಸಿದ್ಧರಾಗಿದ್ದರು. ವಿದ್ಯಾರಣ್ಯರ ವಿದ್ಯಾವೈದುಷ್ಯವನ್ನು ಕಂಡು ಪಂಡಿತರು ತಲೆದೂಗುತ್ತಿದ್ದರು

ವಿದ್ಯಾರಣ್ಯರು ವೇದಗಳ ಬ್ರಾಹ್ಮಣಗಳನ್ನೂ ಎರಡು ಕಲ್ಪಸೂತ್ರಗಳನ್ನೂ ಮೀಮಾಂಸೆ ಮತ್ತು ವ್ಯಾಕರಣಗಳನ್ನೂ ವ್ಯಾಖ್ಯಾನಮಾಡಿ ಅವುಗಳಿಂದ ವೇದಾರ್ಥವನ್ನು ಸ್ಪಷ್ಟಪಡಿಸಿದ್ದಾರೆ. ಇವರು ರಚಿಸಿರುವ ಗ್ರಂಥರಾಶಿಯಲ್ಲಿ ಬಹುಭಾಗ ವ್ಯಾಖ್ಯಾನರೂಪವಾಗಿದೆ, ಇಲ್ಲವೆ, ವಿವರಣರೂಪವಾಗಿದೆ. ಅದರಿಂದ ಗದ್ಯ ಶೈಲಿ ಸುರೂಪವಾಗಿ ಬೆಳೆಯಿತು. ಸಂಸ್ಕೃತ ಗದ್ಯರೀತಿಯನ್ನು ಅವರು ಬಹಳ ಚೆನ್ನಾಗಿ ಹದಗೊಳಿಸಿ ಕೀರ್ತಿವಂತರಾದರು. ಅವರ ಕವಿತಾಶಕ್ತಿಯು ಅಗಾಧವಾದುದು. "ಶಂಕರ ವಿಜಯ" ಗ್ರಥದಲ್ಲಿ ಅವರು ತಮ್ಮ ಕವಿತಾ ವೈಖರಿಯನ್ನು ಪ್ರದರ್ಶಿಸಿದ್ದಾರೆ. ವೇದಾಂತಪರವಾದ ''ಪಂಚದಶಿ'' ಅನುಷ್ಟುಪ್ ಛಂದಸ್ಸಿನಲ್ಲಿದೆ. ವಿದ್ಯಾರಣ್ಯರ ಎಲ್ಲ ಗ್ರಂಥಗಳೂ ನಮಗೆ ಉಪಲಬ್ಧವಾಗಿಲ್ಲ.

ವಿದ್ಯಾರಣ್ಯರು ತಮ್ಮ ವಿದ್ಯಾಭ್ಯಾಸವನ್ನು ಮುಗಿಸಿದಮೇಲೆ, ರಾಜ್ಯಕಾರ್ಯಗಳಲ್ಲಿ ಪ್ರವಿಷ್ಟರಾಗುವುದಕ್ಕೆ ಮುಂಚೆ ಮನಃಸಂಸ್ಕಾರ ಪ್ರಧಾನವಾದ ಗಂಥಗಳನ್ನು ಬರೆದರು. ಸರ್ವದರ್ಶನಸಂಗ್ರಹ ಮತ್ತು ಶಾಂಕರ ದಿಗ್ವಿಜಯ ಈ ಎರಡು ಗ್ರಂಥಗಳನ್ನು ಅವರು ಈ ಅವಧಿಯಲ್ಲಿ ಬರೆದರು.

ಸರ್ವದರ್ಶನ ಸಂಗ್ರಹದಲ್ಲಿ ಚಾರ್ವಾಕ ಮತವನ್ನು ಹಿಡಿದು ಶಾಂಕರ ದರ್ಶನ ಪರ್ಯಂತ ಹದಿನಾರು ದರ್ಶನಗಳಿಗೆ ವ್ಯಾಖ್ಯಾನವನ್ನು ಬರೆದಿದ್ದಾರೆ. ಇದು ಗದ್ಯ ಪದ್ಯಾತ್ಮಕ ಗ್ರಂಥ. ವಿದ್ಯಾರಣ್ಯರು ತಮ್ಮ ಗುರು ವಿದ್ಯಾತೀರ್ಥರನ್ನು ಅವರ ಪೂರ್ವಾಶ್ರಮದ ಹೆಸರಾದ "ಸರ್ವಜ್ಞವಿಷ್ಣು" ಎಂಬ ನಾಮದಿಂದ ಈ ಗ್ರಂಥದಲ್ಲಿ ನಮಸ್ಕರಿಸಿದ್ದಾರೆ.

"ಶಾಂಕರ ದಿಗ್ವಿಜಯ"ದಲ್ಲಿ ಶಂಕರಾಚಾರ್ಯರ ಜೀವನಪರಿಚಯವನ್ನು ಸುರಸ ಶೈಲಿಯಿಂದ ನಿರೂಪಿಸಿದ್ದಾರೆ. ಕವಿತಾ ಕಲ್ಪಲತೆಯಲ್ಲಿ ಕಂಗೊಳಿಸುವ ಶಾಂಕರ ದಿಗ್ವಿಜಯವೆಂಬ ಹೂಗೊಂಚಲನ್ನು ಗುರುಚರಣಕ್ಕೆ ಅರ್ಪಿ

ಸುತ್ತೇನೆ – ಎಂದು ವಿದ್ಯಾರಣ್ಯರು ಗ್ರಂಥಾರಂಭದಲ್ಲಿ ಚಾತುರ್ಯದಿಂದ ಹೇಳಿದ್ದಾರೆ. ಅವರು ಪೂರ್ಣ ವಿದ್ಯಾಪಾರಂಗತರಾದರೂ ವಿನಯ ಸಂಪನ್ನರು. ತಮ್ಮ ವಿನಯವನ್ನು ರಸಿಕರು ಮೆಚ್ಚುವಂತೆ ಈ ಗ್ರಂಥದಲ್ಲಿ ಹೇಳಿದ್ದಾರೆ. "ಶಂಕರರಂಥ ಮಹಾತ್ಮರೆತ್ತ ! ಅಲ್ಪಜ್ಞನಾದ ನಾನೆತ್ತ ? ಆ ಗುರುದೇವನ ವರ್ಣನೆಗೆ ನನ್ನನ್ನು ತೊಡಗಿಸಿ ಬಳಲಿಸಬೇಡ. ಇದುವರೆಗೆ ನನಗೆ ಬಂದಿರ ತಕ್ಕ ಕೀರ್ತಿಯೆಲ್ಲ ಮಾಸಿಹೋಗುವುದು."—ಎಂದು ಭಯಪಟ್ಟು ಸರಸ್ವತಿಯು ವಿದ್ಯಾರಣ್ಯರನ್ನು ಬಿಟ್ಟು ದೂರ ಸರಿಯಲು ಯತ್ನಿಸಿದಳಂತೆ. ಆಗ ಕವಿಗಳೆಲ್ಲರೂ ಆಕೆಯನ್ನು ಪ್ರಾರ್ಥಿಸಿಕೊಂಡು ನಿಲ್ಲಿಸಿ ಗುರು ಸ್ತುತಿಯಲ್ಲಿ ಪ್ರೇರಿಸಿದರಂತೆ. ತಮಗೆ ಅಸಾಧ್ಯವಾದ ಮಹಾಜೀವನ ವೊಂದನ್ನು ತಾವು ಕಾವ್ಯರೂಪವಾಗಿ ಚಿತ್ರಿಸುತ್ತೇವೆಂದೂ, ತಮಗೆ ಆ ಶಕ್ತಿಯಿಲ್ಲದಿದ್ದರೂ ಸಹೃದಯರ ಪ್ರೋತ್ಸಾಹದಿಂದ ಕಾವ್ಯರಚನೆಗೆ ಕೈ ಹಾಕಿರುತ್ತೇವೆಂದೂ ತಿಳಿಸಿದ್ದಾರೆ.

ವಿದ್ಯಾರಣ್ಯರು ರಾಜಕಾರ್ಯಗಳಲ್ಲಿ ಮಗ್ನರಾದಮೇಲೆ ವ್ಯವಹಾರ ಪ್ರಧಾನವಾದ ಗ್ರಂಥಗಳನ್ನು ಬರೆದರು. ಈ ಗ್ರಂಥಗಳಲ್ಲಿ ಅವರು ಆಶ್ರಯ ದಾತನಾದ ರಾಜನನ್ನು ಪ್ರಶಂಶಿಸಿರುತ್ತಾರೆ. ಪರಾಶರ ಸ್ಮೃತಿ ವ್ಯಾಖ್ಯಾನ, ಮನುಸ್ಮೃತಿ ವ್ಯಾಖ್ಯಾನ, ಚತುರ್ವೇದ ಭಾಷ್ಯ, ಬ್ರಾಹ್ಮಣ ಭಾಷ್ಯ, ಜೈಮಿನೀಯ ನ್ಯಾಯಮಾಲಾವಿಸ್ತರ, ವೈಯಾಸಿಕ ನ್ಯಾಯಮಾಲಾ, ಕಾಲ ಮಾಧವ, ವ್ಯವಹಾರ ಮಾಧವ, ಮಾಧವೀಯ ಧಾತು ವೃತ್ತಿ, ವಿವರಣ ಪ್ರಮೇಯ, ಬ್ರಹ್ಮವಿದಾಶೀರ್ವಾದ ಪದ್ಧತಿ, ಸೂತ ಸಂಹಿತಾ ಅಥವಾ ಬ್ರಹ್ಮಗೀತಾ—ಈ ಹನ್ನೆರಡು ಗ್ರಂಥಗಳು ವ್ಯವಹಾರ ಧರ್ಮವನ್ನು ಬೋಧಿಸುತ್ತವೆ. ಒಂದೊಂದು ಗ್ರಂಥ ಹೃದಯವನ್ನೂ ವಿವರಿಸಲು ಸಾಧ್ಯವಿಲ್ಲ.

ವೇದ ಬ್ರಾಹ್ಮಣಭಾಷ್ಯಗಳನ್ನು ರಚಿಸುವ ಕಾರ್ಯದಲ್ಲಿ ಸಾಯಣಾ ಚಾರ್ಯರೇ ಮುಖ್ಯ ಸಹಾಯಕರು. ಇವರಲ್ಲದೆ ಇಪ್ಪತ್ತುನಾಲ್ಕು ಜನ ಪಂಡಿತರೂ ಶ್ರೋತ್ರೀಯರೂ ಅನೇಕ ವಿದ್ವಾಂಸರೂ ಈ ಕೆಲಸದಲ್ಲಿ ನಿಯೋಜಿತರಾಗಿದ್ದರು. ವಿದ್ಯಾರಣ್ಯರ ನೇತೃತ್ವದಲ್ಲಿ ಅವರೆಲ್ಲರ ಸಹಾಯ ದಿಂದ ಈ ಭಾಷ್ಯಗಳು ಸಿದ್ಧವಾದುವು. ಋಕ್, ಯಜುರ್ ಸಾಮವೇದ

ಗಳ ಭಾಷ್ಯಗಳು ಬುಕ್ಕರಾಯನ ಕಾಲದಲ್ಲಿಯೂ ಅಥರ್ವಣ ವೇದದ ಭಾಷ್ಯ ಎರಡನೆಯ ಹರಿಹರನ ಆಳಿಕೆಯಲ್ಲಿಯೂ ಪರಿಸಮಾಪ್ತಿಯಾದುವು. ಎಲ್ಲ ವರ್ಣಾಶ್ರಮ ಧರ್ಮದವರ ಉಪಯೋಗಕ್ಕಾಗಿ ಪುರಾಣ ಸಾರವಾದ ಪರಾಶರ ಸ್ಮೃತಿಗೆ ವ್ಯಾಖ್ಯಾನವನ್ನು ಬರೆದು, ಆಮೇಲೆ ಜೈಮಿನೀಯ ನ್ಯಾಯ ಮಾಲಾ ವಿಸ್ತರವನ್ನು ಬರೆದರು. ಇದನ್ನು ಬುಕ್ಕರಾಯನಿಗೆ ಕಾಣಿಕೆಯಾಗಿ ಒಪ್ಪಿಸಿದರು. ಸೂತ ಸಂಹಿತಾ ಅಥವಾ ಬ್ರಹ್ಮಗೀತಾ ಗ್ರಂಥವನ್ನು ಮಾಧವ ಮಂತ್ರಿ ರಚಿಸಿರುವಂತೆ ಕಂಡುಬರುತ್ತದೆ. ಇವನು ಬುಕ್ಕರಾಯನ ಮಂತ್ರಿಗಳಲ್ಲಿ ಒಬ್ಬನು. ಈತನು ಒಳ್ಳೆಯ ವಿದ್ವಾಂಸ, ಶೂರ, ರಾಜಕಾರ್ಯ ಧುರಂಧರ ಮತ್ತು ಸಮರ್ಥ ಗ್ರಂಥಕಾರನೂ ಆಗಿದ್ದನು. ಅನೇಕ ದಾನಪತ್ರಗಳಲ್ಲಿ ಈತನ ಹೆಸರು ಬರುತ್ತದೆ. ಅನೇಕರು ಮಾಧವಮಂತ್ರಿಯನ್ನು ಮಾಧವ–ವಿದ್ಯಾರಣ್ಯರೆಂದು ಭ್ರಾಂತಿ ಪಡುತ್ತಾರೆ. ಇವನು ಸಾರಸ್ವತ ಬ್ರಾಹ್ಮಣ. ಇವನು ಕಾಶ್ಮೀರದೇಶದಿಂದ ಅನೇಕ ವಿದ್ವಾಂಸರನ್ನು ಕರೆಯಿಸಿ ಬುಕ್ಕರಾಯನಿಂದ ಅವರಿಗೆ ಅಗ್ರಹಾರಗಳನ್ನು ಕೊಡಿಸಿದನು.

ವಿದ್ಯಾರಣ್ಯರು ಜ್ಞಾನ ಮತ್ತು ವೈರಾಗ್ಯಪರವಾದ ಗ್ರಂಥಗಳನ್ನೂ ಬರೆದರು. ಜೀವನ್ಮುಕ್ತ ವಿವೇಕ, ವೇದಾಂತಪಂಚದಶಿ, ಅನುಭೂತಿ ಪ್ರಕಾಶ, ದಶೋಪನಿಷದ್ದೀಪಿಕಾ, ಅಪರೋಕ್ಷಾನುಭೂತಿ ಮತ್ತು ಅನೇಕ ಚಿಕ್ಕಚಿಕ್ಕ ಸ್ತೋತ್ರಗಳನ್ನೂ ಬರೆದಿದ್ದಾರೆ. ಬುಕ್ಕರಾಯನ ಇಷ್ಟದಂತೆ ವಿದ್ಯಾರಣ್ಯರು ಜೀವನ್ಮುಕ್ತಿ ವಿವೇಕವನ್ನು ಉಪನಿಷತ್ತುಗಳು, ಭಾಗವತ, ಗೀತೆ ಮತ್ತು ಯೋಗವಾಸಿಷ್ಠ–ಮೊದಲಾದ ಗ್ರಂಥಗಳ ಆಧಾರದ ಮೇಲೆ ರಚಿಸಿದರು. ವೇದಾಂತ ಪಂಚದಶಿ ಎಂಬುದು ವೇದಾಂತ ಗ್ರಂಥ. ಇದರಲ್ಲಿ ಹದಿನೈದು ಪ್ರಕರಣಗಳಿವೆ. ಇದಕ್ಕೆ "ಬ್ರಹ್ಮಾನಂದ" ಎಂಬ ಹೆಸರೂ ಇದೆ. ಈ ಗ್ರಂಥಕ್ಕೆ ತಾತ್ಪರ್ಯ ದೀಪಿಕೆಯೆಂಬ ವ್ಯಾಖ್ಯಾನವನ್ನು ರಾಮಕೃಷ್ಣ ಪಂಡಿತನು ಬರೆದಿದ್ದಾನೆ. ವಿದಾರಣ್ಯರು ಈ ಗ್ರಂಥದ ಮೊದಲನೆಯ ಆರು ಪ್ರಕರಣಗಳನ್ನು ಬರೆದರೆಂದೂ ಭಾರತೀ ತೀರ್ಥರು ಉಳಿದ ಪ್ರಕರಣಗಳನ್ನು ಬರೆದರೆಂದೂ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ವಿದ್ಯಾರಣ್ಯರು "ದೇವ್ಯಪರಾಧ ಕ್ಷಮಾಪನಸ್ತೋತ್ರ, ಗುರುರತ್ನ ಮಾಲಾ,

ಶಿವಾಪರಾಧಕ್ಷಮಾಪನ ಸ್ತೋತ್ರ ಮುಂತಾದ ಭಕ್ತಿಪ್ರಧಾನ ಸ್ತೋತ್ರಗ್ರಳನ್ನು ಬರೆದು ಲೋಕೋಪಕಾರ ಮಾಡಿದ್ದಾರೆ.

ಸಂಸ್ಕೃತ ವಾಙ್ಮಯ ಪ್ರಪಂಚದಲ್ಲಿ ವಿದ್ಯಾರಣ್ಯರು ಧ್ರುವತಾರೆಯಂತಿದ್ದಾರೆ. ಅವರು ಕೇವಲ ಸಂಸ್ಕೃತ ಸಾಹಿತ್ಯವನ್ನು ಮಾತ್ರವೇ ಊರ್ಜಿತಗೊಳಿಸಲಿಲ್ಲ. ಕನ್ನಡ ಸಾಹಿತ್ಯಕ್ಕೂ ಅವರಕಾಲದಲ್ಲಿ ಯಥೇಚ್ಛವಾದ ರಾಜಾಶ್ರಯ ದೊರೆಯಿತು. ಬುಕ್ಕರಾಯನ ಸೊಸೆ ಮತ್ತು ಕಂಪಣ್ಣನ ಅರ್ಧಾಂಗಿ ಗಂಗಾದೇವಿ ''ವೀರ ಕಂಪರಾಯ ಚರಿತಂ" ಎಂಬ ಸಂಸ್ಕೃತ ಕಾವ್ಯವನ್ನು ಬರೆದಳು. ರಾಜಗಂಭೀರ ದುರ್ಗದ ಸಂಭವರಾಯನಮೇಲೆ ಕಂಪಣ್ಣನು ನಡೆಸಿದ ದಂಡಯಾತ್ರೆಯ ವೃತ್ತಾಂತವನ್ನು ಈ ಕಾವ್ಯದಲ್ಲಿ ಬಣ್ಣಿಸಿದ್ದಾಳೆ. ಈ ಕಾಲದಲ್ಲಿ ಅನೇಕ ವೀರಶೈವ, ಜೈನ, ಬ್ರಾಹ್ಮಣ ಸಾಹಿತ್ಯ ನಿಪುಣರು ಕನ್ನಡದಲ್ಲಿ ಗ್ರಂಥಗಳನ್ನು ಬರೆದರು. ವೀರಶೈವಮತ ಪ್ರಸಾರಕ ಗ್ರಂಥಗಳು ಹೆಚ್ಚಾಗಿ ಹುಟ್ಟಿದವು. ಭೀಮ ಕವಿಯ ಬಸವ ಪುರಾಣ, ಬಾಹುಬಲ ಪಂಡಿತನ ಧರ್ಮನಾಥ ಪುರಾಣ, ಮತ್ತು ಮಂಗರಾಜನ ಖಗೇಂದ್ರ ಮಣಿದರ್ಪಣ ಮುಂತಾದುವು ಮುಖ್ಯ ಕನ್ನಡ ಗ್ರಂಥಗಳು. ಕನ್ನಡ ಭಾಷೆಯು ಈ ಕಾಲದಲ್ಲಿ ಪ್ರಾಶಸ್ತ್ಯವನ್ನು ಪಡೆಯಿತು. ಕನ್ನಡದಲ್ಲಿ ಅನೇಕ ಶಿಲಾಶಾಸನಗಳು ಹುಟ್ಟಿದುವು. ಧಾರ್ಮಿಕ ಮತ್ತು ಲೌಕಿಕ ಈ ಎರಡೂ ಬಗೆಯ ಸಾಹಿತ್ಯ ವಿಸ್ತಾರವಾಯಿತು. ಕಾವ್ಯ, ವೇದಾಂತ, ವ್ಯಾಕರಣ, ಅಲಂಕಾರ, ಸಂಗೀತ ಮೊದಲಾದ ಶಾಸ್ತ್ರೀಯಗ್ರಂಥ ರಚನೆಗೆ ವಿಶೇಷ ಪ್ರೋತ್ಸಾಹ ದೊರೆಯಿತು. ಕಲಾ ಜೀವನ ಉನ್ನತವಾಯಿತು. ಶಿಲ್ಪ ಕಲೆಯಲ್ಲಿ ಒಂದು ಹೊಸಮಾರ್ಗ ಗೋಚರವಾಯಿತು. ಶೃಂಗೇರಿಯ ವಿದ್ಯಾಶಂಕರ ದೇವಸ್ಥಾನ ಆ ಕಾಲದ ಶಿಲ್ಪಕಲಾ ವೈಭವಕ್ಕೆ ಸಾಕ್ಷಿಯಾಗಿದೆ. ಚಿತ್ರಕಲೆ ಮತ್ತು ಸಂಗೀತ ಕಲೆ ಅಭಿವೃದ್ಧಿಗೆ ಬಂದುವು.

"ಜನಾಂಗದ ಜೀವಾಳ ಪ್ರಭುಶಕ್ತಿ ; ಸಂಸ್ಕೃತಿಯು ಅದರ ಜೀವನ" ವಿಜಯನಗರ ಉದಯಿಸಿ ಸ್ವರಾಜ್ಯಸ್ಥಾಪನೆಯಾಯಿತು. ಸಂಸ್ಕೃತಿಯು ಬೆಳೆಯಿತು. ಈ ಮಹೋನ್ನತ ಧ್ಯೇಯವನ್ನು ಸಾಧಿಸುವುದರಲ್ಲಿ ವಿದ್ಯಾರಣ್ಯರು ಬಹುಮಟ್ಟಿಗೆ ನೆರವಾದರು. ಧರ್ಮೋನ್ನತಿಗೂ, ಶಾಸ್ತ್ರಾಭಿವೃದ್ಧಿಗೂ ಆವಶ್ಯಕವಾದ ಜನಪದ ವ್ಯವಸ್ಥೆಯನ್ನು ನಡೆಯಿಸುತ್ತಿದ್ದರು.

ಅವರು ಹೆಸರಿಗೆ ಮಾತ್ರ ಮಂತ್ರಿಯಾಗಿಯೂ ರಾಜಗುರುವಾಗಿಯೂ ಇದ್ದವರಲ್ಲ. ಪ್ರತಿದಿನದ ರಾಜಕಾರ್ಯಗಳಲ್ಲಿ ಅವರ ಮಂತ್ರಾಲೋಚನೆಯಂತೆಯೇ ಹರಿಹರನೂ ಮತ್ತು ಅವನ ತರುವಾಯ ಬುಕ್ಕರಾಯನೂ ನಡೆಯುತ್ತಿದ್ದರು. ಆದ್ದರಿಂದ ಆ ಕಾಲದಲ್ಲಿ ರಾಜ್ಯದಲ್ಲಿ ನಡೆದ ಎಲ್ಲ ಜನೋಪಕಾರ ಕಾರ್ಯಗಳಿಗೂ ವಿದ್ಯಾರಣ್ಯರೇ ಪ್ರೇರಕರಾಗಿದ್ದರು. ಮಳವಳ್ಳಿಯ ಹತ್ತಿರ ಬಾಚೀರಾಜನೆಂಬ ಮಂತ್ರಿಯು ಬುಕ್ಕರಾಯ ಸಮುದ್ರ, ಕೀರ್ತಿ ಸಮುದ್ರ, ಮಲ್ಲವ್ವೆಯ ಕೆರೆ, ನಾಗವ್ವೆಯ ಕೆರೆ, ಚೌಡಪ್ಪನ ಕಾಲುವೆ, ಬಾಚಣ್ಣನ ತೋಟ, ಕಂಪಣ್ಣನ ತೋಟ ಇವುಗಳನ್ನು ನಿರ್ಮಾಣ ಮಾಡಿಸಿ ಮಲ್ಲಿಕಾರ್ಜುನ ಸ್ವಾಮಿಯನ್ನು ಪ್ರತಿಷ್ಠೆಮಾಡಿಸಿದನು. ಯುವರಾಜನಾಗಿ ಬುಕ್ಕರಾಯನು ಪೆನಗೊಂಡದಲ್ಲಿದ್ದಾಗ ಹೊನ್ನೆ ಹೊಳೆಯಿಂದ ಪೆನುಗೊಂಡ ಪಟ್ಟಣಕ್ಕೆ ಕಾಲುವೆಯನ್ನು ಕಟ್ಟಿಸಿದನು. ಸಿಂಗಮ ಭಟ್ಟನೆಂಬ ಜಲಯಂತ್ರ ವಿಶಾರದನು (Hydraulic Engineer) ಈ ಕಾಲುವೆಯನ್ನು ತೋಡಿಸಿದನು. ಬುಕ್ಕರಾಯನ ಮೊಮ್ಮಗಳು ಜೊಮ್ಮದೇವಿ ಬೇರೊಂದು ಕಾಲುವೆಯನ್ನು ಮಾಡಿಸಿದಳು. ಹೀಗೆ ನಾಡಿನ ಸರ್ವತೋಮುಖವಾದ ಅಭಿವೃದ್ಧಿಯನ್ನು ಸಾಧಿಸಲು ವಿದ್ಯಾರಣ್ಯರು ರಾಜಬಂಧುಗಳಿಗೂ ರಾಜಮಂತ್ರಿಗಳಿಗೂ ಸಮಯೋಚಿತ ಸಲಹೆಗಳನ್ನು ಕೊಡುತ್ತಿದ್ದರು. ರಾಜಕೀಯ, ಧಾರ್ಮಿಕ ಮತ್ತು ಸಾಹಿತ್ಯ ಸಂಸ್ಕೃತಿ ಜೀವನಗಳನ್ನು ಹದಗೊಳಿಸಿದರು.

ವಿದ್ಯಾರಣ್ಯರು ವೇದಶಾಸ್ತ್ರಜ್ಞರಾಗಿದ್ದಂತೆಯೇ ರಾಜ್ಯ ತಂತ್ರಜ್ಞರೂ ಆಗಿದ್ದರು. ಧರ್ಮಾಭಿಮಾನಿಗಳಾಗಿದ್ದಂತೆಯೇ ದೇಶಾಭಿಮಾನಿಗಳೂ ಆಗಿದ್ದರು. ಇತರರಿಗೆ ಉಪದೇಶಮಾಡುತ್ತಿದ್ದಂತೆಯೇ ತಾವು ಆಚರಿಸಿ ಆದರ್ಶ ಸ್ವರೂಪರಾಗಿರುತ್ತಿದ್ದರು. ಜನರಿಗೆ ಸಮಕ್ಷದಲ್ಲಿ ಉಪದೇಶಮಾಡಿ ಅವರನ್ನು ಕರ್ತವ್ಯ ಮಾರ್ಗಕ್ಕೆ ತಿರುಗಿಸುತ್ತಿದ್ದಂತೆಯೇ, ಸರ್ವೋತ್ತಮ ಗ್ರಂಥಗಳನ್ನು ಬರೆದು ಧರ್ಮ ಮಾರ್ಗವನ್ನು ಜನತೆಗೆ ತೋರಿಸಿದರು. ವಿದ್ಯಾರಣ್ಯರಂಥ ಮಹಾ ಪುರುಷರು ಆ ಕಾಲದಲ್ಲಿ ಅವತರಿಸದೇ ಇದ್ದಿದ್ದರೆ ಹಿಂದೂ ಧರ್ಮ ಸಂಸ್ಕೃತಿಗಳು ತೇಜೋವಿಹೀನವಾಗುತ್ತಿದ್ದುವು.

ವಿದ್ಯಾರಣ್ಯರು ಕೈಗೊಂಡು ನಿರ್ವಹಿಸುತ್ತಿದ್ದ ಮಹಾ ಪ್ರಯತ್ನಗಳಲ್ಲಿ ಅವರ ತಮ್ಮ ಸಾಯಣಾಚಾರ್ಯರು ರಾಜಕೀಯ ಮತ್ತು ಸಾರಸ್ವತ ಕ್ಷೇತ್ರ ಗಳಲ್ಲಿ ಅಪಾರವಾದ ಸೇವೆ ಸಲ್ಲಿಸಿದರು. ಇವರು ವಿಜಯನಗರ ಸಾಮ್ರಾಜ್ಯದ ನಾಲ್ಕು ಮಂದಿ ಅರಸರ ಬಳಿ ಮಂತ್ರಿಯಾಗಿದ್ದರೆಂದು ತಿಳಿದುಬರುತ್ತದೆ. ನೆಲ್ಲೂರು ಪ್ರಾಂತದಲ್ಲಿ ಮಹಾ ಮಂಡಲೇಶ್ವರನಾಗಿದ್ದ ಕಂಪಣ್ಣ, ಆತನ ಮಗ ಇಮ್ಮಡಿ ಸಂಗಮರಾಜ, ಮೊದಲನೆಯ ಬುಕ್ಕರಾಯ, ಅನಂತರ ಈತನ ಮಗ ಇಮ್ಮಡಿ ಹರಿಹರರಾಯ – ಈ ನಾಲ್ಕು ಮಂದಿ ರಾಜರ ಆಳಿಕೆಯಲ್ಲಿ ಸಾಯಣರು ಮಂತ್ರಿಯಾಗಿದ್ದುಕೊಂಡು ಅಪಾರ ಸಾಹಿತ್ಯವನ್ನು ಸೃಷ್ಟಿ ಮಾಡಿದರು. ಸುಭಾಷಿತ ಸುಧಾನಿಧಿ, ಯಜ್ಞತಂತ್ರ ಸುಧಾನಿಧಿ, ಧಾತುವೃತ್ತಿ ಮತ್ತು ವೇದಾರ್ಥ ಪ್ರಕಾಶ ಮುಂತಾದ ಅನೇಕ ಅಮೌಲ್ಯ ಗ್ರಂಥಗಳನ್ನು ರಚಿಸಿದರು. ಕಂಪಣ್ಣನು ಕಾಲವಾದಮೇಲೆ ಅವನ ಮಗ ಯುವರಾಜ ಸಂಗಮನಿಗೆ ಸಾಯಣರು ರಾಜಗುರುವಾದರು. ಅಲ್ಲದೆ, ರಾಜ ಪ್ರತಿನಿಧಿಯಾಗಿದ್ದುಕೊಂಡು ರಾಜ್ಯಕಾರ್ಯಗಳನ್ನು ದಕ್ಷತೆಯಿಂದ ನಡೆಯಿಸುತ್ತಿದ್ದರು. ಸಾಯಣರು ಯುದ್ಧ ಪ್ರಸಂಗ ಒದಗಿದಾಗ ರಣವೀರನಂತೆ ಶತ್ರುನಿಗ್ರಹ ಮಾಡಲು ಹಿಂಜರಿಯುತ್ತಿರಲಿಲ್ಲ. ಅವರು ಬಹುಮುಖವಾದ ರಾಜಕಾರ್ಯಗಳಲ್ಲಿ ಮಗ್ನರಾಗಿದ್ದರೂ ವಾಙ್ಮಯಸೇವೆಯನ್ನು ಅವ್ಯಾಹತವಾಗಿ ಮಾಡುತ್ತಿದ್ದರು. ಸಂಗಮರಾಜನು ಪ್ರಬುದ್ಧನಾಗಿ ರಾಜ್ಯಭಾರವನ್ನು ವಹಿಸಿಕೊಂಡಮೇಲೆ, ಸಾಯಣರು ಆತನ ಆಸ್ಥಾನದಲ್ಲಿದ್ದಾಗ ''ಆಯುರ್ವೇದ ಸುಧಾನಿಧಿ'' "ಅಲಂಕಾರ ಸುಧಾನಿಧಿ''–ಮುಂತಾದ ಗ್ರಂಥಗಳನ್ನು ರಚಿಸಿದರು. ಆ ವೇಳೆಗೆ ಸಾಯಣರನ್ನು ವಿಜಯನಗರದ ಬುಕ್ಕರಾಯನು ತನ್ನ ಆಸ್ಥಾನಕ್ಕೆ ಕರೆಯಿಸಿಕೊಂಡು ಗೌರವಿಸಿದನು. ಆಮೇಲೆ ಅವರು ಅಲ್ಲಿಯೇ ವಿದ್ಯಾರಣ್ಯರೊಂದಿಗೆ ನಿಂತರು. ಆಗ ಅವರು ''ಪುರುಷಾರ್ಥ ಸುಧಾನಿಧಿ'' ಯನ್ನೂ, ವೇದಾರ್ಥ ಪ್ರಕಾಶವನ್ನೂ ಬರೆದರು. ಅನಂತರ ಇಮ್ಮಡಿ ಹರಿಹರನ ಕಾಲದಲ್ಲಿ ಭಾಷ್ಯ ಗ್ರಂಥಗಳನ್ನು ರಚಿಸಿದರು. ಈ ರಾಜನು ತನ್ನ ತಂದೆ ಬುಕ್ಕರಾಯನ ಹೆಸರಿನಲ್ಲಿ ಒಂದು ಅಗ್ರಹಾರವನ್ನು ಕಟ್ಟಿಸಿ ಅದನ್ನು ಅರುವತ್ತು ವೃತ್ತಿಗಳಾಗಿ ವಿಂಗಡಿಸಿ ನಾನಾಗೋತ್ರಜರಾದ ಬ್ರಾಹ್ಮಣರಿಗೆ ದಾನಮಾಡಿದನು. ಹಾಗೆ ಆ ವೃತ್ತಿಗಳನ್ನು ದಾನವಾಗಿ ಪಡೆದವರಲ್ಲಿ ಸಾಯಣಾ

ಚಾರ್ಯರೇ ಮೊದಲನೆಯವರು. ಅವರಿಗೆ ಕಂಪಣ್ಣ, ಮಾಯಣ್ಣ, ಸಿಂಗಣ್ಣ ಎಂಬ ಮೂವರು ಗಂಡುಮಕ್ಕಳಿದ್ದರು. ಇವರೆಲ್ಲರೂ ಉದ್ದಾಮ ಪಂಡಿತರಾಗಿದ್ದರು. ವಿದ್ಯಾರಣ್ಯರ ಮತ್ತು ಸಾಯಣಾಚಾರ್ಯರ ತಂಗಿಯಾದ ಸಿಂಗಲೆಯ ಮಗ ಲಕ್ಷ್ಮೀಧರನು ಮುಂದೆ ಒಂದನೆಯ ದೇವರಾಯನಿಗೆ ಮಂತ್ರಿಯಾದನು. ಇವನು ತುಂಬ ವಿದ್ಯಾವಂತನೂ, ರಸಿಕನೂ ಆಗಿದ್ದನಲ್ಲದೆ, ರಾಜಕಾರಣ ಚತುರನೂ ಆಗಿದ್ದನು. ವಿದ್ಯಾರಣ್ಯರ ಮತ್ತೊಬ್ಬ ಸೋದರಳಿಯನಾದ ಅಹೋಬಲ ಪಂಡಿತನು "ಅಹೋಬಲ ಪಂಡಿತೀಯ" ಎಂಬ ಒಂದು ಆಂಧ್ರ ವ್ಯಾಕರಣವನ್ನು ಬರೆದಿದ್ದಾನೆ.

ವಿದ್ಯಾರಣ್ಯರ ಸಹಾಧ್ಯಾಯಿಗಳಾಗಿದ್ದ ವೇಂಕಟನಾಥಾರ್ಯರು ಆ ಕಾಲದ ಪ್ರಸಿದ್ಧ ವಿದ್ವಾಂಸರು. ಅವರನ್ನು ವೇದಾಂತ ದೇಶಿಕರೆಂದೂ ಕರೆಯುತ್ತಾರೆ. ಅವರು ತಮ್ಮ ಇಪ್ಪತ್ತನೆಯ ವಯಸ್ಸಿನಲ್ಲಿಯೇ ಸಕಲ ಶಾಸ್ತ್ರ ಪಾರಂಗತರಾದರು. ಅವರು ವಿವಾಹಿತರಾದಮೇಲೆ ತಿರುವಹೀಂದ್ರಪುರ, ತಿರುಪತಿ ಮೊದಲಾದ ಪುಣ್ಯ ಕ್ಷೇತ್ರಗಳಲ್ಲಿ ಕೆಲವುಕಾಲವಿದ್ದರು. ಮಲ್ಲಿಕಾಫರನು ದಕ್ಷಿಣದೇಶದ ಮೇಲೆ ದಂಡೆತ್ತಿಬಂದ ಸಮಯದಲ್ಲಿ ಇವರು ಶ್ರೀರಂಗದಲ್ಲಿದ್ದರು. ಆಗ ಅಲ್ಲಿದ್ದ ಸುದರ್ಶನಭಟ್ಟರೆಂಬ ಪಂಡಿತರು ತಾವು ಬರೆದ "ಶ್ರುತಪ್ರಕಾಶಿಕೆ" ಎಂಬ ಗ್ರಂಥವನ್ನೂ, ತಮ್ಮ ಇಬ್ಬರು ಮಕ್ಕಳನ್ನೂ ಸುರಕ್ಷಿತವಾಗಿ ಕಾಪಾಡಬೇಕೆಂದು ವೇದಾಂತದೇಶಿಕರನ್ನು ಕೇಳಿಕೊಂಡರು. ಅವರು ಹಾಗೆಯೇ ಆಗಲೆಂದು ಮಾತುಕೊಟ್ಟರು. ಯುದ್ಧಕಾಲದಲ್ಲಿ ಅವರು ಆ ಓಲೆಯ ಪುಸ್ತಕವನ್ನು ಮರಳಿನಲ್ಲಿ ಹೂತಿಟ್ಟು, ತಾವೂ ಹುಡುಗರೂ ರಣರಂಗದಲ್ಲಿ ಹೆಣಗಳ ಮಧ್ಯದಲ್ಲಿ ಶವಗಳಂತೆ ಬಿದ್ದುಕೊಂಡಿದ್ದು, ನಡುರಾತ್ರಿಯಲ್ಲಿ ಆ ಗ್ರಂಥವನ್ನು ತೆಗೆದುಕೊಂಡು ಹುಡುಗರೊಂದಿಗೆ ಶತ್ರುಗಳಿಗೆ ಅರಿಯದಂತೆ ಸತ್ಯಮಂಗಲಕ್ಕೆ ತೆರಳಿದರು. ಅವರು ರಚಿಸಿರುವ "ಅಭೀತಿಸ್ತವ" ದಲ್ಲಿ ಶತ್ರುಗಳ ಪೀಡೆಯಿಂದುಂಟಾದ ಮನಃಕ್ಲೇಶಗಳು ಭಾಸವಾಗುತ್ತವೆ. ಪ್ರಪನ್ನಾಮೃತ ಮತ್ತು ಗುರುಪರಂಪರಾ ಪ್ರಭಾವ—ಈ ಗ್ರಂಥಗಳಿಂದ ವೇದಾಂತ ದೇಶಿಕರ ಸಂಗತಿಗಳು ತಿಳಿದುಬರುತ್ತದೆ. ಇವರಿಗೆ "ಕವಿತಾರ್ಕಿಕ ಸಿಂಹ" "ಸರ್ವತಂತ್ರಸ್ವತಂತ್ರ" ಮತ್ತು "ವೇದಾಂತಾಚಾರ್ಯ" ಎಂಬ ಬಿರುದುಗಳಿದ್ದುವು. ಇವರು ತಮಿಳಿನಲ್ಲಿಯೂ ಸಂಸ್ಕೃತದಲ್ಲಿಯೂ

ಅನೇಕ ಗ್ರಂಥಗಳನ್ನು ಬರೆದು ವಾಙ್ಮಯ ಸಂಪತ್ತನ್ನು ಹೆಚ್ಚಿಸಿದರು. ಇವ ರಿಗೂ ವಿದ್ಯಾರಣ್ಯರಿಗೂ ಗಾಢವಾದ ಸ್ನೇಹವಿತ್ತು.

ವಿದ್ಯಾರಣ್ಯರ ತಮ್ಮ ಭೋಗನಾಥ ಕವಿಯು ಆ ಕಾಲದಲ್ಲಿ ಕೆಲವು ಪ್ರಸಿದ್ಧ ಗ್ರಂಥಗಳನ್ನು ಬರೆದಿದ್ದಾನೆ. ರಾಮೋಲ್ಲಾಸಃ, ತ್ರಿಪುರವಿಜಯಂ, ಮಹಾಗಣಪತಿಸ್ತವಃ, ಶೃಂಗಾರಮಂಜರೀ ಮತ್ತು ಗೌರೀನಾಥಾಷ್ಟಕಂ—ಈ ಕಾವ್ಯಗಳನ್ನು ಈತನು ಬರೆದಿರುವಂತೆ ಕಂಡುಬರುತ್ತದೆ. ಯಾವುದೊಂದು ಗ್ರಂಥವೂ ಸಂಪೂರ್ಣವಾಗಿ ನಮಗೆ ದೊರೆತಿಲ್ಲ. ಈತನ ಕಾವ್ಯರಸಮಾಧು ರ್ಯವನ್ನು ರಸಜ್ಞರು ಸವಿದು ಆನಂದಿಸುತ್ತಾರೆ. ಈತನು ರಾಜಕುಮಾರ ಸಂಗಮನ ಸಹಾಧ್ಯಾಯಿಯಾಗಿ ಸಾಯಣಾಚಾರ್ಯರ ಬಳಿ ಕೆಲವು ಕಾಲ ವಿದ್ಯಾಭ್ಯಾಸಮಾಡಿದನು. ವಿಜಯನಗರ ಸಾಮ್ರಾಜ್ಯ ಉದಯವಾದ ಮೇಲೆ ಸುಮಾರು ಐವತ್ತುವರ್ಷಗಳ ಅವಧಿಯಲ್ಲಿ ವಾಙ್ಮಯ ಸಂಪತ್ತು ಬಹುಮುಖವಾಗಿ ವರ್ಧಿಸಿತು. ಜನಪದದ ಸುಖ ಸೌಲಭ್ಯಗಳು ನೆಲಸಿ ದುವು. ಧಾರ್ಮಿಕ ಮನೋಭಾವ ಜಗತ್ತಿನಲ್ಲಿ ರೂಢಮೂಲವಾಯಿತು. ಆಗಿನ ಧಾರ್ಮಿಕ ಮತ್ತು ವಾಙ್ಮಯ ಪ್ರಗತಿಯನ್ನು ಕುರಿತು ಸಮಗ್ರ ವಾಗಿ ಇಲ್ಲಿ ನಿರೂಪಿಸಲು ಸಾಧ್ಯವಿಲ್ಲ. ಆ ಪ್ರಗತಿಯ ರೂಪು ರೇಖೆಗ ಳನ್ನು ಮಾತ್ರ ಇಲ್ಲಿ ಎಳೆಯಲಾಗಿದೆ.

"ವಿಜಯ ನಗರ ಸಾಮ್ರಾಜ್ಯದಲ್ಲಿ ಅಪೂರ್ವವಾದ ಒಂದು ಸಂವಿ ಧಾನವಿದೆ. ಈ ಸಾಮ್ರಾಜ್ಯವು ಮಿಕ್ಕ ಸಾಮ್ರಾಜ್ಯಗಳಂತೆ ಕೇವಲ ವೈಯ ಕ್ತಿಕ ಸಾಹಸ ಮತ್ತು ಮಹತ್ವಾಕಾಂಕ್ಷೆಗಳ ಫಲವಾಗಿರಲಿಲ್ಲ. ಅದು ಒಂದು ಜನಾಂಗದ, ಒಂದು ರಾಷ್ಟ್ರದ ಸಾಮುದಾಯಿಕ ಪ್ರೇರಣೆಯ ಫಲವಾಗಿತ್ತು. ವಿಜಯನಗರವು ಒಂದು ಉದಾತ್ತ ಧ್ಯೇಯ ಸಾಧನೆಗಾಗಿ ಅವತಾರ ಮಾಡಿತು. ಆ ಧ್ಯೇಯಸಾಧನೆಯಲ್ಲಿ ಫಲ ಬಿಟ್ಟಿತು." "ವಿಜಯನಗರ ದಷ್ಟು ಉತ್ಕಟವಾಗಿಯೂ ವಿಸ್ತೃತ ಪ್ರಮಾಣದಲ್ಲಿಯೂ ಧರ್ಮ ಮತ್ತು ಸಂಸ್ಕೃತಿ ಇವುಗಳ ಪರಿಪಾಲನೆ ಮತ್ತು ಸಂವರ್ಧನೆಯ ಕಾರ್ಯದಲ್ಲಿ ನಿರತವಾದ ಸಾಮ್ರಾಜ್ಯಗಳು ಈ ಪ್ರಪಂಚದಲ್ಲಿ ಅತ್ಯಲ್ಪವಾಗಿಯೇ ಗೋಚರ ವಾಗುವುವು."

---

# ಒಂಬತ್ತನೆಯ ಅಧ್ಯಾಯ

## ಜೀವನಜ್ಯೋತಿ, ಕೀರ್ತಿಕಿರಣ

ಸರ್ವೇ ಭವಂತು ಸುಖಿನಃ ಸರ್ವೇ ಸಂತು ನಿರಾಮಯಾಃ ।
ಸರ್ವೇ ಭದ್ರಾಣಿ ಪಶ್ಯಂತು ಮಾ ಕಶ್ಚಿದ್ದುಃಖಭಾಗ್ ಭವೇತ್ ॥

—ಅಮರ ಸಂದೇಶ

ಸ್ವಾಮಿ ಶ್ರೀ ವಿದ್ಯಾರಣ್ಯರು ಆದರ್ಶ ಪುರುಷರು, ವೇದಾಂತ ಹೃದಯರು. ಅವರ ವಾಣಿ ಅಮರವಾಣಿ ; ಅವರ ಜೀವನ ದೇವಜೀವನ ; ಲೋಕಾರಾಧನೆಯೇ ಅವರ ಜೀವನದ ಪರಮ ಧ್ಯೇಯ ; ಅವರು ಜೀವನ್ಮುಕ್ತರು; ಇಹದಲ್ಲಿಯೇ ಪರಮಾರ್ಥವನ್ನು ಸಾಧಿಸಿದ ಸಿದ್ಧ ಪುರುಷರು. ಅವರು ತಮ್ಮ ನಡತೆಯಿಂದ ಲೋಕದ ಬದುಕನ್ನು ತಿದ್ದಿದರು ; ತಮ್ಮ ಉಪದೇಶದಿಂದ ಸಂತಪ್ತ ಹೃದಯಗಳನ್ನು ಸಂತೈಸಿದರು ; ಚೇತನಗೊಳಿಸಿದರು. ಅವರು ತಮ್ಮ ಅಖಂಡ ಆಯುಸ್ಸನ್ನು ಇಡಿಯ ಕರ್ಣಾಟಕದ ಅಷ್ಟೇ ಅಲ್ಲ, ಸಮಸ್ತ ಭಾರತೀಯರ ಉದ್ಧಾರಕ್ಕಾಗಿಯೇ ಧಾರೆಯೆರೆದರು. ಮಹರ್ಷಿಯಂತೆ ವೀರತಪಸ್ಸನ್ನಾಚರಿಸಿದರು. ವೇದಾಂತಿಯಂತೆ ಬ್ರಹ್ಮವನ್ನು ಅರಿತರು ; ಸಮಾಜ ಸಂಸ್ಕರಣ ಧುರೀಣರಂತೆ ಮಾನವ ಜೀವನವನ್ನು ಸುಧಾರಿಸಿದರು ; ರಾಜಕಾರಣ-ನಿಪುಣರಂತೆ ರಾಜಕೀಯ ರಂಗದಲ್ಲಿ ಬೆಳಗಿದರು ; ಕರ್ಮಯೋಗಿಯಂತೆ ವ್ಯವಹಾರ ಚತುರರೆನಿಸಿದರು ; ಸಂನ್ಯಾಸಿಯಂತೆ ನಿಷ್ಕಾಮರಾಗಿದ್ದರು ; ಯೋಗಿಯಂತೆ ಸರ್ವ ಸಮದರ್ಶಿಯಾಗಿದ್ದರು ; ಇಂಥ ಸಿದ್ಧಪುರುಷರ ಜೀವನ ಚಿತ್ರವನ್ನು ರೂಪಿಸುವುದೆಂದರೆ ಸಾಧ್ಯವೇ ! ಅವರ ವ್ಯಕ್ತಿತ್ವ ಪರಿಚಯವನ್ನು ಹಿಂದಿನ ಅಧ್ಯಾಯಗಳಲ್ಲಿ ಸಂದರ್ಭೋಚಿತವಾಗಿ ಮಾಡಿಕೊಡಲಾಗಿದೆ. ಆದರೂ ಅವರ ನಿರ್ಮಲ ವ್ಯಕ್ತಿತ್ವ ಚಿತ್ರವನ್ನು ಪೂರ್ಣಗೊಳಿಸಿದಂತಾಗಲಿಲ್ಲ. ಸರ್ವಾಲಂಕಾರ ಭೂಷಿತೆಯಾದ ವನಿತೆಯ ಹಣೆಯಲ್ಲಿ ಕುಂಕುಮ ಶೋಭಿಸಿದರೆ ಮಾತ್ರವೇ ಆ ರೂಪು ಸೌಂದರ್ಯಗಳಿಗೊಂದು ಪ್ರಕಾಶ ! ಅದರಂತೆಯೇ ಈ ಕೀರ್ತಿ ಕಿರಣ ಅಧ್ಯಾಯದಿಂದ ಅವರ ಪವಿತ್ರ ಜೀವನ ಚರಿತ್ರೆಯ ಭವ್ಯ ಮಂದಿರದ ಮೇಲೆ ಕನಕ ಶಿಖರವನ್ನು ಇಟ್ಟಂತಾಗುತ್ತದೆ.

ನಿಸ್ತೇಜವಾಗಿದ್ದ ಕರ್ಣಾಟಕವನ್ನು ಮತ್ತೊಮ್ಮೆ ಹುರಿದುಂಬಿಸಿ ತಮ್ಮ ಸಂತತವಾದ ಪ್ರಯತ್ನ ಬಲದಿಂದ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಲು ನೆರವಾದರು. ಅವರ ಜೀವನಜ್ಯೋತಿ ಕರ್ಣಾಟಕ ಹೃದಯದಲ್ಲಿ ಕ್ಷಾತ್ರ ತೇಜಸ್ಸನ್ನು ಮೂಡಿಸಿತು; ಸನಾತನ ಧರ್ಮವನ್ನು ಬೆಳಗಿಸಿತು. ಸಾಹಿತ್ಯ ವಾಹಿನಿಯನ್ನು ಹರಿಯಿಸಿತು. ಸಂಸ್ಕೃತಿ ವೈಭವವನ್ನು ತುಂಬಿಸಿತು. ಒಂದು ವ್ಯಕ್ತಿಯ ಜೀವನ ಪರಿಪೂರ್ಣವಾಗಬೇಕಾದರೆ ಅಥವಾ ಒಂದು ರಾಷ್ಟ್ರದ ಜೀವನ ವಿಕಾಸವಾಗಬೇಕಾದರೆ ಕೇವಲ ರಾಜಕೀಯ ಪ್ರಸತಿಯೇ ಆಗಲಿ ಅಥವಾ ಆಧ್ಯಾತ್ಮ ಪ್ರಗತಿಯೇ ಆಗಲಿ ಮುಖ್ಯ ಸಾಧನವಲ್ಲ. ಲೌಕಿಕ ಜೀವನವೊಂದರಿಂದಲೇ ಆತ್ಮಕಲ್ಯಾಣವಾಗಲಾರದು. ಅಥವಾ ಪಾರಮಾರ್ಥಿಕ ತಪಸ್ಸೊಂದೇ ಆತ್ಮಶ್ರೇಯಸ್ಸಿಗೆ ಮುಖ್ಯವಲ್ಲ. ಹಾಗೆ ಒಂದೊಂದು ಜೀವನದಲ್ಲಿಯೇ ಸಿದ್ಧಿ ಪಡೆದವರು ಇರಬಹುದು. ಸಮಷ್ಟಿವ್ಯಷ್ಟಿಯಿಂದ ಅಂಥವರ ಜೀವನದಿಂದ ಲೋಕಕ್ಕೆ ಅಷ್ಟೇನೂ ಉಪಕಾರವಾಗುವುದಿಲ್ಲ. ರಾಜಕೀಯ ಮತ್ತು ಆಧ್ಯಾತ್ಮಿಕ ಇಲ್ಲವೇ ಲೌಕಿಕ ಮತ್ತು ಪಾರಮಾರ್ಥಿಕ – ಈ ಎರಡೂ ಜೀವನಗಳನ್ನು ಸಮರಸವಾಗಿ ಎರಕಹೊಯ್ದ ಜೀವನ ವೈಶಿಷ್ಟ್ಯದಿಂದ ಮಹತ್ಕಾರ್ಯಗಳಾಗುತ್ತವೆಯೆಂಬುದನ್ನು ಮಾನವಜೀವನ ಚರಿತ್ರೆಯಿಂದ ತಿಳಿಯಬಹುದು. ಲೌಕಿಕ ಮತ್ತು ಪಾರಮಾರ್ಥಿಕ ಮಾರ್ಗಗಳೆರಡೂ ರಾಷ್ಟ್ರಾಭ್ಯುದಯಕ್ಕೆ ಒದಗಬೇಕು. ಮುಖಕ್ಕೆ ಎರಡು ಕಣ್ಣುಗಳಿದ್ದಂತೆ, ಲೌಕಿಕ ಮತ್ತು ಪಾರಮಾರ್ಥಿಕ ಮಾರ್ಗಗಳು ಯಾವುದೊಂದು ರಾಷ್ಟ್ರಕ್ಕೆ ಆಗಲಿ ಮುಖ್ಯ. ರಾಷ್ಟ್ರಜೀವನದಲ್ಲಿ ವ್ಯಕ್ತಿಜೀವನವೂ ಸೇರಿರುವುದರಿಂದ ಈ ಎರಡು ಮಾರ್ಗಗಳು ವ್ಯಕ್ತಿಯ ಏಳಿಗೆಗೂ ಸಾಧಕಗಳೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಯಾವ ಕಣ್ಣು ಕುರುಡಾದರೂ ಮುಖದ ಲಕ್ಷಣವೇ ಕೆಡುತ್ತದೆ. ಅದರಂತೆ ಈ ಎರಡು ಮಾರ್ಗಗಳಲ್ಲಿ ಯಾವುದೊಂದು ಸರಿಯಾಗಿಲ್ಲದಿದ್ದರೂ ಆ ರಾಷ್ಟ್ರದ ಪ್ರಗತಿಯೇ ಕುಂಠಿತವಾಗುತ್ತದೆ. ಒಂದು ಪಕ್ಷಿಗೆ ಎರಡು ರೆಕ್ಕೆಗಳಿದ್ದಂತೆ ಇವು ರಾಷ್ಟ್ರದ ಉನ್ನತಿಗೆ ಸಹಕಾರಿಯಾಗುತ್ತವೆ. ಯಾವುದೊಂದು ರೆಕ್ಕೆ ಮುರಿದು ಹೋದರೂ ಆ ಪಕ್ಷಿ ಆಕಾಶದಲ್ಲಿ ಸ್ವಚ್ಛಂದವಾಗಿ ಹಾರಲಾರದು. ತನ್ನ ಸಂಚರದಿಂದ ಲೋಕವನ್ನು ತಣಿಸಲಾರದು. ಈ ತತ್ತ್ವವನ್ನು ನಾವು ನೆನಪಿ

ನಲ್ಲಿಟ್ಟುಕೊಂಡರೆ, ವಿದ್ಯಾರಣ್ಯರ ಜೀವನ ರಹಸ್ಯ ಮತ್ತು ಅವರ ಜೀವನ ವೈಶಿಷ್ಟ್ಯ ನಮಗೆ ಮನವರಿಕೆಯಾಗುತ್ತವೆ. ವಿದ್ಯಾರಣ್ಯರಂಥ ವಿಭೂತಿ ಪುರುಷರ ಜೀವನ ಮಾರ್ಗದಿಂದ ಲೋಕದ ಬಾಳು ಬೆಳೆಯುತ್ತದೆ. ಮಹಾತ್ಮರು ತಮ್ಮ ಗುಣಗಳಿಂದ ಲೋಕಕ್ಕೆ ಮಾರ್ಗದರ್ಶಕರಾಗಿ ನಿಲ್ಲುತ್ತಾರೆ. ತಮ್ಮ ನಡೆನುಡಿಗಳಿಂದ ಪ್ರಪಂಚದ ಬದುಕನ್ನು ತಿದ್ದುತ್ತಾರೆ. ಅವರು ತಮ್ಮ ಆತ್ಮಶಕ್ತಿಯ ಪ್ರಭಾವದಿಂದ ಲೋಕದಮೇಲೆ ಪರಿಣಾಮಕರವಾದ ವರ್ಚಸ್ಸನ್ನು ಬೀರುತ್ತಾರೆ. ಚಿನ್ನದಲ್ಲಿ ಮಾಡಿದ ಪ್ರತಿಮೆಯನ್ನು ನೋಡಿ, ಇದರ ಕೈ ಚಿನ್ನ, ಇದರ ಕಾಲು ಚಿನ್ನ, ಇದರ ಮೂಗು ಚಿನ್ನ ಎಂದು ಬೇರೆಬೇರೆ ಹೇಳಬೇಕೆ! ಹಾಗೆಯೇ ವಿಭೂತಿ ಪುರುಷರಲ್ಲಿ ಇದು ದೊಡ್ಡ ಗುಣ, ಅದು ದೊಡ್ಡ ಗುಣ ಎಂದು ವಿಂಗಡಿಸಿ ಹೇಳಲು ಸಾಧ್ಯವಿಲ್ಲ. ಆದರೆ ಅಂಥವರ ಗುಣಗಾನದಿಂದ ಲೋಕದ ಶ್ರೇಯಸ್ಸಾಧನೆಯಾಗುತ್ತದೆ.

**ಗುರುಹಿರಿಯರಲ್ಲಿ ಭಕ್ತಿ**

ವಿದ್ಯಾರಣ್ಯರು ಚಿಕ್ಕಂದಿನಿಂದಲೂ ಗುರುಹಿರಿಯರಲ್ಲಿ ವಿಶೇಷ ಭಕ್ತಿ ಗೌರವಗಳನ್ನು ಇಟ್ಟಿದ್ದರು ತಮ್ಮ ಜೀವನ ಜ್ಯೋತಿಯನ್ನು ಉಜ್ವಲವಾಗಿ ಬೆಳಗಿಸಲು ಪರಿಶ್ರಮಿಸಿದ ತಾಯಿ ತಂದೆಗಳಲ್ಲಿ ಅವರು ಪೂಜ್ಯಭಾವನೆಯಿಂದ ವರ್ತಿಸುತ್ತಿದ್ದರು. ತಮ್ಮ ವಿದ್ಯಾಗುರುಗಳಲ್ಲಿ ಅವರಿಗೆ ನಿರ್ಮಲಭಕ್ತಿಯಿತ್ತು. "ಮಾತೃದೇವೋಭವ, ಪಿತೃದೇವೋಭವ, ಆಚಾರ್ಯ ದೇವೋಭವ" ಎಂಬ ವೇದವಾಣಿಯನ್ನು ಅನುಷ್ಠಾನದಲ್ಲಿಟ್ಟುಕೊಂಡಿದ್ದರು. 'ಅಜ್ಞರಾದ ಪಾಮರರಿಗೆ ಪುಣ್ಯ ಗಂಗಾತೀರ್ಥವಿರುವಂತೆ ಸ್ವಭಾವ ನಿರ್ಮಲವಾಗಿರುವ ವಿದ್ಯಾತೀರ್ಥವು ವಿವೇಕಿಗಳಿಗೆ ಪಾವನಕರವಾಗಿದೆ'—ಎಂದು "ಕಾಲಮಾಧವೀಯ" ಗ್ರಂಥದಲ್ಲಿ ವಿದ್ಯಾರಣ್ಯರು ತಮ್ಮ ಗುರು ವಿದ್ಯಾತೀರ್ಥರನ್ನು ಭಕ್ತಿಯಿಂದ ಧ್ಯಾನಮಾಡಿದ್ದಾರೆ. ಹೀಗೆ ಅವರದು ಭಕ್ತಿಮಯ ಜೀವನ. ಭುವನೇಶ್ವರಿಯನ್ನು ಅತ್ಯಂತ ಭಕ್ತಿಯಿಂದ ಆರಾಧಿಸುತ್ತಿದ್ದರು. ವಿರೂಪಾಕ್ಷಸ್ವಾಮಿಯ ಧ್ಯಾನದಲ್ಲಿ ಮೈಮರೆಯುತ್ತಿದ್ದರು. ಭಕ್ತಿಯಿಂದ ಮಾಡತಕ್ಕ ಪ್ರಾರ್ಥನೆಯ ಬಲದಿಂದ ಅವರು ಸದಾ ಹರ್ಷಚಿತ್ತರಷ್ಟೇ ಅಲ್ಲ, ಸ್ಥಿರಚಿತ್ತರೂ ಆಗಿರುತ್ತಿದ್ದರು.

ವಿದ್ಯಾರಣ್ಯರು ಬಡತನದಲ್ಲಿ ಹುಟ್ಟಿ ಬೆಳೆದರು. ಸಂಸಾರ ಜೀವನದಲ್ಲಿ

ಲೌಕಿಕ ಸುಖ ಸೌಕರ್ಯಗಳಿಗೆ ಕೊರತೆಯೂ ಇತ್ತು. ಆದರೇನು! ಅವರ

**ಚಿತ್ತಸ್ಥೈರ್ಯ**

ಮನಸ್ಸು ಅಚಲವಾಗಿತ್ತು. ವಿಶ್ವಸುಖವನ್ನು ಸಾಧಿಸಲು ಪ್ರಯತ್ನಿಸುತ್ತಿದ್ದ ಅವರ ಮನಸ್ಸಿನಲ್ಲಿ ಯಾವ ಅಳುಕೂ ಇರಲಿಲ್ಲ. ಬಡತನದ ಬೇಗೆಯಿಂದ ಎದೆಗುಂದಲಿಲ್ಲ. ಸಂಸಾರದಲ್ಲಿದ್ದರೂ ಅವರು ಕುಟುಂಬ ಜೀವನದಿಂದ ನಿರ್ಲಿಪ್ತರಾಗಿಯೇ ಇದ್ದರು. ಅವರು ವಿದ್ಯಾಭ್ಯಾಸವನ್ನು ಪೂರೈಸಿದಮೇಲೆ, ಅವರ ನಂಟರೂ ಇಷ್ಟರೂ ಅವರ ಜೀವನ ಸಂಪಾದನೆಗಾಗಿ ಯಾರಾದರೊಬ್ಬ ರಾಜನ ಆಶ್ರಯ ಪಡೆಯುವಂತೆ ಹೇಳಿದರು. ಅವರಿಗೆ ಸಾಕಾದಷ್ಟು ಪಾಂಡಿತ್ಯವಿತ್ತು. ಅವರು ಮನಸ್ಸು ಮಾಡಿದ್ದರೆ ಆ ವಿದ್ಯೆಯಸಹಾಯದಿಂದ ಅವರು ತಮ್ಮ ಮತ್ತು ತಮ್ಮ ಸಂಸಾರದ ಜೀವನವನ್ನು ನಿರಾತಂಕವಾಗಿಯೇ ಸಾಗಿಸಬಹುದಾಗಿತ್ತು. ಆದರೆ ನಿತ್ಯತೃಪ್ತರಾದ ಅವರು ಅದಕ್ಕೆ ಒಪ್ಪಲಿಲ್ಲ. ತಾವು ಪಡೆದ ವಿದ್ಯೆಯನ್ನು ಲೋಕಕಲ್ಯಾಣಕ್ಕಾಗಿ, ಸನಾತನ ಧರ್ಮಾಭ್ಯುದಯಕ್ಕಾಗಿ ಧಾರೆಯೆರಯಲು ನಿಶ್ಚಯಿಸಿದರು. ತಮ್ಮ ಚಿಕ್ಕ ಸಂಸಾರದ ಸುಖಕ್ಕಿಂತಲೂ ಆಗ ಪರಾಧೀನವಾಗುತ್ತಿದ್ದ ಕನ್ನಡ ನಾಡಿನ ಸುಖವನ್ನು ಸಾಧಿಸುವುದೇ ಹೆಚ್ಚು ಎಂದು ಅವರು ನಿರ್ಧರಿಸಿದರು. ಈ ಧ್ಯೇಯ ಸಾಧನೆಗಾಗಿಯೇ ದುಡಿದರು. ಎಂಥ ವಿಷಮ ಪರಿಸ್ಥಿತಿಯೊದಗಿದರೂ ಅವರು ಧೈರ್ಯಗೆಡುತ್ತಿರಲಿಲ್ಲ. ಕಾಲೋಚಿತವಾದ ಸಲಹೆಗಳಿಂದ ತಮ್ಮ ಹಿಂಬಾಲಕರನ್ನು ಪ್ರೋತ್ಸಾಹಿಸುತ್ತಿದ್ದರು. ಮಲಿಕನಾಯಬನು ಅವರನ್ನು ಹೆದರಿಸಿ ಪತ್ರ ಬರೆದಾಗ ಅವರು ತಮ್ಮ ಇಂಗಿತವನ್ನು ಸ್ಪಷ್ಟವಾಗಿಯೇ ತಿಳಿಸಿದರು. ಲೋಕಹಿತಕ್ಕಾಗಿ ತಮ್ಮ ಪ್ರಾಣಾರ್ಪಣೆಮಾಡಲು ಅವರು ಸಿದ್ಧರಾಗಿದ್ದರು. ಮನೋದೌರ್ಬಲ್ಯವೆಂಬುದನ್ನೇ ಅರಿಯರು.. ಅಂಥ ಚಿತ್ತ ಸ್ಥೈರ್ಯವಿದ್ದುದರಿಂದಲೇ ಅವರು ಸಾಮ್ರಾಜ್ಯ ಸ್ಥಾಪನೆಯ ಮಹಾಕಾರ್ಯದಲ್ಲಿ ಪ್ರಮುಖ ಪಾತ್ರವನ್ನು ಜಯಪ್ರದವಾಗಿ ವಹಿಸಿ ಸಿದ್ಧಿ ಪಡೆದರು.

ವಿದ್ಯಾರಣ್ಯರ ದೇಶಭಕ್ತಿ ಮಿಗಿಲಾದುದು. ಜನತಾ ಸೇವೆಯೇ ಜನಾರ್ದನನ ಸೇವೆ ಎಂಬಂತೆ, ದೇಶದ ಹಿತವನ್ನು ಸದಾ ಲಕ್ಷ್ಯದಲ್ಲಿಟ್ಟುಕೊಂಡು ನಿರಂತರವೂ ಪರಿಶ್ರಮಿಸಿದರು. ದಾರುಣವಾದ ದಾರಿ

**ದೇಶಭಕ್ತಿ**

ದ್ರ್ಯಕ್ಕೆ ಅವರು ಹೆದರಲಿಲ್ಲ. ದೇಶಸೇವಾ ದೀಕ್ಷೆಯನ್ನು ಹೊಂದಿ ನಿರ್ವೀರ್ಯ ರಾಷ್ಟ್ರವನ್ನು ಮತ್ತೊಮ್ಮೆ ಚೇತನಗೊಳಿಸಿದರು. ಶೃಂಗೇರಿಯ ಗುರುಪೀಠದಲ್ಲಿ ಕುಳಿತು, ಪಾಲಕಿಯಲ್ಲಿ ಮಂಡಿಸಿ, ಭಕ್ತರನ್ನು ಆಶೀರ್ವದಿಸಬಹುದಾಗಿತ್ತು ಅವರು. ಅದನ್ನು ಅಷ್ಟಾಗಿ ಯೋಚಿಸಲಿಲ್ಲ. ಸನಾತನಧರ್ಮದ ಏಳಿಗೆಯನ್ನು ಲಕ್ಷಿಸಿದರು ; ದೇಶದ ಸ್ವಾತಂತ್ರ್ಯವನ್ನು ಗಮನಿಸಿದರು. ಎಲ್ಲಿಗೆಂದರಲ್ಲಿಗೆ ಕಾಲುನಡಗೆಯಿಂದ ನಡೆದರು. ರಾತ್ರಿಯೇನು ! ಹಗಲೇನು ! ಯಾವ ಹೊತ್ತಾದರೂ ಸರಿಯೇ, ನಿಂತಕಡೆಯೇ ರಾಜಕೀಯ ; ಇದ್ದಕಡೆಯೇ ಮಂತ್ರಾಲೋಚನೆ. ಅದ್ಭುತ ಸಂಧಾನ ಚಾತುರ್ಯ. ಅಸದೃಶ ರಾಜ ನೈಪುಣ್ಯ ! ಭಕ್ತಿಯಿಂದ ಭುವನೇಶ್ವರಿಯ ಪೂಜೆ ; ಯುಕ್ತಿಯಿಂದ ರಾಜ ಕಾರ್ಯ ! ಅವರ ಜೀವನ ರಾಜರ್ಷಿ ಜೀವನ ; ಕರ್ಮಸಂನ್ಯಾಸಿ ಯೋಗ ! ದೇಶವನ್ನು ಸುತ್ತಿದರು ; ಜನರ ನಿರ್ಬಲತೆಯನ್ನು ಅರಿತರು. ದೇಶದ ಏಳಿಗೆಗಾಗಿ ಹಗಲಿರುಳು ಚಿಂತಿಸಿದರು. ನಿರಾಡಂಬರದಿಂದ ಕಾರ್ಯ ಸಾಧನೆ ಮಾಡಿದರು. ಭಗವದ್ಭಕ್ತಿಯನ್ನು ಅವರು ದೇಶಭಕ್ತಿಯೆಂದೇ ಸಾಧಿಸಿದರು. ಬಾಲ್ಯದಲ್ಲಿ ದೇಶಭಕ್ತಿಯಿಂದ ಗುರುಕುಲವಾಸ ಮಾಡಿದರು; ಹರೆಯದಲ್ಲಿ ದೇಶಭಕ್ತಿಯಿಂದ ಕುಟುಂಬಯೋಗಿಯಾದರು ; ಮುಪ್ಪಿನಲ್ಲಿ ದೇಶಭಕ್ತಿಯಿಂದ ಗುರುವಾದರು. ಅವರ ಸಮಗ್ರ ಜೀವಮಾನದಲ್ಲಿ ದೇಶ ಪ್ರೇಮವೇ ತುಂಬಿತ್ತು. ದೇಶವಿಲ್ಲದೆ ಅವರ ಜೀವನವಿಲ್ಲ ಎಂಬಂತೆ—ಯಾವಾಗಲೂ ದೇಶಹಿತವನ್ನೇ ಸಾಧಿಸುತ್ತಿದ್ದರು. ದೇಶದ ಹಿತಕ್ಕಾಗಿ ಅವರು ಆವಶ್ಯಕತೆ ಬಂದಿದ್ದರೆ ಗುರುಪದವಿಯನ್ನೂ ತಿರಸ್ಕರಿಸಿ, ಕಾಷಾಯಾಂಬರವನ್ನು ಕಿತ್ತೊಗೆದು ಪಟುಭಟನಂತೆ ಯುದ್ಧಕ್ಕೆ ಹೊರಡುತ್ತಿದ್ದರೇನೊ ! ಅರಮನೆಯಲ್ಲಿ, ಗುರುಮನೆಯಲ್ಲಿ ವಿದ್ಯಾರಣ್ಯರ ದೇಶಭಕ್ತಿಯೇ ತುಂಬಿತ್ತು. ಅಂದಿನ ದೇಶದ ಜನಜೀವನದ ಚರಿತ್ರೆಯೇ ವಿದ್ಯಾರಣ್ಯರ ಜೀವನ ಚರಿತ್ರೆಯೆಂದರೆ ಒಪ್ಪುತ್ತದೆ. ಅವರು ಮಾಡುತ್ತಿದ್ದ ಪ್ರತಿಯೊಂದು ಕಾರ್ಯವೂ ಅವರು ಆಲೋಚಿಸುತ್ತಿದ್ದ ಪ್ರತಿಯೊಂದು ವಿಷಯವೂ ದೇಶ ಭಕ್ತಿಯಿಂದ ಪ್ರೇರಿತವಾಗುತ್ತಿದ್ದುವು. ವಿದ್ಯಾರಣ್ಯರಂಥ ದೇಶಪ್ರೇಮ ಹೃದಯರು ಹುಟ್ಟುವುದೇ ಅಪೂರ್ವ. ಕನ್ನಡಿಗರಿಗೆ ಇಂದು ಬೇಕಾದುದು ವಿದ್ಯಾರಣ್ಯರ ಜೀವಿತಾದರ್ಶವಲ್ಲವೆ !

ವಿದ್ಯಾರಣ್ಯರು ದೀನಜನರ ಹೃದಯದಲ್ಲಿ ಪರಮಾತ್ಮನ ಸ್ವರೂಪ ವನ್ನು ಕಾಣುತ್ತಿದ್ದರು. ದುಃಖಾರ್ತರನ್ನು ಕಂಡು ಮರುಗುತ್ತಿದ್ದರು. ತಮ್ಮ ಕಷ್ಟಗಳೆಷ್ಟಿದ್ದರೂ ಇತರರ ಕ್ಷೇಮಚಿಂತನೆಯಲ್ಲಿ ನಿರತರಾಗುತ್ತಿದ್ದರು.

**ಸೇವಾಕಾಂಕ್ಷೆ**

ಅದು ಅವರ ಹುಟ್ಟುಗುಣ. "ಪರೋಪಕಾರಾರ್ಥಮಿದಂ ಶರೀರಂ'' ಎಂಬುವೇ ಅವರ ಜೀವನ ಮಂತ್ರವಾಗಿತ್ತು. ಅವರು ಕಂಚಿಯಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ ಒಮ್ಮೆ ಆಗಿನ ಚೋಳಮಹಾರಾಜನು ಸರ್ವಜ್ಞ ವಿಷ್ಣುಭಟ್ಟರ ಗುರುಕುಲವನ್ನು ನೋಡಲು ಬಂದಿದ್ದನು. ಆತನು ಅಂತೇವಾಸಿಗಳನ್ನು ಕುರಿತು "ವಿದ್ಯಾ ಭ್ಯಾಸವನ್ನು ಪೂರೈಸಿದಮೇಲೆ ಮುಂದೆ ಏನು ಮಾಡುತ್ತೀರಿ" ಎಂದು ಪ್ರಶ್ನೆ ಮಾಡಿದನು. "ನಾನು ಯಾರಾದರೊಬ್ಬ ರಾಜನ ಆಶ್ರಯದಲ್ಲಿ ಜೀವನೋ ಪಾಯವನ್ನು ಹುಡುಕುತ್ತೇನೆ" ಎಂದನು ಒಬ್ಬ ಶಿಷ್ಯ. ''ನಾನು ಯಾವು ದಾದರೂ ಮಠದ ಗುರುವಿನ ಬಳಿಯಲ್ಲಿ ಆಸ್ಥಾನ ಪಂಡಿತನಾಗುತ್ತೇನೆ'' ಎಂದನು ಮತ್ತೊಬ್ಬನು. ಹೀಗೆ ಒಬ್ಬೊಬ್ಬರು ಒಂದೊಂದು ರೀತಿಯಾಗಿ ಹೇಳಿದರು. ಆ ಮಹಾರಾಜನ ದೃಷ್ಟಿ ಮಾಧವರ (ವಿದ್ಯಾರಣ್ಯರ) ಕಡೆ ಹೊರ ಳಿತು. ಆಗ ಅವರು "ನನಗೆ ಯಾವುದೊಂದು ಆಕಾಂಕ್ಷೆಯೂ ಇಲ್ಲ. ಯಾವಜ್ಜೀವವೂ ಮಾನವ ಸೇವೆಗಾಗಿ ಕೈಲಾದಷ್ಟು ದುಡಿಯಬೇಕೆಂಬುದೇ ನನ್ನ ಆಸೆ. ಒಂದು ಸಂತಪ್ತ ಹೃದಯವನ್ನು ಸಂತೈಸಿದರೆ ಕೋಟಿ ಯಜ್ಞ ಮಾಡಿದ ಫಲ ಬರುತ್ತದೆ. ದೇಶಸೇವೆಯೇ ಈಶಸೇವೆ ಎಂಬ ವ್ರತವನ್ನು ಕೈಗೊಂಡು ನನ್ನ ಜೀವಮಾನವನ್ನು ಲೋಕಹಿತಸಾಧನೆಗೆ ಮುಡುಪಾಗಿ ರಿಸುತ್ತೇನೆ'' ಎಂದು ತಡೆಬಡೆಯಿಲ್ಲದೆ ಹೇಳಿದರು. ಅದರಂತೆಯೇ ಅವರು ಲೋಕಸೇವೆಯಲ್ಲಿ ಆಜೀವಪರ್ಯಂತವೂ ನಿರತರಾಗಿದ್ದರು.

"ಮಾತೃಭೂಮಿಯ ಹಿತಾರ್ಥವಾಗಿ ಪ್ರಾಣವನ್ನು ಸಮರ್ಪಣೆ ಮಾಡುವ ಆಧ್ಯಾತ್ಮಿಕ ದೃಷ್ಟಿಯುಳ್ಳ ಸ್ವಯಂಸೇವಕರಾಗಿ ದುಡಿಯಬೇಕು. ನಾನು ಅಖಂಡ ಕರ್ಣಾಟಕವಾಗಿದ್ದೇನೆ. ಎಲ್ಲರ ಆತ್ಮವೇ ನನ್ನ ಅಂತರಾ ತ್ಮವು. ಇದೇ ಸ್ವದೇಶ ಭಕ್ತಿಯ ಅತ್ಯಂತ ಶ್ರೇಷ್ಠವಾದ ಸ್ಥಿತಿ. ಇದೇ ಪ್ರವೃತ್ತಿಪರವೇದಾಂತ" ಎಂದು ವಿದ್ಯಾರಣ್ಯರು ತಮ್ಮ ದೇಶಪ್ರೇಮವನ್ನು ಸಾರಿದ್ದಾರೆ.

**ವಿಶ್ವಪ್ರೇಮ**

ವಿದ್ಯಾರಣ್ಯರು ಸಂಸಾರವನ್ನು ಪರಿತ್ಯಜಿಸಿ ಎಲ್ಲರೂ ಸಂನ್ಯಾಸಿ ಜೀವನವನ್ನು ಪಾಲಿಸಬೇಕೆಂದು ಹೇಳಿಲ್ಲ. 'ಸಂಸಾರವು ಆತ್ಮೋನ್ನತಿಗೆ ಒಂದು ಸಾಧನವೆಂದೇ ಅವರು ಭಾವಿಸಿದ್ದರು. ಪರಮಾತ್ಮನಲ್ಲಿ ಐಕ್ಯಭಾವವನ್ನು ಹೊಂದಲು ಪ್ರಯತ್ನಿಸಬೇಕು. ಸಂಸಾರ ಸೋಪಾನವನ್ನು ಹತ್ತಿಹೋದ ವಿನಾ ಆತ್ಮೋನ್ನತಿಯ ಮುಂದಣಮಾರ್ಗವನ್ನು ನೀವು ಸೇರುವದಿಲ್ಲ. ಚಿಕ್ಕ ಕುಟುಂಬದಲ್ಲಿಯೇ ನೀವು ಐಕ್ಯಭಾವವುಳ್ಳವರಾಗಿರದಿದ್ದರೆ ವಿಶ್ವಕುಟುಂಬದಲ್ಲಿ ಐಕ್ಯಭಾವವನ್ನು ಹೊಂದಲು ಸಾಧ್ಯವೆ? ಎಂದು ಅವರು ಹೇಳುತ್ತಿದ್ದರು. "ಮೊದಲು ಮೊದಲು ನಿಮ್ಮ ಪತ್ನೀ ಪುತ್ರಾದಿಗಳ ಹಿತವೇ ನಿಮ್ಮ ಹಿತವೆಂದು ತಿಳಿಯಿರಿ. ಕುಟುಂಬಕ್ಕೂ ನಿಮಗೂ ಅಭೇದಭಾವನೆಯುಂಟಾಗಲಿ ಅನಂತರ ನಿಮ್ಮ ಪ್ರೇಮವನ್ನು ನಿಮ್ಮ ಕುಲಗೋತ್ರ ವಂಶಗಳ ಕಡೆಗೆ ಹೆಚ್ಚಿಸುತ್ತ ಇಡಿಯ ವಿಶ್ವವನ್ನೇ ವ್ಯಾಪಿಸುವಂತೆ ಮಾಡಿರಿ'' ಎಂದು ಅವರು ಬೋಧಿಸುತ್ತಿದ್ದರು. ಅದರಂತೆಯೇ ಆಚರಿಸುತ್ತ ಪ್ರಪಂಚಕ್ಕೆ ಆದರ್ಶಸ್ವರೂಪರಾಗಿದ್ದರು.

**ಕಾರ್ಯಶ್ರದ್ಧೆ**

ವಿದ್ಯಾರಣ್ಯರು ಒಣವೇದಾಂತಿಗಳಲ್ಲ. ಅವರು ನಿಷ್ಕಾಮಕರ್ಮಯೋಗಿಗಳಂತಿದ್ದರು. ಉದ್ಯೋಗಶೀಲನಾದ ಮನುಷ್ಯನು ಜಯಶೀಲನಾಗುತ್ತಾನೆ ಎಂಬಂತೆ ಪ್ರತಿಯೊಬ್ಬರೂ ಉದ್ಯೋಗಶೀಲರಾಗಿರಬೇಕೆಂದೂ, ದೇಶಾಭ್ಯುದಯ ದೃಷ್ಟಿಯಿಂದ ದುಡಿಯಬೇಕೆಂದೂ ಹೇಳುತ್ತಿದ್ದರು. ಕಾರ್ಯಶ್ರದ್ಧೆಯಿಲ್ಲದ ಮನುಷ್ಯನು ಅಭಿವೃದ್ಧಿಯಾಗುವುದಿಲ್ಲ. ಅವನಿದ್ದೂ ಪ್ರಪಂಚಕ್ಕೆ ಪ್ರಯೋಜನವಿಲ್ಲ. ಕರ್ತವ್ಯಕ್ಕಾಗಿ ಕರ್ತವ್ಯವನ್ನು ಮಾಡಬೇಕು. ನಿಮ್ಮ ಕಾರ್ಯ ಸಫಲವಾಗಬೇಕಾದರೆ ಫಲಕ್ಕೂ ಪರಿಣಾಮಕ್ಕೂ ನೀವೆಂದಿಗೂ ಗಮನಕೊಡಬೇಡಿರಿ. ಶ್ರದ್ಧಾ ಭಕ್ತಿಯೇ ನಿಮ್ಮ ಕಾರ್ಯಶಕ್ತಿಯ ಹಿನ್ನೆಲೆಯಾಗಿರಲಿ; ನಿಮ್ಮ ದೇಹ ಅನವರತವೂ ಕೆಲಸಮಾಡುತ್ತಿರಲಿ; ಆತ್ಮವು ಮಾತ್ರ ಶಾಂತವಾಗಿರಲಿ. ಜೀವನರಂಗದಲ್ಲಿ ಕೃತಕಾರ್ಯನಾಗಬೇಕಾದರೆ ನಿಸ್ಸ್ವಾರ್ಥಬುದ್ಧಿ ಇರಬೇಕು. ಸ್ವಾರ್ಥತ್ಯಾಗದಿಂದ ಮನುಷ್ಯನು ಅಜೇಯನಾಗುತ್ತಾನೆ ಎಂಬ ತತ್ತ್ವವನ್ನು ಅವರು ಜನರಿಗೆ ಹೇಳುತ್ತಿದ್ದರಲ್ಲದೆ, ತಮ್ಮ ಜೀವನದಲ್ಲಿ ಆಚರಿಸುತ್ತಿದ್ದರು.

ತನ್ನ ಬದುಕನ್ನು ಅನುಗೊಳಿಸಿಕೊಳ್ಳಬೇಕು. ಇಲ್ಲವೆ, ಆ ಸನ್ನಿವೇಶ ಶಕ್ತಿಯನ್ನು ತನ್ನ ಕಾರ್ಯ ರಂಗಕ್ಕೆ ಅನುಗುಣವಾಗಿ ಅಳವಡಿಸಿಕೊಳ್ಳಬೇಕು. ಈ ಮನೋಭಾವ ನಮ್ಮಲ್ಲಿ ಬೆಳೆದಷ್ಟೂ ಕ್ಷೇಮ. ಇದರಂತೆಯೇ ಅವರು ತಮ್ಮ ಸ್ವಶಕ್ತಿಯನ್ನು ಸದುಪಯೋಗಪಡಿಸಿಕೊಳ್ಳುತ್ತಿದ್ದರು. ಲೌಕಿಕ ಜೀವನದಲ್ಲಿ ಅವರು ನಿಪುಣರು . ಪಾರಮಾರ್ಥ ಜೀವನದಲ್ಲಿ ಯೋಗಿಗಳು. ಅವರ ಕಾಲದಲ್ಲಿದ್ದ ಎಲ್ಲ ಮಹಾವ್ಯಕ್ತಿಗಳ ಶಕ್ತಿಯನ್ನೂ ಅವರು ತಮ್ಮ ಕಡೆಗೆ ಒಲಿಸಿಕೊಂಡು, ತಮ್ಮ ಸ್ವಶಕ್ತಿಯ ಬಲದಿಂದ ರಾಜ್ಯಸ್ಥಾಪನೆ ಮಾಡಿಸಿ ಕೃತಕಾರ್ಯರೆನಿಸಿಕೊಂಡರು.

**ನಿಷ್ಕಾಮ ಯೋಗ**

ವಿದ್ಯಾರಣ್ಯರಲ್ಲಿ ಅಮಿತ ಪರಾಕ್ರಮ ಮತ್ತು ತೇಜಸ್ಸು ತುಂಬಿದ್ದುವು. ಹೆಣ್ಣು, ಹೊನ್ನು, ಮಣ್ಣುಗಳ ಆಶೆಯನ್ನು ದೂರಮಾಡಿ, ಹೊರದೂಡಿ, ಮಾಡುವುದೆಲ್ಲವೂ ನರನಾರಾಯಣನ, ದೇಶಮಾತೆಯ ಸೇವೆ ಎಂದು ಭಾವಿಸಿ ಜೀವನ ಸಂಗ್ರಾಮದಲ್ಲಿ ಹೋರಾಡಿದರು. ಅವರದು ನಿಷ್ಕಾಮಯೋಗ. ಅದರಿಂದಲೇ ಅವರಲ್ಲಿ ಸಂಪೂರ್ಣ ಸ್ವಾತಂತ್ರ್ಯ ಮನೋಧರ್ಮವಿತ್ತು. ಅವರು ತಮ್ಮ ಹೆಂಡತಿ, ಮಕ್ಕಳು, ಮನೆ ಮಠಗಳನ್ನು ಮಾತ್ರವೇ ತಮ್ಮದೆಂಬ ಸಂಕುಚಿತ ಭಾವದಿಂದ ಕೂಡಿರಲಿಲ್ಲ. ನಾಲ್ಕಾರು ಜನಗಳ ಸುಖ ಸಂತೋಷಗಳಿಗಾಗಿ ಅವರು ದುಡಿಯಲಿಲ್ಲ. ದೇಶವನ್ನೇ ಜಗತ್ತನ್ನೇ ತಮ್ಮದೆಂಬ ವಿಶಾಲ ಭಾವನೆಯಿಂದ ದುಡಿದರು. ಅವರು ಅವಿಶ್ರಾಂತರಾಗಿ ಪರಿಶ್ರಮಿಸಿದರೂ, ರಾಜ್ಯಲೋಭದಿಂದಾಗಲಿ, ಧನಾಕಾಂಕ್ಷೆಯಿಂದಾಗಲಿ, ಪದವಿ ಗೌರವದಿಂದಲಾಗಲಿ ಸ್ವಾರ್ಥಸಾಧಕರಾಗಿರಲಿಲ್ಲ. ಸ್ವಾತಂತ್ರ್ಯ ಜ್ಯೋತಿಯನ್ನು ನಾಡಿನಲ್ಲೆಲ್ಲಾ ಪ್ರಜ್ವಲಗೊಳಿಸಿ, ಅಖಂಡ ಸಾಮ್ರಾಜ್ಯವನ್ನು ಕಟ್ಟಲು ತಮ್ಮ ತಪಸ್ಸನ್ನು ಧಾರೆಯೆರೆದ ವಿದ್ಯಾರಣ್ಯರ ನಿಷ್ಕಾಮ ಸೇವೆಗೆ ಎಣೆಯುಂಟೆ !

**ಧರ್ಮವೀರ**

ವಿದ್ಯಾರಣ್ಯರು ಕಾವಿಯ ಬಟ್ಟೆಯನ್ನು ಧರಿಸಿಕೊಂಡು ಕೈಯಲ್ಲಿ ಯೋಗದಂಡ ಮತ್ತು ಜಪಸರವನ್ನು ಹಿಡಿದು ಲೋಕ ವ್ಯಾಪಾರವನ್ನೇ ಪರಿತ್ಯಜಿಸಿ, ಮೂಲೆಗುಂಪಾಗಿ ಕುಳಿತಿದ್ದ ಕಾಡು ಜೋಗಿಯಲ್ಲ, ಅವರು ವೀರಸಂನ್ಯಾಸಿ. ಆತ್ಮಧರ್ಮ ರಹಸ್ಯವನ್ನು ಅರಿತು ಅದನ್ನು ತಾವು ಆಚರಿಸುತ್ತ, ಅದರ ನಿಜಸ್ವರೂಪವನು

ಲೋಕಕ್ಕೆ ಬೋಧಿಸಿದ ಧರ್ಮವೀರರು, ಸತ್ಯಾನ್ವೇಷಕರು. ಆತ್ಮಾನಂದ ಲಭಿಸಬೇಕಾದರೆ ಮನಶ್ಶಾಂತಿ ಇರಬೇಕು; ಆತ್ಮತತ್ತ್ವ ವಿವೇಚನೆಯಿರಬೇಕು. ನಾವು ಹೊರಗಿನಿಂದ ಸುಖವನ್ನು ಅಪೇಕ್ಷಿಸುತ್ತಿರುವವರೆಗೂ ನಮಗೆ ಶಾಂತಿಯಿರುವುದಿಲ್ಲ. ನಮ್ಮಲ್ಲಿ ಸುಖದ ಭ್ರಾಂತಿಯು ಹೆಚ್ಚಿ ಅದನ್ನು ಅರಸುತ್ತ ಮಾರ್ಗ ತಪ್ಪಿ ಕಗ್ಗತ್ತಲೆಯಲ್ಲಿ ಅಲೆಯುತ್ತೇವೆ. ಕ್ಷಣಕ್ಷಣಕ್ಕೂ ಎಡವಿ ಬೀಳುತ್ತ ಸುಖಕ್ಕೆ ಪ್ರತಿಯಾಗಿ ದುಃಖವನ್ನು ಅನುಭವಿಸುತ್ತೇವೆ. ಇದರ ಮರ್ಮವನ್ನು ವಿದ್ಯಾರಣ್ಯರು ಮನಗಂಡು ಲೋಕಕಲ್ಯಾಣವನ್ನು ಸಾಧಿಸಿದರು. ಹೀಗೆ ಜನತೆಯಲ್ಲಿ ವೀರಧರ್ಮ ಸ್ವರೂಪವನ್ನು ಬೆಳೆಯಿಸಿ, ಅವರನ್ನು ಕರ್ಮಯೋಗದ ದಾರಿ ಹಿಡಿಯಿಸಿದರು. ಅದರಿಂದಲೇ ಅಂದಿನ ಲೋಕ ಅಜೇಯವಾಯಿತು. ಆತ್ಮಶಕ್ತಿಯ ಆಧಾರದಮೇಲೆ ರಾಷ್ಟ್ರಶಕ್ತಿಯನ್ನು ನಿಲ್ಲಿಸಿದರು. ಇದೇ ನಿಜ ವೇದಾಂತ ಧರ್ಮ. ಆದ್ದರಿಂದಲೇ ವಿದ್ಯಾರಣ್ಯರನ್ನು ಧರ್ಮವೀರರೆಂದು ಹೇಳುತ್ತಾರೆ. ಕೈಯಲ್ಲಿ ಆಯುಧವನ್ನು ಹಿಡಿದುಕೊಂಡು ಯುದ್ಧಭೂಮಿಯಲ್ಲಿ ಹೋರಾಡುವವನೇ ವೀರನಲ್ಲ; ಅಂಥ ವೀರನಿಗೆ ಅಂತಶ್ಶಕ್ತಿಯನ್ನು ತುಂಬಿ ಅವನನ್ನು ಕರ್ತವ್ಯಮುಖಕ್ಕೆ ತಿರುಗಿಸಬಲ್ಲವನೇ ಧರ್ಮವೀರ. ಅರ್ಜುನನನ್ನು ರಣವೀರನೆಂದರೆ, ಶ್ರೀಕೃಷ್ಣನನ್ನು ಧರ್ಮವೀರನೆನ್ನುವಂತೆ, ಹರಿಹರ, ಬುಕ್ಕರಾಯ ಮೊದಲಾದವರನ್ನು ಯುದ್ಧವೀರರೆಂದು ಕರೆದರೆ, ವಿದ್ಯಾರಣ್ಯರನ್ನು ಧರ್ಮವೀರರೆಂದು ಗೌರವಿಸಬೇಕಾಗಿದೆ.

**ಯೋಗ–ಭೋಗ ಸಾಮರಸ್ಯ**

ವಿದ್ಯಾರಣ್ಯರ ಹೃದಯದಲ್ಲಿ ರಾಗದ್ವೇಷಗಳಿಗೆ ಎಡೆಯಿರಲಿಲ್ಲ. ಅವರು ಮಹಾ ಸಾಧಕರು, ಕರ್ಮಾನುಷ್ಠಾನಪರರು. ದೇಶಹಿತವನ್ನು ಸದಾ ಲಕ್ಷ್ಯದಲ್ಲಿಟ್ಟುಕೊಂಡು, ಜನಬಲವನ್ನು ಹೆಚ್ಚಿಸುತ್ತ ನಿಸ್ವಾರ್ಥಭಾವದಿಂದ ಜೀವನಯಾತ್ರೆಯನ್ನು ಸಾಗಿಸಿದರು. ದಾರಿದ್ರ್ಯದಿಂದ ಅವರು ಕುಗ್ಗಲಿಲ್ಲ; ಧನಾಕಾಂಕ್ಷೆಯಿಂದ ಮೈಮರೆಯಲಿಲ್ಲ. ತಾವು ಸನ್ಮಂತ್ರಿಯಾಗಿದ್ದುಕೊಂಡು ನಾಲ್ಕು ಜನ ಅರಸರ ಬಳಿಯಲ್ಲಿದ್ದರೂ, ತಮ್ಮ ಎಲ್ಲ ಸೇವೆಯನ್ನು ರಾಷ್ಟ್ರರೂಪೀ ಪರಮಾತ್ಮನಿಗೆ ಅರ್ಪಿಸುತ್ತಿದ್ದರು. "ಹೊತ್ತಾರೆ ಎದ್ದು, ಕಣ್ಣ ಹೊಸೆವುತ್ತ, ಎನ್ನ ಒಡಲಿಂಗೆ, ಎನ್ನ ಒಡವೆಗೆ, ಎನ್ನ ಮಡದಿ ಮಕ್ಕಳಿಗೆಂದು

ಕುದಿದೆನಾದರೆ ಎನ್ನ ಮನಕ್ಕೆ ಮನವೇ ಸಾಕ್ಷಿ" ಎಂದು ಒಬ್ಬ ರಾಷ್ಟ್ರಪುರುಷರು ನುಡಿದಿರುವಂತೆ, ವಿದ್ಯಾರಣ್ಯರು ತಮ್ಮ ಸುಖಕ್ಕಾಗಿಯೇ ದುಡಿದವರಲ್ಲ. ಮಂತ್ರಿಯಾಗಿದ್ದರೂ, ಅವರು ಲೋಕಹಿತವನ್ನು ಸಾಧಿಸಿದರಲ್ಲದೆ ಸ್ವಾರ್ಥವನ್ನೇ ಅರಿಯರು. "ಹೊಲೆ ಹೊಲೆಯರ ಮನೆಯ ಹೊಕ್ಕಾದರೆಯೂ ಸಲೆ ಕೈಕೂಲಿಯ ಮಾಡಿದರೆಯೂ, ನಿಮ್ಮ ನಿಲವಿಂಗೆ ಕುದಿವೆನಲ್ಲದೆ ಎನ್ನೊಡಲವಸರಕ್ಕೆ ಕುದಿದೆನಾದರೆ ತಲೆದಂಡ" ಎನ್ನುವಂಥ ವೀರ ಜೀವನ ಅವರದು. ಅವರ ಪರಿಶುದ್ಧ ಹೃದಯದಲ್ಲಿ ತುಂಬಿದ್ದುದು ದೇಶಪ್ರೇಮ, ಅವರ ಮಾತಿನಲ್ಲಿ ಹೊರಸೂಸುತ್ತಿದ್ದುದು ರಾಷ್ಟ್ರಭಕ್ತಿ; ಅವರ ನಡೆಯಲ್ಲಿ ಗೋಚರಿಸುತ್ತಿದ್ದುದು ಲೋಕಪ್ರಗತಿ. ಅವರ ಬಾಹ್ಯ ವ್ಯಾಪಾರಗಳೆಲ್ಲ ಸ್ವರಾಜ್ಯ ಸಾಧನೆಗೆ ಮೀಸಲು, ಅವರ ಅಂತರಂಗವೆಲ್ಲ ಪರಮಾತ್ಮನ ಧ್ಯಾನಕ್ಕೆ ಮುಡಿಪು. ಹೀಗೆ, ಯೋಗ–ಭೋಗ ಜೀವನ ಸಾಮರಸ್ಯವೇ ಮೈವೆತ್ತಂತೆ ಕಾಣುತ್ತಿತ್ತು ಅವರ ವ್ಯಕ್ತಿತ್ವ. ಅವರು ವಿಷಯಲಂಪಟರಲ್ಲ; ನಿರ್ಮಲಾಂತಃಕರಣರು; ಸ್ವಾರ್ಥಿಯಲ್ಲ, ಪರಾರ್ಥ.

ವಿದ್ಯಾರಣ್ಯರು ಸಾತ್ವಿಕಮೂರ್ತಿ. ಸಾತ್ವಿಕ ಗುಣವೆಂದರೆ ಕೇವಲ ಹೇಡಿತನದ ಲಕ್ಷಣವೆಂಬ ಅರ್ಥ ಬರುತ್ತದೆ. ಯಾರಗೊಡವೆ ನಮಗೇಕೆ; ನಾವು ಒಬ್ಬರ ಹವ್ಯಾಸಕ್ಕೆ ಹೋಗಬಾರದು, ನಮ್ಮ ಪಾಡು ನಮಗಿರಲಿ–ಎಂಬ ಮನೋವೃತ್ತಿಯನ್ನು ಸಾಮಾನ್ಯವಾಗಿ ಜನ ಸಾತ್ವಿಕ ಗುಣವೆಂದು ಅರಿಯುತ್ತಾರೆ. ಇದು ನಿಜವಾದ ಸಾತ್ವಿಕ ಗುಣವಲ್ಲ ವೀರ ಆಂಜನೇಯ ಶ್ರೀರಾಮಚಂದ್ರನ ಅವಿಚ್ಛಿನ್ನಭಕ್ತ, ಪರಮಭಕ್ತ. ಆದರೆ ಅವನು ಧರ್ಮಲೋಪವನ್ನು ಸಹಿಸುತ್ತಿರಲಿಲ್ಲ. ಶ್ರೀರಾಮನ ರಾಯಭಾರಿಯಾಗಿ ಹೋಗಿದ್ದ ಹನುಮಂತನನ್ನು ತುಂಬಿದ ಸಭೆಯಲ್ಲಿ ರಾವಣನು ಗೌರವಿಸಲಿಲ್ಲನೆಂದು ಕೂಡಲೆ ಆ ಕೆಚ್ಚೆದೆಯ ವೀರನು ಲಾಂಗೂಲಾಸನವನ್ನು ನಿರ್ಮಿಸಿ ಉಚ್ಚಸ್ಥಾನದಲ್ಲಿಯೇ ಕುಳಿತುಕೊಂಡನು. ಸಾತ್ವಿಕರು ಯಾವಾಗಲೂ, ಯಾವ ಸಮಯದಲ್ಲಿಯೂ। ಆತ್ಮಗೌರವವನ್ನು ಕಳೆದುಕೊಳ್ಳಲಾರರು. ಸ್ವಾಭಿಮಾನ ಶೂನ್ಯತೆಯೇ ಸಾತ್ವಿಕ ಗುಣವಲ್ಲ. ಪಂಚಪಾಂಡವರಲ್ಲಿ ಭೀಮಸೇನನು ಸಾತ್ವಿಕಗುಣಭರಿತನು. ಆತ್ಮಗೌರವಕ್ಕೆ ಎಳ್ಳಷ್ಟು ಚ್ಯುತಿ

**ಮಹಾನಾಯಕ**

ಬರುವಂತಿದ್ದರೂ ಅವನು ಸಹಿಸುತ್ತಿರಲಿಲ್ಲ. ಆ ಭೀಮಗುಣ ಆ ಹನುಮ ಶೌರ್ಯ ವಿದ್ಯಾರಣ್ಯರಲ್ಲಿದ್ದುವು. ಅವರು ಜನತೆಯ ಮಹಾನಾಯಕರಾಗಿ ನಿಲ್ಲಲು ಅರ್ಹರಾಗಿದ್ದರು. ಕೂಲಂಕಷವಾದ ವಿಷಯ ಪರಿಜ್ಞಾನ, ಸಮಯ ಸಂಧಾನ ಚಾತುರ್ಯ, ಇಂಗಿತಜ್ಞತೆ, ದೂರಾಲೋಚನೆ—ಇವು ಜನನಾಯಕರಲ್ಲಿರಬೇಕು. ವಿದ್ಯಾರಣ್ಯರು ಭಿನ್ನ ಭಿನ್ನ ಅಭಿರುಚಿಗಳಿದ್ದ ಜನರನ್ನು ಒಟ್ಟುಗೂಡಿಸಿ, ಕಾಲಕ್ಕೆ ತಕ್ಕಹಾಗೆ ಅವರಲ್ಲಿ ಸರಿಹೊಂದಿಕೊಂಡು ವರ್ತಿಸುತ್ತಿದ್ದರು. ಅವರು ಋಷಿಯಂತೆ ಪ್ರಶಾಂತ ಮನಸ್ಸಿನವರಾಗಿದ್ದರೂ ರಣವೀರನಂತೆ ಧೈರ್ಯಶಾಲಿಗಳೂ ಆಗಿದ್ದರು. ವಿಶ್ವಾಮಿತ್ರನಂಥ ಸಾತ್ವಿಕ ಕರ್ಮಯೋಗಿಯಾಗಿದ್ದರು. ಲೌಕಿಕ ಕಾರ್ಯಗಳಲ್ಲಿ ಅವರು ನಿಪುಣರಾಗಿದ್ದಂತೆಯೇ ಪಾರಮಾರ್ಥಿಕ ಜೀವನದಲ್ಲಿಯೂ ಸರ್ವಾರ್ಥಸಿದ್ಧಿಗಳಾಗಿದ್ದರು. ಅವರಲ್ಲಿದ್ದ ಕ್ರಿಯಾಸಿದ್ಧಿ, ಆತ್ಮಶಕ್ತಿ, ಧರ್ಮ ಪ್ರೇಮ—ಇವುಗಳಿಂದ ಅವರು ಮಹಾನಾಯಕರಾಗಿ ನಿಂತರು. ಅರಣ್ಯದಲ್ಲಿ ಪರ್ಣಕುಟೀರದಲ್ಲಿದ್ದ ಯೋಗಿ ಅರಮನೆಯಲ್ಲಿ ರಾಜಸನ್ನಿಧಿಯಲ್ಲಿ ಮಂತ್ರಿಯಾಗಿದ್ದರೆಂಬಮೇಲೆ, ಅವರನ್ನು ಎಲ್ಲ ಅಂತಸ್ತಿನ ಜನರೂ ಜಾತಿ ಮತ ಭೇದವಿಲ್ಲದೆ ಅನುಸರಿಸುತ್ತಿದ್ದರು. ಸನಾತನ ಧರ್ಮಿಯರಲ್ಲಿ ಸನಾತನ ಧರ್ಮನಿರತರಾಗಿದ್ದಂತೆಯೇ ರಾಜಕಾರಣಪಟುಗಳಲ್ಲಿ ರಾಜಕಾರಣ ನಿಪುಣರಾಗಿದ್ದರು. ಅವರು ಶಾಂತಿಮಂತ್ರವನ್ನು ಉಚ್ಚರಿಸುತ್ತಿದ್ದಂತೆಯೇ ರಣಗೀತೆಯನ್ನೂ ಹಾಡುತ್ತಿದ್ದರು. ಮತಧರ್ಮ ಮತ್ತು ರಾಜಕೀಯಗಳ ಸಮನ್ವಯದಲ್ಲಿ ಅವರು ಅಗ್ರಗಣ್ಯರಾಗಿದ್ದರು. ಆದರಿಂದಲೇ ಅಂದು ಲೋಕ ಅವರನ್ನು ಆರಾಧಿಸಿತು; ಅನುಸರಿಸಿತು.

ವಿದ್ಯಾರಣ್ಯರು ಶೃಂಗೇರಿ ಗುರುಪೀಠವನ್ನು ಅಲಂಕರಿಸಿ ಸನಾತನ ಧರ್ಮವನ್ನು ಪುನರುದ್ಧಾರ ಮಾಡಿದರು. ಅದರಂತೆಯೇ

**ರಾಜಯೋಗಿ** ಅವರು ರಾಜಕಾರಣದಲ್ಲಿ ಚತುರರಾಗಿ ರಾಜ್ಯಸ್ಥಾಪನೆಯಲ್ಲಿ ಕೃತಕಾರ್ಯರಾದರು. ಸನಾತನಧರ್ಮ ಸಂನ್ಯಾಸಿಯಂತೆ ಅವರು ಕೇವಲ ಪಾರಮಾರ್ಥಿಕ ಚಿಂತನೆಯಲ್ಲಿಯೇ ಕಾಲ ಕಳೆಯಲಿಲ್ಲ. ರಾಜ್ಯಸೂತ್ರಗಳನ್ನು ಹಿಡಿದು ತಾವೇ ರಾಜಕಾರ್ಯಗಳನ್ನು ನಡೆಯಿಸದಿದ್ದರೂ, ಸಾಮ್ರಾಜ್ಯ ಸ್ಥಾಪನೆಯಲ್ಲಿ ಚಾಣಕ್ಯನಂತೆಯೂ ಮಂತ್ರಿತ್ವ

ದಲ್ಲಿ ಬೃಹಸ್ಪತಿಯಂತೆಯೂ ಚಾಕಚಕ್ಯದಿಂದ ವರ್ತಿಸಿ ರಾಜಯೋಗಿಯೆನಿಸಿ ಕೊಂಡರು. ಅವರಲ್ಲಿ ಬ್ರಹ್ಮತೇಜಃಪೂರ್ಣ ಮಂತ್ರಶಕ್ತಿ ಇದ್ದಂತೆಯೇ ರಾಜ ತೇಜೋಭರಿತವಾದ ಪ್ರಭುಶಕ್ತಿಯೂ ನೆಲಸಿತ್ತು. ರಾಜ ಸಿಂಹಾಸನದಲ್ಲಿ ಮಂಡಿಸದಿದ್ದರೂ ಅವರಲ್ಲಿ ರಾಜಲಕ್ಷಣ ತುಂಬಿತ್ತು. ಅವರು ಕೂಡುತ್ತಿದ್ದ ವ್ಯಾಘ್ರಾಜಿನವೇ ಅವರಿಗೆ ರಾಜಗದ್ದುಗೆ, ಅವರ ಕೈಯಲ್ಲಿದ್ದ ಯೋಗ ದಂಡವೇ ಅವರಿಗೆ ರಾಜದಂಡ ಕೋದಂಡ. ಅವರಿದ್ದ ಎಲೆಮನೆಯೇ ಅವರ ಅರಮನೆ; ಅವರು ಹಿಡಿದಿದ್ದ ಕಮಂಡಲೋದಕವೇ ಅವರ ರತ್ನಭಂಡಾರ; ಬ್ರಹ್ಮನಿಷ್ಠೆಯೇ ಮಣಿ ಮಕುಟ, ಅವರಿಗಿದ್ದ ಧೀಶ್ಯಕ್ತಿಯೇ ಅವರ ಸೈನ್ಯ ಬಲ; ಗಾಯತ್ರೀ ಮಂತ್ರವೇ ರಾಜಮಂತ್ರ, ಜಪಸರವೇ ಪರಪೀಡನೆ ಯನ್ನು ನಿವಾರಿಸುವ ರಾಜಪಾಶ, ಕಾಷಾಯಾಂಬರವೇ ಕನಕ ಪೀತಾಂ ಬರ, ಆತ್ಮಬಲವೇ ಕೋಟೆ, ರಾಷ್ಟ್ರಪ್ರೇಮವೇ ಕೊತ್ತಲು; ದೇಶಾಭಿ ಮಾನವೇ ಕಂದಕ, ಸನಾತನ ಧರ್ಮವೇ ಅವರ ಸಾಮ್ರಾಜ್ಯ. ಹೀಗೆ ವಿದ್ಯಾರಣ್ಯರು ಯೋಗಿಯಂತೆ ಪರ್ಣಶಾಲೆಯಲ್ಲಿದ್ದರೂ ರಾಜಯೋಗಿಯಂತೆ ವಿರಾಜಿಸುತ್ತಿದ್ದರು. ರಾಜಾಶ್ರಯದಲ್ಲಿ ತಮ್ಮ ಜೀವನ ತಪಸ್ಸನ್ನು ಸಾಗಿಸಿದ ಮಹಾತ್ಮರು ಅನೇಕರುಂಟು. ಆದರೆ ತಮ್ಮ ಆಶ್ರಯದಲ್ಲಿ ಒಂದು ರಾಜ ವಂಶವನ್ನು ನೆಟ್ಟಗೆ ನಿಲ್ಲಿಸಿ ಒಂದು ಅಖಂಡ ಸಾಮ್ರಾಜ್ಯವನ್ನು ಕಟ್ಟಲು ನೆರವಾದ ಮಹಾತ್ಮರ ಸಂಖ್ಯೆ ಚರಿತ್ರೆಯಲ್ಲಿ ತೀರ ವಿರಳ. ಅದರಿಂದಲೇ ನಾವು ವಿದ್ಯಾರಣ್ಯರನ್ನು ರಾಜಯೋಗಿಯೆಂದು ಕರೆಯಬಹುದು.

ವಿದ್ಯಾರಣ್ಯರು ತಮ್ಮ ಆಯುಸ್ಸನ್ನು ಲೋಕ ಹಿತಾರ್ಥಕ್ಕಾಗಿಯೇ ಕಳೆ ದರು ಅವರ ನಿಸ್ವಾರ್ಥಶಕ್ತಿಯ ಮುಂದೆ ತನ್ನದೆಂಬ ಯಾವುದೊಂದು ಸ್ವಾರ್ಥತೆಯೂ ನಿಲ್ಲಲಿಲ್ಲ. ಲೋಕದ ಶ್ರೇಯಸ್ಸಿಗಾಗಿಯೇ

**ಲೋಕಗುರು** ಅವರು ಜೀವಿಸಿದರು. ಧರ್ಮಲೋಪವಾಗುತ್ತಿದ್ದ ಕಾಲ ದಲ್ಲಿ ಅವರು ಧರ್ಮಸ್ವರೂಪರಾಗಿ ನಿಂತು ಧರ್ಮೋದ್ಧಾರ ಕಾರ್ಯದಲ್ಲಿ ನಿರತರಾದರು. ವೈದಿಕ ವಾಙ್ಮಯವನ್ನು ಬೆಳೆಯಿಸಿ ಆರ್ಯ ಧರ್ಮಕ್ಕೆ ನವಚೈತನ್ಯವನ್ನುಂಟುಮಾಡಿದರು. ದಾರಿತಪ್ಪಿ ಹಲುಬುತ್ತಿದ್ದ ಜನತೆಯನ್ನು ಕರ್ತವ್ಯಮಾರ್ಗಕ್ಕೆ ತಿರುಗಿಸಿದರು. ಜನರಲ್ಲಿ ದೇಶಪ್ರೇಮ ವನ್ನು ಉಕ್ಕಿಸಿ ತಾಯ್ನಾಡಿನ ಮೇಲ್ಮೆಗಾಗಿ ದುಡಿಯುವ ಮನೋಭಾವವ

ನ್ನುಂಟುಮಾಡಿದರು. ಅವರು ಭಕ್ತರಿಂದ ಕಾಣಿಕೆಯನ್ನು ಸ್ವೀಕರಿಸಿ ಪ್ರಸಾದವನ್ನು ಕೊಡುವ ಧರ್ಮ ಗುರುವಿನಂತೆ ಇರುತ್ತಿರಲಿಲ್ಲ. ವೀರವಾಣಿಯಿಂದ ಜನತೆಯ ಗುಪ್ತಶಕ್ತಿಯನ್ನು ಹೊಡೆದೆಬ್ಬಿಸಿ, ಅವರಲ್ಲಿ ಐಕಮತ್ಯವನ್ನುಂಟುಮಾಡುತ್ತಿದ್ದರು. ಮಠಪತಿಯಾಗಿ ತಾವು ಮಾತ್ರ ನೆಮ್ಮದಿಯಾಗಿರಲು ಬಯಸಿದವರಲ್ಲ. ಲೋಕಹಿತಸಾಧನೆಗಾಗಿಯೇ ತವಕಿಸುತ್ತಿದ್ದ ಮಹಾ ಗುರುವಾಗಿದ್ದರು. ಜನರಲ್ಲಿ ಅಂಜುಬುರುಕುತನ, ಅಲಸಿಕೆ, ನಿರಭಿಮಾನ ಮತ್ತು ಸ್ವೈಚ್ಛ್ಯಾನುಸಂಧಾನ, ಮುಂತಾದ ಹೀನಗುಣಗಳನ್ನು ನಿರ್ಮೂಲಗೊಳಿಸಿ ಧೈರ್ಯ, ಕಾರ್ಯತತ್ಪರತೆ, ಸದಭಿಮಾನ ಮತ್ತು ಆತ್ಮಗೌರವಗಳನ್ನು ತುಂಬಿದ ವೀರಗುರು ಅವರು. ಅತಿರುದ್ರ, ವಾಜಪೇಯ, ಮುಂತಾದ ಯಾಗಗಳನ್ನು ಮಾಡಿಸಿ ಸ್ವರ್ಗವನ್ನು ತೃಪ್ತಿಪಡಿಸಲು ಅವರು ಅಪೇಕ್ಷಿಸಲಿಲ್ಲ ; ಆತ್ಮಯಜ್ಞದಿಂದ ಲೋಕಕ್ಷೇಮವನ್ನು ಸಾಧಿಸಿ ಭೂಮಿಯನ್ನು ಸ್ವರ್ಗಸದೃಶವಾಗಿ ಮಾಡಲು ಶ್ರಮಿಸಿದರು. ಅವರ ಎಲ್ಲ ಹಿಂದೂ ಪಂಗಡಗಳ ಗೌರವಾದರಗಳಿಗೆ ಪಾತ್ರರಾಗಿದ್ದಾರೆ. ಸಿಕ್ಕರನ್ನು ನಿಜಧರ್ಮ ಮಾರ್ಗದಲ್ಲಿ ನಡೆಯಿಸಿ ಅವರನ್ನು ಕಡುಗಲಿಗಳನ್ನಾಗಿ ಪರಿವರ್ತಿಸಿದ ಮಹಾವೀರ ಗುರುಗೋವಿಂದರಂತೆ ವಿದ್ಯಾರಣ್ಯರು ನಿಸ್ತೇಜ ಕರ್ಣಾಟಕವನ್ನು ಅಂದು ವೀರಜನಾಂಗವಾಗುವಂತೆ ರೂಪಿಸಿದರು. ಅವರು ಕನ್ನಡಿಗರ ಹೃದಯ ಪೀಠಗಳಲ್ಲಿ ಎಂದೆಂದಿಗೂ ಮಂಡಿಸಿರುತ್ತಾರೆಂದಮೇಲೆ ಅವರು ಲೋಕಾರಾಧ್ಯರೆಂದು ಬೇರೇ ಹೇಳಬೇಕೆ !

**ಸನ್ಮಂತ್ರಿ**

ಶ್ರೀ ವಿದ್ಯಾರಣ್ಯರು ರಾಜಕಾರ್ಯಗಳಲ್ಲಿ ನಾಲ್ಕು ಮಂದಿ ಅರಸರಿಗೆ ಮಹಾಮಂತ್ರಿಯಾಗಿದ್ದರು. ಅವರು ರಾಜ್ಯಕ್ಷೇಮಚಿಂತನೆಯಿಂದ ಸದಾ ರಾಜರಿಗೆ ಕಾಲೋಚಿತವಾದ ಸಲಹೆಗಳನ್ನು ಕೊಡುತ್ತಿದ್ದರು. ಕರ್ಣಾಟಕವೇ ಬಲಗುಂದಿ, ಉತ್ತರದ ಕಡೆಯಿಂದ ಶತ್ರುಗಳ ಹಾವಳಿಯು ಒದಗುತ್ತಿದ್ದಾಗ ಅವರು ಬಹು ಜಾಣ್ಮೆಯಿಂದ ರಾಜತಂತ್ರವನ್ನು ನಡೆಯಿಸಿದರು. ಜನಸಹಾಯವಿಲ್ಲದೆ ಅಲೆಯುತ್ತಿದ್ದ ಹರಿಹರ, ಬುಕ್ಕರಾಯರಿಗೆ ಸಕಾಲದಲ್ಲಿ ಸ್ಫೂರ್ತಿಯನ್ನುಂಟುಮಾಡುತ್ತ ಜನರಲ್ಲಿ ಐಕಮತ್ಯವನ್ನು ಬೆಳೆಯಿಸಿ ರಾಜ್ಯಸ್ಥಾಪನೆಗೆ ನೆರವಾದರು. ಆನೆಗೊಂದಿಯ ಮಂತ್ರಿ ದೇವರಾಯನಿಗೆ ಹರಿಹರ ಸಹೋದರರನ್ನು ಪರಿಚಯಮಾಡಿಸಿ

ಸ್ನೇಹಬಾಂಧವ್ಯವನ್ನುಂಟುಮಾಡುವುದರ ಮೂಲಕ ಕರ್ಣಾಟಕ ಸಾಮ್ರಾಜ್ಯ ಸ್ಥಾಪನೆಯ ತಳಹದಿಯನ್ನು ಸುಭದ್ರಗೊಳಿಸಿದರು. ಶತ್ರುಗಳಿಗೆ ಅವರ ಯಾವುದೊಂದು ಕಾರ್ಯಾನುಸಂಧಾನದ ಸುಳಿವೂ ತಿಳಿಯದಂತೆ ಬಹಳ ಎಚ್ಚರಿಕೆಯಿಂದ ವರ್ತಿಸುತ್ತಿದ್ದರು. ಎಂಥ ಕಠಿಣ ಪ್ರಸಂಗದಲ್ಲಿಯೂ ಅವರು ನಿರ್ಭಯದಿಂದಲೂ ಜತನದಿಂದಲೂ ತಮ್ಮ ಉದ್ದೇಶವನ್ನು ಸಾಧಿಸುತ್ತಿದ್ದರು. ದೆಹಲಿಯ ದಂಡು ಬಂದು ಆನೆಗೊಂದಿಯನ್ನು ಮುತ್ತುವ ಸಂದರ್ಭದಲ್ಲಿ ವಿದ್ಯಾರಣ್ಯರು ಸಮರಾತ್ರಿಯಲ್ಲಿ ಜಂಬುಕೇಶ್ವರರಾಯನ ಅರಮನೆಯಿಂದ ರಾಜಪುತ್ರಿ ಗಿರಿಜಾದೇವಿಯನ್ನು ವಟುವೇಷದಿಂದ ತಮ್ಮೊಂದಿಗೆ ಆಶ್ರಮಕ್ಕೆ ಕರೆತಂದು ಸುರಕ್ಷಿತವಾಗಿ ಕಾಪಾಡಿದರು. ಇಂಥಾ ಎಷ್ಟೋ ಪ್ರಸಂಗಗಳನ್ನು ಅವರು ಲೀಲಾಜಾಲವಾಗಿ ತಮ್ಮ ಬುದ್ಧಿಶಕ್ತಿಯಿಂದ ನಿರ್ವಹಿಸುತ್ತಿದ್ದರು, ಜಯಶೀಲರಾಗುತ್ತಿದ್ದರು. ಯುದ್ಧಭೂಮಿಯಲ್ಲಿ ಸೇನಾವ್ಯೂಹಗಳನ್ನು ರಚಿಸಿ, ಕಾಲವರಿತು ಶತ್ರುವಿನಮೇಲ ಬೀಳಬೇಕೆಂಬ ಹಂಚಿಕೆಯನ್ನು ಸೂಚಿಸುವುದರ ಮೊದಲುಗೊಂಡು ಅರಮನೆಯಲ್ಲಿ ರಾಜನು ಪರರಾಯರೊಡನೆ ನಡೆಯಿಸತಕ್ಕ ವಿದೇಶಾಂಗ ನೀತಿಯನ್ನು ತಿಳಿಸುವವರೆಗೂ ಎಲ್ಲ ಕಾರ್ಯಗಳಲ್ಲಿಯೂ ವಿದ್ಯಾರಣ್ಯರು ಸಲಹೆ ಕೊಡುತ್ತಿದ್ದರು. ಪರಕೀಯರ ಆಕ್ರಮಣದಿಂದ ದೇಶವು ದುರವಸ್ಥೆಯಲ್ಲಿದ್ದಾಗ ಅವರು ತಮ್ಮ ಬುದ್ಧಿಶಕ್ತಿಯಿಂದ ರಾಜೋಪಾಯಗಳನ್ನು ಕಂಡು ಹಿಡಿದು ಹಗೆಗಳ ಪ್ರಾಬಲ್ಯವನ್ನು ಮುರಿದರು. ಅವರ ರಾಜಮಂತ್ರ ನೈಪುಣ್ಯದಿಂದ ಕರ್ಣಾಟಕದಲ್ಲಿ ಸ್ವರಾಜ್ಯ ಸ್ಥಾಪನೆಯಾಗಿ ಕನ್ನಡ ನಾಡಿನ ಆಧಿಪತ್ಯವು ಮತ್ತೊಮ್ಮೆ ನೆಲೆಗೊಂಡಿತು. ಅವರ ಧೀಶಕ್ತಿಯ ಪ್ರಭಾವದಿಂದ ಭಾರತೀಯ ಸಂಸ್ಕೃತಿಯು ಪುನಃ ನವಚೈತನ್ಯವನ್ನು ತುಂಬಿಕೊಂಡು ಭಾರತೀಯರ ನಾಗರಿಕತೆಯು ಬೆಳೆಯಲು ಅನುವಾಯಿತು. ಅವರ ಸಂಕಲ್ಪದಂತೆ ಅವರ ಮನೋರಥ ಈಡೇರಿ ಕನ್ನಡ ನಾಡು ನಿರಾತಂಕವಾಗಿ ಪುಷ್ಟವಾಗುತ್ತಿತ್ತು.

ರಾಜ್ಯಸ್ಥಾಪನೆಯ ಪ್ರಾರಂಭಕಾಲದಲ್ಲಿ ವಿದ್ಯಾರಣ್ಯರು ಹರಿಹರ ಬುಕ್ಕರಾಯ, ಇಮ್ಮಡಿ ಹರಿಹರರಾಯ ಮತ್ತು ಕೆಲವು ದಿನಗಳವರೆಗೆ ಇಮ್ಮಡಿ ಬುಕ್ಕರಾಯ ಇವರಿಗೆ ಮಹಾಮಂತ್ರಿಯಾಗಿದ್ದುಕೊಂಡು ರಾಜ್ಯಸೂತ್ರಗಳನ್ನು ಸುಲಲಿತವಾಗಿ ನಡೆಯಿಸಿದರು. ಅವರು ನೀಡಿದ ರಾಜಶಿಕ್ಷಣ ಬಲದಿಂದ

ಪ್ರಭುತ್ವ ಶಕ್ತಿ ಸುದೃಢವಾಗಿ ನೆಲಗೊಂಡು ಮುಂದೆ ಅನೇಕ ಪ್ರಬಲ ಪರಾಕ್ರಮಿಗಳು ರಾಜಸಿಂಹಾಸನದಲ್ಲಿ ಮಂಡಿಸಿ ವಿಜಯನಗರದ ಕೀರ್ತಿ ಪ್ರತಿಷ್ಠೆಗಳನ್ನು ಬೆಳೆಯಿಸಿದರು. ಸುವ್ಯವಸ್ಥಿತವಾದ ರಾಜ್ಯದಲ್ಲಿ ಪ್ರಭುವಿಗೆ ಮಂತ್ರಾಲೋಚನೆಯನ್ನು ನೀಡಿದ ಮೇಧಾವಿ ಮಂತ್ರಿಗಳು ಅನೇಕರು ಆಗಿ ಹೋಗಿರಬಹುದು. ಆದರೆ, ಅನಾಯಕವಾಗಿದ್ದ ಮತ್ತು ನಿರ್ಬಲವಾಗಿದ್ದ ಒಂದು ಜನಾಂಗವನ್ನು ಒಟ್ಟುಗೂಡಿಸಿ, ರಾಜ್ಯಸ್ಥಾಪನೆಯ ಕಾರ್ಯದಲ್ಲಿ ನೆರವಾಗಿ ದೇಶಾಭ್ಯುದಯವನ್ನು ಸಾಧಿಸಿ ಪ್ರಭುಶಕ್ತಿಯನ್ನು ಪ್ರತಿಷ್ಠೆಗೊಳಿಸಿ ಕೀರ್ತಿಕಾಯರಾದ ವಿದ್ಯಾರಣ್ಯರಂಥ ಸನ್ಮಂತ್ರಿಗಳು ಹುಟ್ಟುವುದು ದುರ್ಲಭ.

ವಿದ್ಯಾರಣ್ಯರ ಜೀವನ ವೈಶಿಷ್ಟ್ಯವೆಂದರೆ ಅವರು ಮಹಾ ಆತ್ಮಜ್ಞಾನಿಯಾಗಿದ್ದುದು. "ಆತ್ಮವತ್ ಸರ್ವಭೂತಾನಿ"—ಎಂಬಂತೆ ಆತ್ಮಜ್ಞಾನಿ ಯಾವಾಗಲೂ ಎಲ್ಲ ಜೀವರಾಶಿಗಳನ್ನೂ ತನ್ನಂತೆಯೇ ಆತ್ಮಜ್ಞಾನಿ ಕಾಣುತ್ತಾನೆ. ಹಾಗೆಯೇ, ಅವರು ಪಾರಮಾರ್ಥಿಕ ದೃಷ್ಟಿಯಲ್ಲಿ ಎಲ್ಲರೂ ಒಂದೇ ಎಂದು ಭಾವಿಸಿದ್ದರು. ಮೊಟ್ಟಮೊದಲು ತನ್ನನ್ನು ತಾನು ತಿಳಿದುಕೊಳ್ಳುವುದೇ ಆತ್ಮಜ್ಞಾನ. ಇದಕ್ಕೆ ಸ್ವಸ್ವರೂಪಜ್ಞಾನವೆಂದೂ ಹೆಸರು. ಪರಂಜ್ಯೋತಿಸ್ವರೂಪನಾದ ಪರಮಾತ್ಮನನ್ನು ಅವರು ತಮ್ಮ ಹೃದಯದಲ್ಲಿಯೇ ಕಾಣುತ್ತಿದ್ದರು. ಅವರು ಮಾನವತ್ವದಿಂದ ದೇವತ್ವಕ್ಕೆ ಸಾಗುತ್ತಿದ್ದರು. ಆತ್ಮನಿಗೆ ಎಂದೂ ನಾಶವಿಲ್ಲ. ಮಳೆ, ಬಿಸಿಲು, ಬೆಂಕಿ, ಗಾಳಿ-ಇವು ಯಾವುವೂ ಆತ್ಮನನ್ನು ಬಾಧಿಸಲಾರವು. ಆತ್ಮತತ್ತ್ವಚಿಂತನೆಯಲ್ಲಿ ಅವರು ಮಗ್ನರಾಗಿ ವಿಶ್ವವನ್ನೇ ತಮ್ಮ ಹೃದಯದಲ್ಲಿ ಕಾಣುತ್ತಿದ್ದರು. ಅವರಿಗೆ ಅಪ್ರತಿಹತವಾದ ಆತ್ಮಬಲವಿತ್ತು. ಆತ್ಮತೇಜಸ್ಸು ಅವರಲ್ಲಿ ಪರಿಪೂರ್ಣವಾಗಿತ್ತು. ಅವರು ಲೌಕಿಕ ವ್ಯಾಪಾರದಲ್ಲಿ ನಿರತರಾಗಿದ್ದರೂ ಆಧ್ಯಾತ್ಮಿಕ ಶಕ್ತಿಯನ್ನು ಬೆಳೆಯಿಸಿಕೊಳ್ಳುತ್ತಿದ್ದರು. ಅವರಿಗೆ ಪಾಪಲೇಪನವಿರಲಿಲ್ಲ ; ಪುಣ್ಯ ಸಂಚಯವಿರಲಿಲ್ಲ. ನಿತ್ಯಮುಕ್ತರಾಗಿದ್ದ ವಿದ್ಯಾರಣ್ಯರ ಪವಿತ್ರ ಹೃದಯದಲ್ಲಿ ಆತ್ಮಜ್ಞಾನಜ್ಯೋತಿ ಪ್ರಕಾಶಿಸುತ್ತಿತ್ತು. ಶ್ರೀ ಶೃಂಗೇರಿ ಗುರುಪೀಠದಲ್ಲಿ ಮಂಡಿಸಿದ ಗುರುಪರಂಪರೆಯಲ್ಲಿ ಆದಿಶಂಕರಾಚಾರ್ಯರನ್ನು ಬಿಟ್ಟರೆ ವಿದ್ಯಾರಣ್ಯರನ್ನು ಮಹಾಜ್ಞಾನಿಗಳೆಂದು ಹೇಳಬಹುದು. ಅವರು ಲೋಕಕ್ಕೆ ಆದರ್ಶಪುರುಷರಾಗಿದ್ದುದರಿಂದ

ಧಾರ್ಮಿಕ ಮತ್ತು ವ್ಯಾವಹಾರಿಕ ಜೀವನ ಕ್ಷೇತ್ರಗಳಲ್ಲಿ ಸದಾ ಕರ್ಮತತ್ಪರರಾಗಿರುತ್ತಿದ್ದರಲ್ಲದೆ, ತಮ್ಮ ಯಾವುದೊಂದು ಸ್ವಾರ್ಥತೆಗಾಗಿಯೂ ದುಡಿಯುತ್ತಿರಲಿಲ್ಲ. ಅವರಿದ್ದ ಸ್ಥಳವೇ ನಿತ್ಯಕ್ಷೇತ್ರ. ತುಂಗಭದ್ರಾನದಿಯ ಪುಣ್ಯಸಲಿಲ ಅವರ ಆತ್ಮಧರ್ಮವಾಹಿನಿಯಂತೆ ಪ್ರವಹಿಸುತ್ತಿತ್ತು. ವನರಾಜಿಯೆಲ್ಲ ಆತ್ಮಜ್ಞಾನತತ್ಪರರಾದ ಮುನಿವೃಂದವೆಂಬಂತೆ ಕಾಣುತ್ತಿತ್ತು. ಪ್ರಶಾಂತವಾದ ಪುಣ್ಯಾವರಣವೇ ಆ ಎಡೆಯಲ್ಲಿ ಕಂಗೊಳಿಸುತ್ತಿತ್ತು. ವಿದ್ಯಾರಣ್ಯರಂತೆ ಆತ್ಮಜ್ಞಾನಸಂಪನ್ನರು ಲೌಕಿಕ ರಂಗದಲ್ಲಿ ಯಶಸ್ವಿಗಳಾಗಿ ಕಾರ್ಯಮಾಡಿ ರಾಷ್ಟ್ರೋದ್ಧಾರವನ್ನು ಮಾಡಿದವರು ಎಷ್ಟು ಮಂದಿ ಇದ್ದಾರು! ಇಂಥ ಮಹಾಪುರುಷರು ಎಲ್ಲ ಕಾಲದಲ್ಲಿಯೂ ಪೂಜ್ಯರಾಗಿರುತ್ತಾರೆ. ವಿದ್ಯಾರಣ್ಯರಂಥ ಅಸದೃಶ ರಾಜಕಾರಣವೇತ್ತರೂ, ಆಧ್ಯಾತ್ಮಿಕ ಗುರುವರ್ಯರೂ ಯಾವ ಜನಾಂಗಕ್ಕಾದರೂ ಭೂಷಣಪ್ರಾಯರ! ಅದ್ವೈತ ಸಿದ್ಧಾಂತದಂತೆ ಅವರು ಅದ್ವೈತ ಭಾವದಲ್ಲಿ ಶಿವಸ್ವರೂಪಿಯಾಗಿದ್ದರು. ಜೀವನ್ಮುಕ್ತರಾಗಿದ್ದರು.

**ವಾಙ್ಮಯ ಪುರುಷ**

ವಿದ್ಯಾರಣ್ಯರ ಭವ್ಯಜೀವನ ಚರಿತ್ರವನ್ನು ಪರಿಸಮಾಪ್ತಿಗೊಳಿಸಬೇಕಾದರೆ ಅವರ ವಾಙ್ಮಯ ಕ್ಷೇತ್ರವನ್ನು ನಿರೂಪಿಸದೆ ಸಾಧ್ಯವಾಗಲಾರದು. ಅವರು ವೇದ ವೇದಾಂಗಗಳನ್ನು ಕೂಲಂಕಷವಾಗಿ ಅಭ್ಯಾಸಮಾಡಿ, ನಿಜ ವೇದಾಂತ ಧರ್ಮವನ್ನು ಜಗತ್ತಿಗೆ ಬೋಧಿಸಿದರು. ಗುರುಪೀಠದಲ್ಲಿ ಅಭಿಷಿಕ್ತರಾದ ಇತರ ಯಾವ ಗುರುವೂ ವಿದ್ಯಾರಣ್ಯರಷ್ಟು ವಿಪುಲ ವಾಙ್ಮಯವನ್ನು ನಿರ್ಮಿಸಿರಲಾರರೆಂದು ಹೇಳಬಹುದು. ಅವರು ಸಂಸ್ಕೃತಭಾಷೆಯಲ್ಲಿ ರಚಿಸಿರುವ ಒಂದೊಂದು ಗ್ರಂಥವೂ ಪ್ರಮಾಣಗ್ರಂಥವೆನ್ನಿಸಿಕೊಂಡಿದೆ. ಅವರ ಲೇಖನ ಶಕ್ತಿ ಅಸದೃಶವಾಗಿದ್ದಂತೆಯೇ ವಕ್ತೃತ್ವ ಶಕ್ತಿಯೂ ಅನನ್ಯ ಸಾಧಾರಣವಾಗಿತ್ತು. ಅಂಥ ವಾಗ್ಮಿಯಾಗಿದ್ದುದರಿಂದಲೇ ರಾಜಕೀಯ ರಂಗದಲ್ಲಿ ಯಶಸ್ವಿಯಾದರು. ಅಂದಿನ ಜನತೆಯನ್ನು ಹುರಿದುಂಬಿಸಿ ಕಾರ್ಯಾನುಸಂಧಾನದಿಂದ ಸಾಮ್ರಾಜ್ಯವನ್ನು ಕಟ್ಟಲು ಅವರ ವಕ್ತೃತ್ವಬಲವೇ ಕಾರಣ. ಅವರ ಲೇಖನಶಕ್ತಿ ಮತ್ತು ವಕ್ತೃತ್ವಗಳಿಗೆ ಪೂರ್ಣಕಳೆ ಕೊಡುವಂತೆ ಅವರಲ್ಲಿ ಕವಿತಾ ಪ್ರತಿಭೆಯಿತ್ತು. ಸಂಸ್ಕೃತ ಸಾಹಿತ್ಯದಲ್ಲಿ ವಿದ್ಯಾರಣ್ಯರು ಹೊಸ

ಯುಗಪುರುಷರೆನಿಸಿಕೊಂಡರು. ಕನ್ನಡ ನಾಡು ವಿದ್ಯಾರಣ್ಯರಂಥ ವಿಭೂತಿಗಳ ಅವತಾರದಿಂದ ಕೀರ್ತಿಯುತವಾಗಲಿ. ಅವರು ಆಚಾರ್ಯರಾಗಿ ಸನಾತನ ಧರ್ಮವನ್ನು ಪೋಷಿಸಿದರು; ರಾಷ್ಟ್ರಪುರುಷರಾಗಿ ರಾಜ್ಯವನ್ನು ಕಟ್ಟಲು ನೆರವಾದರು; ವಾಙ್ಮಯ ಪುರುಷರಾಗಿ ಸಾಹಿತ್ಯವನ್ನು ಬೆಳಸಿದರು. ಅವರದು ಸರ್ವತೋಮುಖವಾದ ಶುಭಜೀವನ!

ವಿದ್ಯಾರಣ್ಯರ ಜೀವನಜ್ಯೋತಿ ಎಂದೆಂದಿಗೂ ಕರ್ಣಾಟಕ ಹೃದಯದಲ್ಲಿ ನಂದಾದೀಪದಂತೆ ಬೆಳಗುತ್ತಿರಲಿ; ಅವರ ಕೀರ್ತಿಕಿರಣ ಆಚಂದ್ರಾರ್ಕವಾಗಿ ಪ್ರಕಾಶಿಸುತ್ತಿರಲಿ. ಕರ್ಣಾಟಕ ರಾಜ್ಯಲಕ್ಷ್ಮಿ ಚಿರಕಾಲ ನಲಿಯಲಿ.

---

# ಹತ್ತನೆಯ ಅಧ್ಯಾಯ

## ಅನುಬಂಧ

### ಕರ್ಣಾಟಕದಮೇಲೆ ವಿದ್ಯಾರಣ್ಯರ ವ್ಯಕ್ತಿಪ್ರಭಾವ

ವಿದ್ಯಾರಣ್ಯರ ಜೀವನಚರಿತ್ರೆ ವಿಜಯನಗರ ಸಾಮ್ರಾಜ್ಯದ ಸುಮಾರು ಮುನ್ನೂರು ವರ್ಷಗಳ ರಾಜಕೀಯ ಚರಿತ್ರೆಯಮೇಲೆ ತನ್ನ ಪ್ರಭಾವವನ್ನು ಬೀರುತ್ತಿದೆಯೆಂದು ಹೇಳಿದರೆ ತಪ್ಪಲ್ಲ. ಅವರು ಆ ರಾಜ್ಯಸ್ಥಾಪನೆಯ ಕಾಲದಲ್ಲಿ ವಿಶೇಷವಾಗಿ ಪರಿಶ್ರಮಿಸಿದರು. ಅವರಂತೆಯೇ ಇನ್ನೂ ಹಲವು ಮಹನೀಯರೂ ರಾಜ್ಯನೀತಿ ನಿಪುಣರೂ ಪರಾಕ್ರಮಿಗಳೂ ಮತ್ತು ದೇಶವತ್ಸಲರೂ ಆಗ ರಾಜ್ಯಸ್ಥಾಪನೆಯ ಮಹಾಕಾರ್ಯದಲ್ಲಿ ಆಸಕ್ತಿ ವಹಿಸಿ ಕೃತಕಾರ್ಯರಾದರು. ಈ ಎಲ್ಲ ಶಕ್ತಿಗಳೂ ಒಟ್ಟುಗೂಡಿದುದರಿಂದಲೇ ಅಂಥ ಪ್ರಬಲರಾಜ್ಯವೊಂದು ತಲೆ ಎತ್ತಬೇಕಾಯಿತು. ಒಂದು ಜನಪದವನ್ನು ಸುಸ್ಥಿರವನ್ನಾಗಿಗೊಳಿಸಿ, ರಾಷ್ಟ್ರ ಶಕ್ತಿಯನ್ನು ಕೇಂದ್ರೀಕರಿಸಿ, ಸಾಮಾನ್ಯ ಜನರನ್ನು ಉತ್ತೇಜನಗೊಳಿಸಿ ಮಹಾಕಾರ್ಯ ಸಾಧನೆಯಲ್ಲಿ ಯಶಸ್ವಿಯಾಗಬೇಕಾದರೆ ಒಬ್ಬನೇ ವ್ಯಕ್ತಿಯಿಂದ ಸಾಧ್ಯವಾಗಲಾರದು. ಅವನೆಷ್ಟೇ ಸಮರ್ಥನಾದರೂ ಇತರ ಮಹಾಪುರುಷರ ನೆರವಿದ್ದೇ ಇರಬೇಕು. ಎಷ್ಟೇ ದೊಡ್ಡದಾಗಿದ್ದರೂ ಒಂದೇ ಕಲ್ಲು ಬೆಟ್ಟವೆನ್ನಿಸಿಕೊಳ್ಳಲಾರದು; ಒಂದೇ ಮರ ತೋಪು ಎನ್ನಿಸಿಕೊಳ್ಳಲಾರದು. ಹೀಗೆಯೇ, ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸುವುದರಲ್ಲಿ ವಿದ್ಯಾರಣ್ಯರೊಬ್ಬರೇ ದುಡಿಯಲಿಲ್ಲ. ಅನೇಕ ಪ್ರಮುಖರೂ, ಯೋಧಾಪಿಗಳೂ ಅವರಿಗೆ ಸಹಾಯಕರಾಗಿದ್ದರು. ವಿದ್ಯಾರಣ್ಯರು ವಹಿಸಿದ್ದ ಭೂಮಿಕೆಯನ್ನು ಮಾತ್ರವೇ ನಾವು ಇಲ್ಲಿ ರೂಪಿಸುತ್ತಿರುವುದರಿಂದ, ಇತರ ಮಹನೀಯರ ಕಾರ್ಯರಂಗವನ್ನು ವಿವೇಚಿಸಲು ಅವಕಾಶವಿಲ್ಲ. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಗುವುದಕ್ಕೆ ಹಿಂದೆ ಇದ್ದ ದೇಶ ಪರಿಸ್ಥಿತಿಯನ್ನು ಹಿಂದಣ ಅಧ್ಯಾಯಗಳಲ್ಲಿ ತಿಳಿಸಿದೆ. ಅವರ ತರುವಾಯ ಮತ್ತು ಆ ರಾಜ್ಯ ವೈಭವಸ್ಥಿತಿಯಲ್ಲಿದ್ದ ಕಾಲದವರೆಗೆ ವಿದ್ಯಾರಣ್ಯರ ಪ್ರಭಾವ ಹೇಗೆ ತಾಂಡವವಾಡುತ್ತಿತ್ತೆಂಬುದನ್ನು ಈಗ ತಿಳಿಯಬೇಕಾಗಿದೆ.

"ವಿಜಯನಗರ ಸಾಮ್ರಾಜ್ಯದ ಪರಿಸಮಾಪ್ತಿಯೊಂದಿಗೆ ಕರ್ಣಾಟಕ ಸಾಮ್ರಾಜ್ಯ ಜೀವನವೂ ಮುಕ್ತಾಯವಾಯಿತು. ವಿಜಯನಗರವು ಉದಾತ್ತ ವಾದ ಧ್ಯೇಯಸ್ಫೂರ್ತಿಯಿಂದ ಆವಿರ್ಭವಿಸಿತು. ಆ ಧ್ಯೇಯಸಾಧನೆಗಾಗಿಯೇ ಪರಿಶ್ರಮಿಸಿತು. ಆ ಧ್ಯೇಯಸಾಧನೆಯಲ್ಲಿಯೇ ಮಡಿದುಹೋಯಿತು. "ಸಾಮ್ರಾಜ್ಯಸ್ಥಾಪನೆಯಾದ ಬಳಿಕ ಸ್ವರಾಜ್ಯವನ್ನು ಪರಿಪಾಲಿಸಿ ಸ್ವಧರ್ಮ ಮತ್ತು ಸ್ವಸಂಸ್ಕೃತಿ ಇವುಗಳನ್ನು ಪೂರ್ಣವಾಗಿ ಸಂವರ್ಧಿಸುವುದೇ ಮೊದಲಿನಿಂದ ಕೊನೆಯವರೆಗೆ ವಿಜಯನಗರ ಸಾಮ್ರಾಜ್ಯದ ಉತ್ತುಂಗ ಆದರ್ಶವೂ ಉದಾತ್ತ ನೀತಿಯೂ ಆಗಿದ್ದಿತು.'' ದಕ್ಷಿಣಾಪಥದಲ್ಲಿ ಸನಾತನ ಧರ್ಮ, ವಿದ್ಯೆ, ಸಾಹಿತ್ಯ, ಕಲೆ, ಕೈಗಾರಿಕೆ, ನಾಗರಿಕತೆ, ರಾಜ್ಯಾಂಗವಿಧಾನ, ಪ್ರಜಾಧರ್ಮ, ರಾಜನೀತಿ ಮುಂತಾದುವು ಹೊಸಕಳೆಯಿಂದ ಬೆಳಗಿದುವು. ಒಟ್ಟಿನಲ್ಲಿ ಹೇಳುವುದಾದರೆ ನಮ್ಮ ಈಗಿನ ಸಂಸ್ಕೃತಿ ಜೀವನದಲ್ಲಿ ವಿಜಯನಗರದ ಸಂಸ್ಕಾರ ಪರಿಪಾಕತೆಯೇ ತುಂಬಿರುತ್ತದೆಯೆಂಬುದು ನಿಜ. ಈ ಸಾಮ್ರಾಜ್ಯ ಸುಮಾರು ಮೂರುನೂರು ವರ್ಷಗಳಿಗಿಂತ ಹೆಚ್ಚುಕಾಲ ಬಾಳಿತು. ಈ ಅವಧಿಯಲ್ಲಿ ಇಪ್ಪತ್ತುನಾಲ್ಕು ಜನ ರಾಜರು ಆಳಿದರು. ಒಬ್ಬೊಬ್ಬರೂ ಅಸಹಾಯ ಶೂರರು; ಅಸಮಾನ ಪ್ರಜಾವತ್ಸಲರು. ಹರಿಹರ, ಬುಕ್ಕರಾಯ, ಇಮ್ಮಡಿ ಹರಿಹರ, ಇಮ್ಮಡಿ ದೇವರಾಯ, ಸಾಳುವ ನರಸಿಂಹ, ಕೃಷ್ಣದೇವರಾಯ, ಅಳಿಯ ರಾಮರಾಯ ಮತ್ತು ವೆಂಕಟಪತಿ ದೇವರಾಯ—ಇವರು ತುಂಬ ಪ್ರಸಿದ್ಧರು.

ವಿಜಯನಗರ ಸಾಮ್ರಾಜ್ಯ ಚರಿತ್ರೆಯನ್ನು ಅವಲೋಕಿಸಿದರೆ, ಅನೇಕ ಚಿರಸ್ಮರಣೀಯವಾದ ಘಟನೆಗಳು ನಡೆದಿವೆ. ಹರಿಹರನ ಸ್ವರಾಜ್ಯ ಸ್ಥಾಪನೆಯ ಪ್ರಯತ್ನಗಳು, ಕಂಪಣ್ಣನ ಮಧುರೆಯ ದಂಡಯಾತ್ರೆ, ಕೃಷ್ಣದೇವರಾಯನ ಕಲಿಂಗ ಜೈತ್ರಯಾತ್ರೆ, ರಾಯಚೂರು ದಿಗ್ವಿಜಯ, ಅಳಿಯ ರಾಮರಾಯನ ಅದ್ಭುತ ಯುದ್ಧ ಪ್ರಸಂಗಗಳು ಮುಖ್ಯವಾಗಿವೆ. ಈ ಘಟನೆನೆಗಳಲ್ಲಿ ಕನ್ನಡಿಗರ ಶೌರ್ಯ ಔದಾರ್ಯ ಸಂಸ್ಕೃತಿಗಳು ಕಾಣುತ್ತಿವೆ.

ವಿಜಯನಗರ ಐಶ್ವರ್ಯದಲ್ಲಿ ಕಡಮೆಯಾಗಿರಲಿಲ್ಲ. ಫಲವತ್ತಾದ ಭೂಮಿ, ವಿಪುಲವಾದ ರಾಜಾದಾಯ, ದೇಶಾಂತರಗಳ ವ್ಯಾಪಾರ, ಅತುಲವಾದ ಖನಿಜಸಂಪತ್ತು ಇವುಗಳಿಂದ ರಾಜ್ಯೈಶ್ವರ್ಯ ಅಪಾರವಾಗಿತ್ತು.

ರಾಜಧಾನಿಯ ವೈಭವವನ್ನು ಚರಿತ್ರೆಯಲ್ಲಿ ಇತಿಹಾಸಜ್ಞರು ಚೆನ್ನಾಗಿ ವರ್ಣಿಸಿದ್ದಾರೆ. ಆ ನಗರದ ಸುತ್ತಳತೆ ಅರುವತ್ತು ಮೈಲಿ; ಸುತ್ತಲೂ ಸುಭದ್ರವಾದ ಏಳುಸುತ್ತಿನ ಕೋಟೆ; ಆ ಕೋಟೆಯಲ್ಲಿ ದೊಡ್ಡ ದೊಡ್ಡ ಅಗಸೇಬಾಗಿಲುಗಳೂ ಸುತ್ತಲೂ ಆಳವಾದ ಕಂದಕಗಳೂ ಇದ್ದುವು. ನಗರ ರಕ್ಷಣೆಗಾಗಿ ಸದಾ ಸಿದ್ಧವಾಗಿದ್ದ ಸುಶಿಕ್ಷಿತ ೯೦,೦೦೦ ಸೈನಿಕರಿದ್ದರು. ರಾಜಧಾನಿಯ ಸುತ್ತಲೂ ಸುಂದರವಾದ ವನರಾಜ್ಯ,ಮನೋಹರವಾದ ಸಸ್ಯಸಂಪತ್ತಿನ ಭೂವಲಯಗಳಿದ್ದುವು. ಎಲ್ಲಿ ನೋಡಿದರೂ ಗದ್ದೆಗಳೂ, ಕಬ್ಬಿನ ತೋಟಗಳೂ ಕಾಣುತ್ತಿದ್ದುವು. ನಗರದಲ್ಲಿ ಭವ್ಯವಾದ ದೇವಾಲಯಗಳೂ ಮಹಾಪಾಠಶಾಲೆಗಳೂ, ವಿದ್ಯಾಲಯಗಳೂ ಇದ್ದುವು.

ಈ ರಾಜರ ಆಡಳಿತದಲ್ಲಿ ೨೦೦ ಬಂದರುಗಳಿದ್ದುವು. ಎಡೆಬಿಡದೆ ಮೂರು ತಿಂಗಳು ಪ್ರವಾಸ ಮಾಡುವಷ್ಟು ಆ ರಾಜ್ಯದ ವಿಸ್ತಾರವಿತ್ತು. ಆ ರಾಜ್ಯದಲ್ಲಿ ಹನ್ನೊಂದು ಲಕ್ಷ ಸೈನ್ಯವಿತ್ತು. ಅರಮನೆಯ ಪಕ್ಕದಲ್ಲಿ ಪೇಟೆಗಳ ಸಾಲು. ಅಲ್ಲಿ ಮುತ್ತು, ರತ್ನ, ವಜ್ರ, ವೈಡೂರ್ಯಗಳ ವ್ಯಾಪಾರ ನಡೆಯುತ್ತಿತ್ತು. ರಾಯನ ಟಂಕಸಾಲೆಯ ಮುಂದೆ ೧೨,೦೦೦ ಕಾವಲುಗಾರರಿರುತ್ತಿದ್ದರು. ಸಂಪತ್ಸಮೃದ್ಧಿಯಿಂದ ಬೆಳೆದ ನಾಡು ತಾಳಿಕೋಟೆ ಯುದ್ಧದಲ್ಲಿ ನುಚ್ಚುನೂರಾಯಿತು. ವಿಜಯನಗರ ಹಾಳು ಕೊಂಪೆಯಾಯಿತು.

ವಿಜಯನಗರ ಸಾಮ್ರಾಜ್ಯದ ಸಾಂಘಿಕ ಜೀವನ ಸುವ್ಯವಸ್ಥಿತವಾಗಿತ್ತು. ಪ್ರಜೆಗಳು ತಮ್ಮ ತಮ್ಮ ಗ್ರಾಮಗಳಲ್ಲಿ ಆಡಳಿತಗಳನ್ನು ನಡೆಯಿಸಿಕೊಳ್ಳಲು ಅವರಿಗೆ ಬಹುಮಟ್ಟಿಗೆ ಸ್ವಾತಂತ್ರ್ಯವಿದ್ದಿತು. ಪ್ರತಿಯೊಂದು ಊರಿನಲ್ಲಿಯೂ ಜನರ ಪ್ರತಿನಿಧಿಗಳ ಸಮಿತಿಗಳಿದ್ದುವು. ವ್ಯವಸಾಯ, ವ್ಯಾಪಾರ ಮೊದಲಾದುವುಗಳಿಗೆ ಸಂಬಂಧಪಟ್ಟ ಸಂಘಗಳಿರುತ್ತಿದ್ದುವು. ಇಂಥವುಗಳಲ್ಲಿ ವೀರ ಬಣಂಜಿಗ, ಮಹಾಗಣ ಎಂಬಿವು ಪ್ರಧಾನವಾಗಿದ್ದುವು. ಮೈಸೂರು ಪ್ರಾಂತದಲ್ಲಿ ಈಗಲೂ ರೂಢಿಯಲ್ಲಿರುವ 'ಬಾರಾಬಲೂತಿ' ಎಂಬ ವ್ಯವಸ್ಥೆ ವಿದ್ಯಾರಣ್ಯರಿಂದ ಆದುದೆಂದು ಪ್ರತೀತಿ ಇದೆ. ಬಾಹುಬಲದೊಂದಿಗೆ ಬುದ್ಧಿಬಲವೂ, ರಾಜ್ಯಾಧಿಕಾರದೊಂದಿಗೆ ಧರ್ಮಾಸಕ್ತಿಯೂ ಸಮರಸವಾಗಿ ಕೂಡಿದ್ದುದರಿಂದ ರಾಜ್ಯದ ವಿಸ್ತಾರವೂ ಬೆಳೆಯಿತು. ಪ್ರಜೆಗಳ ಸೌಖ್ಯ

ಸಂಪತ್ತುಗಳೂ ಹೆಚ್ಚಿದುವು. ಈ ಸಾಮ್ರಾಜ್ಯದಲ್ಲಿ ಅಪಾರ ಐಶ್ವರ್ಯ ವಿತ್ತು. ಫಲವತ್ತಾದ ಭೂಮಿ, ವಿಪುಲವಾದ ರಾಜಾದಾಯ, ದೇಶವಿದೇಶ ಗಳೊಂದಿಗೆ ವ್ಯಾಪಾರ, ಅಭ್ಯುದಯ ಸಾಧಕವಾದ ಉದ್ಯಮಗಳು—ಈ ಮೊದಲಾದ ಆಗರಗಳಿಂದ ಅಪಾರವಾದ ಸಂಪತ್ತು ಬರುತ್ತಿತ್ತು. ಇಷ್ಟೇ ಅಲ್ಲವೆ, ಈ ರಾಜ್ಯದಲ್ಲಿ ರತ್ನದ ಗಣಿಗಳಿದ್ದುವು. ವಿಜಯನಗರದ ರಾಜ ಬೀದಿಗಳಲ್ಲಿ ಮುತ್ತು, ರತ್ನ, ವಜ್ರ, ವೈಡೂರ್ಯಗಳನ್ನು ರಾಶಿಹಾಕಿಕೊಂಡು ವರ್ತಕರು ವ್ಯಾಪಾರ ಮಾಡುತ್ತಿದ್ದರು. ಪ್ರಪಂಚದಲ್ಲಿ ಪ್ರಸಿದ್ಧವಾಗಿದ್ದ ಮಹಾ ನಗರಗಳಲ್ಲಿ ವಿಜಯನಗರವೂ ಒಂದು.

ರಾಜ್ಯಾಡಳಿತವು ಆದರ್ಶಪ್ರಾಯವಾಗಿತ್ತು. ರಾಜನು ಪ್ರಜೆಗಳನ್ನು ಪುತ್ರವಾತ್ಸಲ್ಯದಿಂದ ಕಾಪಾಡುತ್ತಿದ್ದನು. ರಾಜನಿಗೆ ಮಂತ್ರಾಲೋಚನೆ ಯನ್ನು ಹೇಳಲು ರಾಜಗುರು ಮಂತ್ರಿಮಂಡಲದಲ್ಲಿರುತ್ತಿದ್ದನು. ಸಮಯ ಬಂದರೆ, ರಾಜನು ತನ್ನ ಸಾಮಂತರಾಜರ ಮತ್ತು ಪಾಳೆಯಗಾರರ ಸಲಹೆ ಯನ್ನೂ ಕೇಳುತ್ತಿದ್ದನಲ್ಲದೆ, ಪ್ರಜಾಪ್ರಮುಖರ ಅಭಿಪ್ರಾಯಗಳನ್ನೂ ಮನ್ನಿ ಸುತ್ತಿದ್ದನು. ಎಲ್ಲ ಜಾತಿಮತ ಪಂಥಗಳಲ್ಲಿಯೂ ಸಮರ್ಥರೂ ಅರ್ಹರೂ ಆದ ಜನರಿಗೆ ಅಧಿಕಾರಗಳು ದೊರೆಯುತ್ತಿದ್ದುವು. ರಾಜರಿಗೆ ಯಾವ ಭೇದ ಭಾವನೆಯೂ ಇರಲಿಲ್ಲ. ಆ ಸಾಮ್ರಾಜ್ಯದಲ್ಲಿ ಆಡಳಿತದ ಅನುಕೂಲಕ್ಕಾಗಿ ಆರು ಪ್ರಾಂತಗಳಿದ್ದುವು. ಒಂದೊಂದು ಪ್ರಾಂತವೂ ಸಮರ್ಥನಾದ ಅಧಿ ಕಾರಿಯ ಆಡಳಿತದಲ್ಲಿತ್ತು. ವಿಜಯನಗರದ ರಾಜರು ವಿದ್ಯಾವಂತರೂ, ವಿದ್ವತ್ಪಕ್ಷಪಾತಿಗಳೂ ಆಗಿದ್ದರು. ಅವರಲ್ಲಿ ಅನೇಕರು ಸ್ವಯಂಕವಿಗಳೂ ಗ್ರಂಥಕಾರರೂ ಆಗಿದ್ದರು. ಅವರ ಮಹೋನ್ನತವಾದ ಧ್ಯೇಯ, ಶೌರ್ಯ, ಪರಾಕ್ರಮ, ಸಾಹಸಪರತೆ, ಕಾರ್ಯದಕ್ಷತೆ, ರಾಷ್ಟ್ರಪ್ರೇಮ, ಸಂತತೋ ದ್ಯೋಗ ಮೊದಲಾದ ಗುಣಶಕ್ತಿಗಳು ವಿಜಯನಗರದ ಏಳಿಗೆಗೆ ಕಾರಣ ವಾಗಿದ್ದುವು.

ಕಾವ್ಯ, ಸಂಗೀತ, ನೃತ್ಯ, ಶಿಲ್ಪ ಮುಂತಾದ ಲಲಿತ ಕಲೆಗಳಲ್ಲಿ ಅನೇಕ ಸ್ತ್ರೀಯರೂ ಪುರುಷರೂ ಕುಶಲರಾಗಿದ್ದರು. ವೈದ್ಯ, ಜ್ಯೋತಿಷ ಮೊದಲಾದ ಶಾಸ್ತ್ರಗಳಲ್ಲಿ ಪರಿಣತರಾದವರು ತುಂಬಿದ್ದರು. ಮಲ್ಲವಿದ್ಯೆ, ಯುದ್ಧವಿದ್ಯೆ ಮುಂತಾದ ಸಾಹಸ ಕ್ಷೇತ್ರಗಳಲ್ಲಿ ನಿಪುಣರೆನಿಸಿದ್ದ ಪುರು

ಷರೀ ಅಲ್ಲದೆ ಅನೇಕ ಸ್ತ್ರೀಯರೂ ಇದ್ದರು. ಧರ್ಮರಕ್ಷಣೆಗಾಗಿಯೂ, ದೇಶ ಕಾರ್ಯಕ್ಕಾಗಿಯೂ ತಮ್ಮ ಪ್ರಾಣಗಳನ್ನೇ ಅರ್ಪಣೆ ಮಾಡಬಲ್ಲ ಮಹಾ ವೀರರಿದ್ದರು. ವಿಜಯನಗರ ಕಟ್ಟಿದ ಶ್ರೇಷ್ಠ ಸಂಸ್ಕೃತಿಯೂ, ಉದಾತ್ತ ನಾಗರಿಕತೆಯೂ ಈಗಲೂ ಅಚ್ಚಳಿಯದೆ ನಿಂತಿವೆ. ಆದರೆ ಅಂದಿನ ಶೌರ್ಯ, ಕಾರ್ಯನಿಷ್ಠೆ ಇಂದು ಕನ್ನಡಿಗರಲ್ಲಿ ಮಾಯವಾಗಿವೆ.

ವಿದ್ಯಾರಣ್ಯರ ವ್ಯಕ್ತಿತ್ವ ಪ್ರಭಾವ ಕನ್ನಡನಾಡಿನಮೇಲೆ ಎಷ್ಟುಮಟ್ಟಿಗೆ ಬಿದ್ದಿದೆಯೆಂಬುದನ್ನು ನಮ್ಮ ಜನಜೀವನದ ಪ್ರತಿಯೊಂದು ಕ್ಷೇತ್ರದಲ್ಲಿಯೂ ಕಾಣಬಹುದು. ಈ ಸಂದರ್ಭದಲ್ಲಿ ಒಂದು ಮಾತನ್ನು ಆಡಬೇಕಾಗಿದೆ. ವಿದ್ಯಾರಣ್ಯರಿಗೂ ವಿಜಯನಗರ ರಾಜ್ಯಸ್ಥಾಪನೆಗೂ ಯಾವ ಸಂಬಂಧವೂ ಇಲ್ಲ ಎಂಬುದಾಗಿ ಕೆಲವು ಇತಿಹಾಸ ವಿದ್ವಾಂಸರು ಅಭಿಪ್ರಾಯ ಪಡು ತ್ತಾರೆ. ಆದರೆ, ಇಷ್ಟರಿಂದಲೇ ವಿದ್ಯಾರಣ್ಯರ ಸಂಬಂಧವನ್ನು ಸಂಪೂರ್ಣ ವಾಗಿ ನಿರಾಕರಿಸುವುದು ಸಾಧ್ಯವಿಲ್ಲ. ವಿಜಯನಗರ ರಾಜ್ಯಸ್ಥಾಪನೆಗೆ ಅವರು ಪ್ರೇರಕರಾಗಿದ್ದರೆಂದು ನಂಬಲು ಸಾಕಾದಷ್ಟು ಬಲವಾದ ಪ್ರಮಾಣ ಗಳುಂಟು. ಅನೇಕ ಪ್ರಸಿದ್ಧ ಇತಿಹಾಸ ಸಂಶೋಧಕರು ಈ ಮಾತನ್ನು ಒಪ್ಪುತ್ತಾರೆ. ಈ ವಿಚಾರವನ್ನು ಕೂಲಂಕಷವಾಗಿ ಚರ್ಚಿಸಲು ಇಲ್ಲಿ ಅವ ಕಾಶವಿಲ್ಲ. ವಿದ್ಯಾರಣ್ಯರಂಥ ಪುಣ್ಯಪುರುಷರ ಪ್ರಯತ್ನ ವಿಶೇಷದಿಂದಲೇ ವಿಜಯನಗರ ಸಾಮ್ರಾಜ್ಯಸ್ಥಾಪನೆಯಾಯಿತೆಂಬುವುದರಲ್ಲಿ ಸಂಶಯವಿಲ್ಲ.

ವಿಜಯನಗರ ಹದಿನಾರಾಣೆಯ ಕನ್ನಡ ರಾಜ್ಯ. ಅದನ್ನು ಆಳಿದ ಅರಸರು ಹುಟ್ಟು ಕನ್ನಡಿಗರು ಮತ್ತು ಕನ್ನಡನಾಡಿನ ಪ್ರೇಮಿಗಳು ; ಕನ್ನ ಡದ ಪೋಷಕರು. ವಿಜಯನಗರದ ಸಂಸ್ಕೃತಿ, ಸಾಹಿತ್ಯ, ಕಲೆಗಳೇ ಇಂದಿನ ಕನ್ನಡ ನಾಡಿನಲ್ಲಿ ವಿಶೇಷವಾಗಿ ಮೈಸೂರು ಪ್ರಭುಗಳ ಆಶ್ರಯದಲ್ಲಿ ವೃದ್ಧಿ ಹೊಂದುತ್ತಿವೆ. ವಿಜಯನಗರದ ಅರಸರ ಬಿರುದುಗಳು ಮೈಸೂರು ಒಡೆ ಯರಿಗೆ ಬಂದಿವೆ. ಸಂಗಮ ಮನೆತನದ ರಾಜರು ಸಾಮ್ರಾಜ್ಯ ವೈಭವ ವನ್ನು ಸರ್ವತೋಮುಖವಾಗಿ ಬೆಳೆಯಿಸಿದರು. ಬುಕ್ಕರಾಯನನ್ನು "ಕರ್ಣಾಟಲೋಕನಯನೋತ್ಸವಪೂರ್ಣಚಂದ್ರ" ಎಂಬುದಾಗಿ ಮಧುರಾ ವಿಜಯಕಾವ್ಯದಲ್ಲಿ ಗಂಗಾದೇವಿ ಕರೆದಿದ್ದಾಳೆ. ಕ್ರೀಡಾಭಿರಾಮುಂ ಎಂಬ ತೆಲುಗು ಗ್ರಂಥದಲ್ಲಿ ಅವನನ್ನು "ಕರ್ಣಾಟಕ್ಷಿತಿನಾಥ" ಎಂಬುದಾಗಿ ಹೇಳಿದೆ.

ತರುವಾಯ ವಿಜಯನಗರ ರಾಜ್ಯವನ್ನಾಳಿದ ಸಾಳುವ ವಂಶದ ನರಸಿಂಹನನ್ನು "ರಾಯ ಮೂವರಗಂಡ" ಎಂದು ಕರೆದಿದ್ದಾರೆ. ಈ ಸಾಮ್ರಾಜ್ಯ ಚಕ್ರವರ್ತಿಯೆನಿಸಿಕೊಂಡ ಕೃಷ್ಣದೇವರಾಯನಿಗೆ "ಕನ್ನಡ ರಾಜ್ಯ ರಮಾ ರಮಣ" ಎಂಬ ಹೆಸರಿತ್ತು. ಈತನು ತುಳು ಮನೆತನದವನಾದರೂ "ಶ್ರೀ ಕರ್ಣಾಟ ಮಹೀಶ" ಎಂದು ಪ್ರಸಿದ್ಧನಾದನು. ಅರವೀಡು ಮನೆತನದ ಅಳಿಯ ರಾಮರಾಯನಿಗೆ "ಪ್ರಾಜ್ಯ ಕರ್ಣಾಟರಾಜ್ಯ ಸ್ಥಾಪನಾಚಾರ್ಯ" ಎಂಬ ಬಿರುದು ಇತ್ತು. ಆದ್ದರಿಂದ ವಿಜಯನಗರ ಸಾಮ್ರಾಜ್ಯವನ್ನಾಳಿದ ನಾಲ್ಕು ರಾಜಮನೆತನಗಳ ದೊರೆಗಳೂ ಕರ್ಣಾಟಕ ಭಾಷೆ ಮತ್ತು ಸಂಸ್ಕೃತಿಗಳನ್ನು ಅಚ್ಚಳಿಯದಂತೆ ಕಾಪಾಡಿಕೊಂಡು ಬಂದರು. ಶ್ರೀ ಶೃಂಗೇರಿ ಪೀಠದ ಮತ್ತು ವಿದ್ಯಾರಣ್ಯರ ಪ್ರಭಾವ ಈ ಸಾಮ್ರಾಜ್ಯದ ಮತ್ತು ಸಮ್ರಾಟರಮೇಲೆ ಕೊನೆಯವರೆಗೆ ಸುದೃಢವಾಗಿ ನಿಂತಿತು.

ಒಟ್ಟು ಕರ್ಣಾಟಕವೇ ಕಷ್ಟ ಪರಂಪರೆಗಳಲ್ಲಿ ಸಿಕ್ಕಿ ನರಳುತ್ತಿದ್ದ ಕಾಲದಲ್ಲಿ ವಿದ್ಯಾರಣ್ಯರು ಧೈರ್ಯದಿಂದ ಕಾರ್ಯರಂಗಕ್ಕಿಳಿದರು. ಜನತೆಯಲ್ಲಿ ಆತ್ಮಗೌರವ, ಸ್ವಾವಲಂಬನ ಮತ್ತು ದೇಶಾಭಿಮಾನಗಳನ್ನು ಪ್ರಚೋದನಗೊಳಿಸಿದರು. ಅವರ ಮಾರ್ಗದರ್ಶನದಲ್ಲಿ ಕನ್ನಡಿಗರು ಸ್ವಾರ್ಥವನ್ನು ತ್ಯಾಗಮಾಡಿ ಸಾಹಿತ್ಯ ಸಂಸ್ಕೃತಿ ಮತ್ತು ಧರ್ಮಗಳನ್ನು ಕಾಪಾಡಿದರು. ಅದೇ ಮನೋಭಾವ ಜನರಲ್ಲಿ ನೆಲಸಿತು. ಆಗ ಕನ್ನಡ ನಾಡಿನಲ್ಲಿದ್ದ ಅಂತಃಕಲಹಗಳಿಂದ ಜನಾಂಗವೇ ಪರಕೀಯರ ದಾಸ್ಯಕ್ಕೆ ಒಳಗಾಗುತ್ತಿತ್ತು. ಜನರಲ್ಲಿ ದೇಶಾಭಿಮಾನ ನಶಿಸುತ್ತಿತ್ತು. ಹೇಡಿತನ ಮೂಡುತ್ತಿತ್ತು. ಅಂಥ ಸಮಯದಲ್ಲಿ ವಿದ್ಯಾರಣ್ಯರು ಕನ್ನಡಿಗರಲ್ಲಿ ಸೋದರ ಪ್ರೇಮವನ್ನು ವೃದ್ಧಿಗೊಳಿಸಿ ನಾಡಿನ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಯನ್ನು ಉತ್ತಮಪಡಿಸಿ, ಆರ್ಯ ಸಂಸ್ಕೃತಿಯನ್ನು ಪೋಷಿಸಿ ಕನ್ನಡ ನಾಡಿಗೆ ಅಸದೃಶ ಸೇವೆಯನ್ನು ಸಲ್ಲಿಸಿದರು. ಕನ್ನಡಿಗರು ಒಗ್ಗಟ್ಟಿನಿಂದ ನಿಂತು ಸ್ವಾತಂತ್ರ್ಯವನ್ನು ಗಳಿಸಿ, ಆತ್ಮರಕ್ಷಣೆಯನ್ನು ಮಾಡಿಕೊಳ್ಳಲು ಸನ್ನದ್ಧರಾಗಬೇಕೆಂಬ ಮಹಾ ಸಂಕಲ್ಪದಿಂದ ಮುಂದೆ ಬಂದವರೆಂದರೆ ವಿದ್ಯಾರಣ್ಯರೇ. ದೇವಗಿರಿ, ಓರಂಗಲ್ಲು, ದ್ವಾರಸಮುದ್ರ, ಕಾಂಚೀಪುರ ಮೊದಲಾದ ಪ್ರಮುಖ ಪ್ರಾಂತಗಳೆಲ್ಲ ಪರಕೀಯರ ಹಿಡಿತಕ್ಕೆ ಸಿಕ್ಕಿ ಹಂಬಲಿಸುತ್ತಿದ್ದ ಸಮಯದಲ್ಲಿ ವಿದ್ಯಾರ

ಣ್ಯರು ಸಾಹಸದಿಂದ ವಿಜಯನಗರ ಸಾಮ್ರಾಜ್ಯಕಾರ್ಯದಲ್ಲಿ ಪ್ರಶಂಸನೀಯ ಪಾತ್ರವನ್ನು ವಹಿಸಿ ಸ್ವಾತಂತ್ರ್ಯ ಜ್ಯೋತಿಯನ್ನು ಬೆಳಗಿಸಿದರು. ದಕ್ಷಿಣ ದೇಶದ ವೀರರೂ, ವಿದ್ವಾಂಸರೂ, ಕಲಾವಿದರೂ, ವರ್ತಕರೂ, ದೇಶಪ್ರೇಮಿಗಳೂ ವಿಜಯನಗರಕ್ಕೆ ಬಂದು ನೆಲಸಿದರು. ಆರ್ಯ ಸಂಸ್ಕೃತಿ ಪುನರುಜ್ಜೀವಿತವಾಯಿತು. ಈ ಸಾಮ್ರಾಜ್ಯ ಸ್ಥಾಪನೆಯಾದಮೇಲೆ ದ್ರಾವಿಡರು ಮಧುರೆಯ ಸುಲ್ತಾನರ ದಬ್ಬಾಳಿಕೆಯಿಂದ ಪಾರಾದರು. ಉದಯಗಿರಿ, ನೆಲ್ಲೂರು ಪ್ರಾಂತಗಳ ಆಂಧ್ರರೂ ಕನ್ನಡಿಗರ ಕೈಕೆಳಗೆಹೋರಾಡಿದರು. ವಿಜಯನಗರದ ಪ್ರಭಾವ ದಕ್ಷಿಣಾಪಥದ ಮೇಲೆಲ್ಲಾ ಹರಡಿತು. ಈಗ ದಾಕ್ಷಿಣಾತ್ಯ ಸಂಸ್ಕೃತಿಯೇ ಕರ್ಣಾಟಕ ಸಂಸ್ಕೃತಿಯೆಂದು ಪ್ರಸಿದ್ಧಿ ಪಡೆಯಿತು. ಈ ಎಲ್ಲ ಕೀರ್ತಿಯಲ್ಲಿ ವಿದ್ಯಾರಣ್ಯರಿಗೇ ಹೆಚ್ಚುಭಾಗ ಸಲ್ಲುತ್ತವೆ. ಭರತಖಂಡದ ಎಲ್ಲ ಪ್ರಾಂತಗಳೂ ಪರಾಧೀನತೆಯಲ್ಲಿ ಸಿಕ್ಕಿ ತೊಳಲುತ್ತಿದ್ದಾಗ ದಕ್ಷಿಣದಲ್ಲಿ ಈ ಮಹಾ ಸಾಮ್ರಾಜ್ಯ ಆವಿರ್ಭವಿಸಿತು. ಇದು ಕನ್ನಡಿಗರ ಸಾಹಸದ ಫಲ! ವಿದ್ಯಾರಣ್ಯರ ಕರ್ಮಯೋಗದ ಬಲ.

ಹದಿನಾಲ್ಕನೆಯ ಶತಮಾನದ ಆರಂಭದಲ್ಲಿ ಸ್ವರಾಜ್ಯ, ಸ್ವಧರ್ಮ, ಸ್ವಸಂಸ್ಕೃತಿ ಕಾಡುಪಾಲಾಗಿ ಕನ್ನಡನಾಡು ಪರಕೀಯರ ಕರಾಳ ಲೀಲೆಗಳ ಆಡುಂಬೊಲವಾಗಿತ್ತು. ದಕ್ಷಿಣಾಪಥದಲ್ಲಿ ಆ ಕಾಲಕ್ಕೆ ಎಷ್ಟೋ ರಾಜರಿದ್ದರು, ನಾಯಕರಿದ್ದರು; ವೀರಯೋಧರಿದ್ದರು. ಆದರೇನು! ಕರ್ಣಾಟಕದ ದೈನ್ಯಾವಸ್ಥೆಯನ್ನು ಕಂಡು ಯಾರೊಬ್ಬರ ಹೃದಯವೂ ತಳಮಳಿಸಲಿಲ್ಲ. ತಮ್ಮ ಪಾರತಂತ್ರ್ಯವನ್ನು ಪ್ರತಿಭಟಿಸಬೇಕೆಂಬ ಸಾಹಸ ಯಾರಲ್ಲಿಯೂ ಸ್ಫುರಿಸಲಿಲ್ಲ. ಇಂಥ ಭೀಷಣವಾದ ಪರಿಸ್ಥಿತಿಯಲ್ಲಿ ಪುನಃ ಸ್ವರಾಜ್ಯವನ್ನು ಸ್ಥಾಪಿಸಿ ಸ್ವಾತಂತ್ರ್ಯವನ್ನು ಗಳಿಸುವ ಕಾರ್ಯದಲ್ಲಿ ಕೆಲವರು ಸಾಹಸಪಡುತ್ತಿದ್ದರು. ಅಂಥ ಮಹಾ ಪುರುಷರಲ್ಲಿ ಹೊಯ್ಸಳ ರಾಜ್ಯದ ಮುಮ್ಮಡಿ ವೀರಬಲ್ಲಾಳನೂ, ಹಂಪೆಯ ವೀರ ಸಂನ್ಯಾಸಿ ವಿದ್ಯಾರಣ್ಯರೂ ಮುಖ್ಯರು. ವೀರಬಲ್ಲಾಳನ ಕ್ಷಾತ್ರತೇಜಸ್ಸು, ವಿದ್ಯಾರಣ್ಯರ ಬ್ರಹ್ಮತೇಜಸ್ಸು, ಈ ಎರಡೂ ಕರ್ಣಾಟಕದ ಅಂತಶ್ಶಕ್ತಿಗಳಾಗಿ ನಿಂತು ಸ್ವಾತಂತ್ರ್ಯದ ಮತ್ತು ಸ್ವಾರಾಜ್ಯದ ಜ್ಯೋತಿಯನ್ನು ಬೆಳಗಿಸಿದುವು.

ದ್ವಾರಸಮುದ್ರ ರಾಜಧಾನಿಯನ್ನು ಮಲ್ಲಿಕಾಫರನು ಹಾಳುಮಾಡಿದ ಮೇಲೆ ವೀರಬಲ್ಲಾಳರಾಯನು ಕನ್ನಡ ರಾಜ್ಯಶಕ್ತಿಯನ್ನು ಪುನಃ ಸ್ಥಾಪಿಸಲು ಭಗೀರಥ ಪ್ರಯತ್ನಗಳನ್ನು ನಡೆಯಿಸುತ್ತಿದ್ದನು. ಈ ಸಂಕಲ್ಪವನ್ನು ಈಡೇರಿಸಲು ಅವನು ಮೂವತ್ತು ವರ್ಷ ಕಾಲ ಒಂದೇ ಸಮನೆ ದುಡಿದನು. ಅಂದಿನ ಅವನ ಕಾರ್ಯಕ್ಷೇತ್ರ ತಿರುವಣ್ಣಾಮಲೆ. ಆ ಕಾಲದಲ್ಲಿ ವಿದ್ಯಾರಣ್ಯರಿಗೆ ಕರ್ಣಾಟಕದ ಪರಿಸ್ಥಿತಿ ಸುವ್ಯಕ್ತವಾಗಿತ್ತು. ಮಹಮುದ್ ಬಿನ ತೊಗಲಕನ ಹಾವಳಿಯಿಂದ ಆನೆಗೊಂದಿ ಮತ್ತು ಕಂಪಿಲರಾಜ್ಯಗಳು ನಡುಗುತ್ತಿದ್ದುವು. ದೇಶಭ್ರಷ್ಟರಾದ ನಾಯಕರು ಆಗ ತಿರುವಣ್ಣಾಮಲೆಯಲ್ಲಿದ್ದ ಬಲ್ಲಾಳರಾಯನ ಬಳಿವಿಡಿದರು. ಇಂಥ ರಾಜವೃಂದದ ಮೇಲೆ ವಿದ್ಯಾರಣ್ಯರ ಪ್ರಭಾವ ಬೀಳದಿರಲಿಲ್ಲ. ಜನಾಂಗದಲ್ಲಿ ಸಂಘಟನೆಯನ್ನುಂಟುಮಾಡಿ ಸ್ವರಾಜ್ಯವನ್ನು ಸ್ಥಾಪಿಸುವುದರಲ್ಲಿ ವಿದ್ಯಾರಣ್ಯರು ಬಲ್ಲಾಳರಾಯನ ನೇತೃತ್ವದಲ್ಲಿ ಒಟ್ಟುಗೂಡುತ್ತಿದ್ದ ರಾಜನ್ಯರನ್ನು ಹುರಿದುಂಬಿಸಿ ಸಮಯೋಚಿತ ಮಂತ್ರಾಲೋಚನೆಯನ್ನು ತಿಳಿಸುತ್ತ ಸಮಯನಿರೀಕ್ಷೆಯಿಂದ ಕಾರ್ಯ ಸಾಧಿಸಲು ಸಜ್ಜುಗೊಳಿಸುತ್ತಿದ್ದರು.

ವಿದ್ಯಾರಣ್ಯರು ಕನ್ನಡ ನಾಡನ್ನು ಒಂದುಗೂಡಿಸಿ, ಶತ್ರು ನಿಗ್ರಹ ಮಾಡಲು ವೀರನಾಯಕರ ಸಹಾಯವನ್ನು ಸಮಯವರಿತು ಉಪಯೋಗಿಸಿಕೊಂಡರು. ನಾಡಿನ ಗಡಿಗಳನ್ನು ಕಾಯಲು ಬಲವಾದ ಯೋಧಪಡೆಗಳನ್ನು ನೇಮಿಸಿ, ಒಳನಾಡಿನಲ್ಲಿ ಆಗತಾನೆ ಮನೆಮಾಡಿಕೊಳ್ಳುತ್ತಿದ್ದ ಪರಕೀಯರನ್ನು ದೇಶದಿಂದ ಉಚ್ಚಾಟನೆ ಮಾಡಬೇಕೆಂದು ನಿರ್ಧರಿಸಿದರು. ತುಂಗಭದ್ರೆಯ ಉತ್ತರ ಪ್ರಾಂತದಲ್ಲಿ ದೇವಗಿರಿ ಮುಸಲ್ಮಾನರ ನೆಲೆವೀಡಾಯಿತು. ಅದರಂತೆಯೇ ದಕ್ಷಿಣದಲ್ಲಿ ಮಧುರೆಯೂ ಇವರಿಗೆ ಪ್ರಧಾನ ಕಾರ್ಯಕ್ಷೇತ್ರವಾಗಿತ್ತು. ಹೀಗೆ, ಉತ್ತರದಿಂದಲೂ, ದಕ್ಷಿಣದಿಂದಲೂ ಶತ್ರುಗಳು ನುಗ್ಗಿ ಬರುವ ಪರಿಸ್ಥಿತಿ ಇತ್ತು. ಅದರಿಂದ ಕರ್ಣಾಟಕ ನುಚ್ಚುನೂರಾಗುವ ಸಂಭವವಿತ್ತು. ಈ ರಾಜಕೀಯ ಸ್ಥಿತಿಗಳನ್ನು ವಿಮರ್ಶಿಸಿ, ವಿದ್ಯಾರಣ್ಯರು ನಾಯಕರ ಶಕ್ತಿಯನ್ನು ಕರ್ಣಾಟಕದಲ್ಲಿ ಕೇಂದ್ರೀಕರಿಸುವ ಮಹಾಕಾರ್ಯದಲ್ಲಿ ತಮ್ಮ ಪ್ರಭಾವವನ್ನು ಪರಿಣಾಮಕರವಾಗಿ ಬೀರಿದರು. ಇದು ದೇಶಹಿತ ದೃಷ್ಟಿಯಿಂದ ಬಹು ಮುಖ್ಯಕಾರ್ಯವಾಯಿತು. ಕ್ಷತ್ರಿಯ

ವೀರರ ಭುಜಬಲಕ್ಕೆ ವಿದ್ಯಾರಣ್ಯರ ಪ್ರಚೋದನಶಕ್ತಿ ಭುಜಕೀರ್ತಿಯಾಯಿತು ; ಕನ್ನಡಿಗರ ಭವಿಷ್ಯ ಜೀವನಕ್ಕೆ ಮುಂಬೆಳಗಾಯಿತು.

ವೀರಬಲ್ಲಾಳರಾಯನು ಪದಚ್ಯುತನಾಗಿ ತಿರುವಣ್ಣಾಮಲೆಯಲ್ಲಿ ಬೀಡು ಬಿಟ್ಟು ರಾಜಕಾರ್ಯಸಂಧಾನದಲ್ಲಿದ್ದಾಗ ವಿದ್ಯಾರಣ್ಯರಂಥ ಕಾರ್ಯ ಚತುರರ ಮತ್ತು ಧರ್ಮವೀರರ ನೆರವು ದೊರೆತುದೇನು ಸಾಮಾನ್ಯವಲ್ಲ ! ಚರಿತ್ರೆಯಲ್ಲಿ ಇಂಥ ಘಟನೆ ನಡೆಯುವುದೇ ಅಪರೂಪ ; ಇದರಿಂದ ರಾಜ್ಯ ಸ್ಥಾಪನೆಯ ಕಾರ್ಯ ಸುಗಮವಾಯಿತು. ಪ್ರಭುಶಕ್ತಿ ಮತ್ತು ಮಂತ್ರಶಕ್ತಿ ಅಲ್ಲದೆ ಜನತಾಶಕ್ತಿ–ಈ ತ್ರಿಕೂಟಾಚಲದ ಉತ್ತುಂಗ ಶಿಖರದಲ್ಲಿ ಕರ್ಣಾಟಕದ ಕೀರ್ತಿಧ್ವಜ ಹಾರಾಡುವ ಸುಯೋಗ ಲಭಿಸಿತು. ಮುಂದಿನ ಕರ್ಣಾಟಕದ ಅಭ್ಯುದಯ ಸಾಧನೆಗೆ ಇದು ಪೂರ್ವರಂಗವಾಯಿತು. ಈ ರಂಗ ಪೂಜೆಯನ್ನು ಮಾಡಿದವರು ಆಚಾರ್ಯ ವಿದ್ಯಾರಣ್ಯರು ! ನಾಯಕನಿಗೂ, ವೀರ ಯೋಧರಿಗೂ ದೇಶಸೇವಾದೀಕ್ಷೆಯನ್ನು ಕೊಟ್ಟು ಮುಂದೆ ಸ್ವಾತಂತ್ರ್ಯವನ್ನು ಗಳಿಸುವ ಕರ್ತವ್ಯ ಕರ್ಮಯಜ್ಞದಲ್ಲಿ ಮಹಾಧ್ವರ್ಯುವಾದರು. ವೀರಬಲ್ಲಾಳರಾಯನು ತನ್ನನ್ನು ಓಲೈಸಿ ಬಂದಿದ್ದ ಅನೇಕ ವೀರರನ್ನು ಈ ಕಾರ್ಯದಲ್ಲಿ ಯೋಜಿಸಿಕೊಂಡನು. ಉತ್ತರದ ಕಡೆಯಿಂದ ಶತ್ರುಗಳು ಸುಳಿಯದಂತೆ ನೋಡಿಕೊಳ್ಳಲು ಬಲಿಷ್ಠನಾದ ಹರಿಹರನೂ, ಅವನ ತಮ್ಮ ಬುಕ್ಕರಾಯನೂ ನಿಯೋಜಿತರಾದರು. ಇವರಿಬ್ಬರೂ ಆನೆಗೊಂದಿ ರಾಜಧಾನಿಯಲ್ಲಿದ್ದುಕೊಂಡು, ವಿದ್ಯಾರಣ್ಯರ ಕಾಲೋಚಿತ ಸಲಹೆಗಳನ್ನು ಅನುಸರಿಸುತ್ತ ಕೃತಕಾರ್ಯರಾದರು. ಹುಕ್ಕಬುಕ್ಕರು ಆಶ್ರಯವಿಲ್ಲದೆ ಕಾಡುಮೇಡುಗಳಲ್ಲಿ ಅಲೆಯುತ್ತಿದ್ದಾಗ ದೈವಾನುಕೂಲದಿಂದ ವಿದ್ಯಾರಣ್ಯರ ಸಂದರ್ಶನವಾಗಿ ಅವರು ಕರ್ಣಾಟಕ ರಾಜ್ಯಸ್ಥಾಪನೆಯಲ್ಲಿ ನೆರವಾದರು. ಅದುವರೆಗಾಗಲೇ ವಿದ್ಯಾರಣ್ಯರ ಮನಸ್ಸಿನಲ್ಲಿ ಸ್ವರಾಜ್ಯಸ್ಥಾಪನೆಯ ಸಂಕಲ್ಪ ಮೂಡಿತ್ತು. ಅವರ ಮನಸ್ಸು ಈ ಕಾರ್ಯಸಾಧನೆಗಾಗಿ ಹದನಾಗುತ್ತಿತ್ತು. ಅಷ್ಟುಹೊತ್ತಿಗೆ, ದ್ವಾರಸಮುದ್ರಕ್ಕೆ ಶತ್ರುಗಳಿಂದ ಪೆಟ್ಟು ಬಿದ್ದು ಅದರ ಶಕ್ತಿ ಕುಂದಿತ್ತು. ವಿದ್ಯಾರಣ್ಯರು ಈ ಪರಿಸ್ಥಿತಿಗಳನ್ನೆಲ್ಲ ಚೆನ್ನಾಗಿ ಅರಿತಿದ್ದರು. ಆದ್ದರಿಂದ ಅವರು ಹುಕ್ಕಬುಕ್ಕರನ್ನು ಈ ಪ್ರಯತ್ನದಲ್ಲಿ ತೊಡಗಿಸಿದರು. ಇದರಿಂದ ತಿರುವಣ್ಣಾಮಲೆಯಲ್ಲಿದ್ದುಕೊಂಡು ವೀರಬಲ್ಲಾಳರಾಯನು ನಡಸ್ಸು

ತ್ತಿದ್ದ ರಾಜಕಾರ್ಯಾನುಸಂಧಾನಗಳಿಗೆ ಮತ್ತಷ್ಟು ಬಲ ಬಂದಂತಾಯಿತು. ಪ್ರಬಲರಾದ ಮಹಾಮಂಡಲೇಶ್ವರರನ್ನು ನಿಯಮಿಸಿ ಗಿರಿದುರ್ಗಗಳಲ್ಲಿಯೂ ವನದುರ್ಗಗಳಲ್ಲಿಯೂ ದೊಡ್ಡ ದೊಡ್ಡ ಸೈನ್ಯಗಳನ್ನಿಟ್ಟು ನಾಡಿನ ಗಡಿಗಳನ್ನು ಭದ್ರಪಡಿಸಿದರು. ಹರಿಹರ, ಕಂಪಣ್ಣ, ಮಾದಪ್ಪ ಮತ್ತು ಬುಕ್ಕರಾಯ—ಇವರು ರಾಜಕಾರ್ಯಧುರಂಧರರಾಗಿ ಚತುರ್ಗಜಗಳಂತೆ ನಿಂತರು. ಈ ನಾಲ್ಕೂ ನಿಟ್ಟಿನಲ್ಲಿ ನಡೆಯುತ್ತಿದ್ದ ರಾಜಕಾರ್ಯಗಳನ್ನು ವೀರಬಲ್ಲಾಳನು ಜಾಗರೂಕತೆಯಿಂದ ನೋಡಿಕೊಳ್ಳುತ್ತಿದ್ದನು. ವಿದ್ಯಾರಣ್ಯರು ಬಹು ಜತನದಿಂದ ಜನಾಂಗದಲ್ಲಿ ಸಂಘಟನೆಯನ್ನೂ, ಸಾಮರ್ಥ್ಯವನ್ನೂ ಸಂವರ್ಧನಗೊಳಿಸುತ್ತಿದ್ದರು.

ಉತ್ತರ ಪ್ರಾಂತದಲ್ಲಿ ಮಹಾಮಂಡಲೇಶ್ವರನಾಗಿದ್ದ ಹರಿಹರನು ವಿದ್ಯಾರಣ್ಯರ ಸಲಹೆಯಂತೆ ಪ್ರಜಾಕ್ಷೋಭೆಯನ್ನು ನಿಲ್ಲಿಸಿ ಸ್ವರಾಜ್ಯವನ್ನು ಕಟ್ಟುವುದರಲ್ಲಿ ಎಡೆಬಿಡದೆ ಪ್ರಯತ್ನಮಾಡುತ್ತಿದ್ದನು. ವಿದ್ಯಾರಣ್ಯರು ಚಾಕಚಕ್ಯದಿಂದ ಹರಿಹರನಿಗೆ ಆನೆಗೊಂದಿಯ ರಾಜಸಂಬಂಧವನ್ನು ಕೂಡಿಸಿದರು. ಮೊದಲೇ ಆನೆಗೊಂದಿ, ಕಂಪಿಲ ಮತ್ತು ಇತರ ಪ್ರಾಂತ್ಯಗಳ ನಾಯಕರ ಪ್ರೀತಿ ಗೌರವಗಳಿಗೆ ಪಾತ್ರರಾಗಿದ್ದ ವಿದ್ಯಾರಣ್ಯರ ಪ್ರಭಾವ ಹರಿಹರನಮೇಲೆ ಬಿದ್ದುದರಿಂದ, ಅವನ ರಾಜಕಾರ್ಯಗಳು ಅತಿ ವೇಗವಾಗಿಯೂ ರೂಢಮೂಲವಾಗಿಯೂ ನಡೆಯುವಂತಾದುವು. ಕಾಲಕ್ರಮದಲ್ಲಿ ಹರಿಹರನು ಜಂಬುಕೇಶ್ವರರಾಯನ ರಾಜ್ಯಕ್ಕೆ ಒಡೆಯನಾದನು. ಅವನು ಮುಸಲ್ಮಾನರ ಶಕ್ತಿಯನ್ನು ಅಡಗಿಸುತ್ತ ಬಂದನು. ಅಲ್ಲದೆ, ಆನೆಗೊಂದಿಯ ಪ್ರದೇಶದಲ್ಲಿ ಅವನು ಹಿಂದುಗಳ ಶಕ್ತಿಕೇಂದ್ರವನ್ನು ನಿರ್ಮಿಸುವುದರಲ್ಲಿ ದುಡಿಯುತ್ತಿದ್ದನು. ವಿಜಯನಗರವನ್ನು ಸ್ಥಾಪಿಸಿ ಹರಿಹರನಿಗೆ ರಾಜ್ಯಾಭಿಷೇಕ ಮಾಡಿಸಿದಮೇಲೆ ದಕ್ಷಿಣಾಪಥದಲ್ಲಿಯೇ ಒಂದು ವಿನೂತನ ಶಕ್ತಿ ಮೂಡಿತು. ಜನಜೀವನದ ಮೇಲೆ ರಾಜಶಕ್ತಿಯ ಮುದ್ರೆ ಬಿತ್ತು. ಸ್ವಾತಂತ್ರ್ಯ ಪ್ರೇಮ ಜನರಲ್ಲಿ ತುಂಬಿತು.

ವೀರಬಲ್ಲಾಳರಾಯನಿಗೆ ವಯಸ್ಸಾಗುತ್ತ ಬಂತು. ಆತನ ದಾಯಾದಿಗಳಲ್ಲಿ ಯಾರೊಬ್ಬರೂ ಶೂರರಾಗಿರಲಿಲ್ಲ. ಅವನ ಮನೆತನದ ವೀರ ಪರಂಪರೆ ನಿಂತುಹೋಗುವ ಕಾಲ ಬಂತು. ಹೊಯ್ಸಳ ರಾಜಶಕ್ತಿ ಕುಂದಿತು.

ಅರಸೊತ್ತಿಗೆ ಕಳಚಿಬಿತ್ತು. ಹಿಂದೂ ಸ್ವರಾಜ್ಯವನ್ನು ಸ್ಥಿರಗೊಳಿಸಿ, ಹಿಂದೂ ಸಂಸ್ಕೃತಿಯನ್ನು ಸಂರಕ್ಷಿಸುವ ಭಾರ ಹರಿಹರನಿಗೆ ಬಂತು. ವಿದ್ಯಾರಣ್ಯರ ಮನೋಭಿಲಾಷೆ ಫಲಿಸಿತು. ಜನಾಂಗದಲ್ಲಿ ಪ್ರಚಂಡವಾದ ಜಾಗೃತಿಯುಂಟಾಯಿತು. ವಿಜಯನಗರ ಶಂಕುಸ್ಥಾಪನೆಯ ಸಮಾರಂಭದಲ್ಲಿ ಅವರು ಕನ್ನಡ ಜನರನ್ನು ಉದ್ದೇಶಿಸಿ ಆಡಿದ ಮಾತುಗಳೂ, ಶ್ರೀ ವಿರೂಪಾಕ್ಷಸ್ವಾಮಿಯ ರಥೋತ್ಸವ ಸಂದರ್ಭದಲ್ಲಿ ಹೇಳಿದ ವೀರವಾಣಿಯೂ ನಾಡನ್ನು ಎಚ್ಚರಗೊಳಿಸಿದುವು. ಅಖಿಲ ಜನತೆಯ ಮನಸ್ಸಿನಮೇಲೆ ಮಾಸಿಹೋಗದಂಥ ಪ್ರಭಾವವನ್ನುಂಟುಮಾಡಿದುವು.

ವಿದ್ಯಾರಣ್ಯರು ಆಗಿನ ಪರಿಸ್ಥಿತಿಗಳನ್ನು ತಿಳಿದು ಹಿಂದೂಜನತೆಯಲ್ಲಿ ಪ್ರಬಲವಾದ ಜಾಗೃತಿಯನ್ನುಂಟುಮಾಡಿ, ಪ್ರತಿಕಾರ ಶಕ್ತಿಯನ್ನು ಬೆಳೆಯಿಸಿದರು. ಹರಿಹರನ ಸ್ವರಾಜ್ಯಸ್ಥಾಪನೆಯ ಪ್ರಯತ್ನಕ್ಕೆ ಅವರು ಪ್ರೇರಕರೂ ಸಹಾಯಕರೂ ಆಗಿದ್ದರೆಂಬುದರಲ್ಲಿ ಅನುಮಾನವಿಲ್ಲ. ಅವರು ಜನರ ಬೆಂಬಲವನ್ನು ಗಳಿಸಿಕೊಟ್ಟು, ಜನಾಂಗದ ಶಕ್ತಿಯನ್ನು ಒಂದುಗೂಡಿಸಿ ಅಧಿನಾಯಕರಿಗೆ ವಿಶೇಷ ಪ್ರೋತ್ಸಾಹ ಕೊಟ್ಟರು. ಸ್ವರಾಜ್ಯವನ್ನು ಕಟ್ಟುವ ಮಾರ್ಗದಲ್ಲಿ ಅಡ್ಡವಾಗಿದ್ದ ವೈರಿಗಳನ್ನು ಜಯಿಸಿ, ಕಾರ್ಯವನ್ನು ನಿರ್ವಿಘ್ನವಾಗಿ ನಡಸುವುದರಲ್ಲಿ ಅವರು ಹರಿಹರನೊಂದಿಗೆ ಸುಮಾರು ಹತ್ತು ವರ್ಷ ಕಾಲ ಅತ್ಯಂತ ದಕ್ಷತೆಯಿಂದ ತೊಡಗಿದರು. ಕನ್ನಡಿಗರ ಸಂಘಟನೆ ದಿನ ದಿನಕ್ಕೆ ಬೆಳೆಯುತ್ತ ಬಂತು. ಆಂಧ್ರ ಪ್ರಾಂತದಲ್ಲಿ ಕಂಪಣ್ಣನ ಪ್ರಾಬಲ್ಯದಿಂದ ಶತ್ರುಗಳು ತಣ್ಣಗಾದರು. ಸಾಯಣಾಚಾರ್ಯರೂ ಈ ಮಹಾಕಾರ್ಯದಲ್ಲಿ ಅವಿಶ್ರಾಂತರಾಗಿ ದುಡಿದರು. ಪಶ್ಚಿಮಭಾಗದಲ್ಲಿ ಮಾರಪ್ಪನು ಮಲೆನಾಡನ್ನು ಜಯಿಸಿ ವಿಜಯನಗರ ಸಾಮ್ರಾಜ್ಯದ ಪ್ರಭಾವವನ್ನು ಹೆಚ್ಚಿಸಿದನು. ಬುಕ್ಕರಾಯನು ಹರಿಹರನಿಗೂ ವೀರಬಲ್ಲಾಳರಾಯನಿಗೂ ಸಹಾಯಕನಾಗಿದ್ದುಕೊಂಡು ದಕ್ಷಿಣದಲ್ಲಿ ವಿಜಯನಗರದ ಪ್ರಾಬಲ್ಯವನ್ನು ನೆಲೆಗೊಳಿಸಿದನು. ಮಧುರೆಯಮೇಲೆ ವೀರಬಲ್ಲಾಳರಾಯನು ನಡಸಿದ ದಂಡಯಾತ್ರೆಯಲ್ಲಿ ಅವನು ಮಡಿದುಬಿದ್ದನು. ಅವನ ಮಗ ವೀರ ವಿರೂಪಾಕ್ಷ ನಾಲ್ವಡಿ ಬಲ್ಲಾಳನು ಅಷ್ಟು ಶಕ್ತನಾಗಿರಲಿಲ್ಲ. ಅವನೂ ಸ್ವಲ್ಪ ಕಾಲದಲ್ಲಿಯೇ ಸತ್ತುಹೋದನು. ಹರಿಹರನೇ ಕನ್ನಡ ರಾಜ್ಯದ ಒಡೆಯನಾದನು.

ವಿಜಯ ನಗರದ ಸಾಮ್ರಾಜ್ಯಸ್ಥಾಪನೆಯ ಮಹಾಕಾರ್ಯದಲ್ಲಿ ಶೃಂಗೇರಿ ಪೀಠದ ಗುರು ವಿದ್ಯಾರಣ್ಯರ ಆಧ್ಯಾತ್ಮಿಕ ಬೆಂಬಲವಿತ್ತೆಂಬುದಕ್ಕೆ ಪ್ರಮಾಣ ವುಂಟು. ತನ್ನ ಸ್ವರಾಜ್ಯಸ್ಥಾಪನೆಯ ಕಾರ್ಯಕ್ಕೆ ಪ್ರಬಲ ಸ್ಫೂರ್ತಿಯನ್ನು ನೀಡಿದ ವಿದ್ಯಾರಣ್ಯರಿಗೆ ಹರಿಹರನು ವಿಶೇಷ ಗೌರವ ತೋರಿಸಿದನು. ತಾನು ಶ್ರೀ ಮಠಕ್ಕೆ ಸಪರಿವಾರನಾಗಿ ಹೋಗಿ ಅಲ್ಲಿ ವಿದ್ಯಾರಣ್ಯರ ಆಶೀರ್ವಾದವನ್ನು ಪಡೆದು ಮಹಾದಾನವನ್ನು ಮಾಡಿದನು.

ಭಾರತೀಯರ ರಾಜಕೀಯ ಚರಿತ್ರೆಯನ್ನು ಅವಲೋಕಿಸಿದರೆ ಧರ್ಮ ಗುರುಗಳೂ ಆಧ್ಯಾತ್ಮಿಕಜ್ಞಾನಸಂಪನ್ನರೂ ಪುಣ್ಯಪುರುಷರೂ ರಾಜ್ಯ ಸ್ಥಾಪನೆಯಲ್ಲಿಯೂ ರಾಜಕಾರ್ಯಗಳಲ್ಲಿಯೂ ಆಗಾಗ ಸ್ಫೂರ್ತಿಯನ್ನುಂಟು ಮಾಡಿ ನೆರವಾಗಿದ್ದಾರೆ. ಹರಿಹರ ಬುಕ್ಕರಾಯರಿಗೆ ವಿದ್ಯಾರಣ್ಯರು ಈ ರಾಜ್ಯಸ್ಥಾಪನೆಯ ಕಾರ್ಯದಲ್ಲಿ ನೆರವಾದರು. ಅವರು ತಮ್ಮ ಅಸಾಧಾರಣ ಪಾಂಡಿತ್ಯ, ಮಹಾಜ್ಞಾನ, ವೀರವೈರಾಗ್ಯ ಮುಂತಾದ ದೈವೀಶಕ್ತಿಯಿಂದಲೂ ಆಧ್ಯಾತ್ಮಿಕ ಪ್ರಭೆಯಿಂದಲೂ ಜನತೆಯಮೇಲೆ ತಮ್ಮ ಪ್ರಭಾವವನ್ನು ಬೀರಿ ದರು. ರಾಜ್ಯಸ್ಥಾಪನೆಯ ಸಂಪೂರ್ಣವಾದ ಕೀರ್ತಿ ಇವರಿಗೇ ಸಲ್ಲುತ್ತದೆ. ಈ ಮಹಾಪುರುಷರು ಕ್ರಿ. ಶ. ೧೩೮೬ನೆಯ ಇಸವಿಯಲ್ಲಿ ಸಮಾಧಿಸ್ಥ ರಾದರು.

ವಿದ್ಯಾರಣ್ಯರ ಕೀರ್ತಿಲತೆ ಸೂರ್ಯಚಂದ್ರರಿರುವವರೆಗೆ ವರ್ಧಿಸುತ್ತದೆ. ಕರ್ಣಾಟಕ ಸಂಸ್ಕೃತಿ ಚಿರನೂತನವಾಗಿ ಉಳಿಯಲಿ. ಕರ್ಣಾಟಕ ರಾಜ್ಯಲಕ್ಷ್ಮಿ ಚಿರಂಜೀವಿನಿಯಾಗಿ ಬಾಳಲಿ !

"ಚಿರಮಭಿವರ್ಧತಾಂ ಯದುಸಂತಾನ ಶ್ರೀಃ"

# ಪರಿಶಿಷ್ಟ

## ಪಂಪಾಕ್ಷೇತ್ರ, ಇತಿಹಾಸ, ಪರಿಚಯ.

ಶ್ರೀ ವಿದ್ಯಾರಣ್ಯರ ಪುಣ್ಯಜೀವನದ ಕಾರ್ಯಕ್ಷೇತ್ರವೆಂದರೆ ಪಂಪಾಕ್ಷೇತ್ರ! ಆದ್ದರಿಂದ ಈ ಕ್ಷೇತ್ರದ ಇತಿಹಾಸವನ್ನು ಸ್ವಲ್ಪಮಟ್ಟಿಗೆ ತಿಳಿಯಬೇಕಾದುದು ಆವಶ್ಯಕ. ಇದು ತುಂಗಭದ್ರಾನದಿಯ ದಕ್ಷಿಣ ತೀರದಲ್ಲಿದೆ. ಬಳ್ಳಾರಿ ಜಿಲ್ಲೆಯ ಹೊಸಪೇಟೆಗೆ ಸುಮಾರು ಒಂಬತ್ತು ಮೈಲಿ ದೂರದಲ್ಲಿದೆ. ಇದು ಇತಿಹಾಸ ಪ್ರಸಿದ್ಧವಾದ ಸ್ಥಳ. ಇಲ್ಲಿರುವ ಶ್ರೀ ವಿರೂಪಾಕ್ಷಸ್ವಾಮಿಯ ದೇವಸ್ಥಾನ ಅತಿ ಪ್ರಾಚೀನವಾದುದು. ಹಿಂದೆ ಬ್ರಹ್ಮನ ಮಗಳು ಪಂಪೆಯೆಂಬುವಳು ವಿರೂಪಾಕ್ಷನನ್ನು ಮದುವೆಯಾದಳಂತೆ. ಆದರಿಂದ ವಿರೂಪಾಕ್ಷನಿಗೆ ಪಂಪಾಪತಿಯೆಂದೂ, ಈ ಸ್ಥಳಕ್ಕೆ ಪಂಪಾಕ್ಷೇತ್ರವೆಂದೂ ಹೆಸರಾಯಿತು. ವಿರೂಪಾಕ್ಷಸ್ವಾಮಿಯೇ ಈ ಕ್ಷೇತ್ರದ ಅಧಿನಾಯಕ, ವಿಜಯನಗರದ ರಾಜರ ಕುಲದೈವ. ಈ ದೇವಾಲಯ ಪೂರ್ವಾಭಿಮುಖವಾಗಿದೆ. ಇದಕ್ಕೆ ಎರಡು ಮಹಾದ್ವಾರಗಳಿವೆ. ಒಂದು ಪೂರ್ವದಿಕ್ಕಿನಲ್ಲಿದೆ; ಇನ್ನೊಂದು ಉತ್ತರಭಾಗದಲ್ಲಿದೆ. ಶ್ರೀ ವಿದ್ಯಾರಣ್ಯರ ಅಭಿಮತದಂತೆ ಹರಿಹರನು ಮೊದಲೇ ಇದ್ದ ಈ ದೇವಾಲಯವನ್ನು ಪುನರುಜ್ಜೀವನಮಾಡಿದನು. ಪೂರ್ವದಿಕ್ಕಿನ ಮಹಾದ್ವಾರದ ಮೂಲಕ ಒಳಕ್ಕೆ ಹೋದರೆ, ಅಲ್ಲಿ ವಿಸ್ತಾರವಾದ ಪ್ರಾಕಾರಗಳೆರಡು ಕಾಣುತ್ತವೆ. ಮೊದಲನೆಯ ಪ್ರಾಕಾರದ ಮಧ್ಯೆ ತುಂಗಭದ್ರಾನದಿಯ ಒಂದು ಕಾಲುವೆ ಹರಿಯುವಂತೆ ಮಾಡಿದ್ದಾರೆ. ಈ ಪ್ರಾಕಾರವನ್ನು ದಾಟಿ ಮುಂದೆ ಹೋದರೆ, ಎರಡನೆಯ ಪ್ರಾಕಾರದ ಮಧ್ಯೆ ಶ್ರೀ ವಿರೂಪಾಕ್ಷನ ದೇವಾಲಯವಿದೆ.

ಶ್ರೀ ವಿರೂಪಾಕ್ಷ ಲಿಂಗ ಭವ್ಯವಾಗಿದೆ. ಹಿಂದೆ ನಡೆದ ಮುಸಲ್ಮಾನರ ಧಾಳಿಗಳಲ್ಲಿ ಯಾವ ಶತ್ರುವೂ ಈ ಮಹಾಲಿಂಗವನ್ನು ಛಿನ್ನಮಾಡಲಿಲ್ಲ! ಇದನ್ನು ನೆನೆಸಿಕೊಂಡರೆ ಪ್ರೇಕ್ಷಕರಿಗೆ ಆಶ್ಚರ್ಯವುಂಟಾಗುತ್ತದೆ; ಭಕ್ತಿಭಾವ ಬೆಳೆಯುತ್ತದೆ. ಈ ದೇವಾಲಯದ ಹಿಂಭಾಗದಲ್ಲಿ ಶ್ರೀ ಭುವನೇಶ್ವರಿಯ ಗುಡಿ ಯಿದೆ. ಈ ಭುವನೇಶ್ವರೀ ದೇವಿಯೇ ಶ್ರೀ ವಿದ್ಯಾರಣ್ಯರ ಆರಾಧ್ಯದೇವತೆ. ಆಕೆಯ ವರಪ್ರಸಾದದಿಂದಲೇ ವಿದ್ಯಾರಣ್ಯರು ವಿಜಯನಗರದ

ಸಾಮ್ರಾಜ್ಯವನ್ನು ಕಟ್ಟಿದರು. ಈಕೆಯೇ ಕರ್ಣಾಟಕದ ಅಭಿಮಾನ ದೇವತೆ. ಈ ದೇವಿಯ ಗುಡಿಯ ಹಿಂಭಾಗದಲ್ಲಿ ಶ್ರೀ ವಿದ್ಯಾರಣ್ಯರ ಸಮಾಧಿ ಇದೆ. ಪ್ರತಿ ವರ್ಷ ಚೈತ್ರ ಶುದ್ಧ ಪೂರ್ಣಿಮೆಯ ದಿನ ವಿರೂಪಾಕ್ಷನ ರಥೋತ್ಸವ ನಡೆಯುತ್ತದೆ. ದೊಡ್ಡ ಜಾತ್ರೆಯಾಗುತ್ತದೆ.

ಹಂಪೆಯಲ್ಲಿ ಅತ್ಯಂತ ಸುಂದರವಾದ ದೇವಾಲಯವೆಂದರೆ ಶ್ರೀ ವಿಜಯ ವಿಠಲದೇವರ ಮಂದಿರ. ಕೃಷ್ಣದೇವರಾಯನು ಈ ದೇವಾಲಯವನ್ನು ಕಟ್ಟಿಸಲು ಪ್ರಾರಂಭಿಸಿದನು. ಆದರೆ ಆ ಕಾಲದಲ್ಲಿ ಆತನಿಗೆ ಒದಗಿದ ರಾಕ್ಷಸ ತಂಗಡಿಯ ಯುದ್ಧದ ದೆಸೆಯಿಂದ ಈ ದೇವಾಲಯದ ಕಾರ್ಯ ಪೂರ್ತಿಯಾಗದೆ ಉಳಿದಿದೆ. ಈ ದೇವಾಲಯದಲ್ಲಿರುವ ಮಹಾಮಂಟಪ, ಕಲ್ಲಿನ ತೇರು, ಕಲ್ಯಾಣ ಮಂಟಪ – ಇವು ಪ್ರೇಕ್ಷಣೀಯವಾಗಿವೆ. ಈ ಗುಡಿಯಲ್ಲಿರುವ ಶಿಲ್ಪ ಕಲಾಚಾತುರ್ಯ ಅನುಪಮವಾದುದು. ಇಷ್ಟಾದರೂ, ಈ ದೇವಾಲಯದಲ್ಲಿ ವಿಜಯವಿಠಲದೇವರ ಮೂರ್ತಿಯೇ ಇಲ್ಲ! ಇದಕ್ಕೆ ಕಾರಣವೇನೆಂಬುದನ್ನು ತಿಳಿಯುವುದು ಕಷ್ಟ. ಈ ದೇವಾಲಯದ ಮುಂದೆ ವಿಶಾಲವಾದ ತೇರಿನಬೀದಿ ಇದೆ. ನಾಲ್ಕು ದಿಕ್ಕುಗಳಲ್ಲಿಯೂ ಸಣ್ಣ ಸಣ್ಣ ದೇವಾಲಯಗಳಿವೆ. ಈ ದೇವಾಲಯಗಳಲ್ಲಿರುವ ದೇವರ ವಿಗ್ರಹಗಳೆಲ್ಲಾ ಮುಕ್ಕಾಗಿವೆ.

ವಿಜಯವಿಠಲದೇವಾಲಯದಿಂದ ಮುಂದೆ ಪೂರ್ವದಿಕ್ಕಿಗೆ ಹೋಗುವ ದಾರಿ ಆನೆಗೊಂದಿಗೆ ಸೇರುತ್ತದೆ. ನದೀ ತೀರದಲ್ಲಿ ವಿಜಯನಗರದ ಸ್ಮಶಾನ ಭೂಮಿಯಿದೆ. ಇಲ್ಲಿಂದ ಮುಂದೆ ಹೋದರೆ ಅಂಜನಾಪರ್ವತ ಪ್ರಾಂತದಲ್ಲಿರುವ ಪಂಪಾಸರೋವರ ಕಾಣುತ್ತದೆ. ಸೀತಾದೇವಿಯ ವಿಯೋಗದಿಂದ ಪರಿತಪ್ತನಾದ ಶ್ರೀರಾಮಚಂದ್ರ ಈ ಸರೋವರ ಪ್ರದೇಶದಲ್ಲಿ ಕೆಲವುಕಾಲ ಇದ್ದನಂತೆ. ಇಲ್ಲಿ ಪ್ರಕೃತಿ ಸೌಂದರ್ಯ ಮನಮೋಹಕವಾಗಿದೆ.

ಹಂಪೆ ರಾಮಾಯಣಕಾಲದಿಂದಲೂ ಪ್ರಸಿದ್ಧವಾಗಿದೆ. ಇಲ್ಲಿ ಹಬ್ಬಿರುವ ಪರ್ವತ ಶ್ರೇಣಿ, ಬೆಳೆದಿರುವ ಕಾಡು, ಹರಿಯುತ್ತಿರುವ ನದಿ–ಇವು ನಮ್ಮ ಮನಸ್ಸಿಗೆ ಆನಂದವನ್ನುಂಟುಮಾಡುತ್ತವೆ. ಕನ್ನಡ ನಾಡಿನ ಹೃದಯವಂತಿದೆ ಹಂಪೆ. ಹರಿಹರ, ರಾಘವಾಂಕ ಮುಂತಾದ ಅನೇಕ ಋಷಿ ಕವಿಗಳು ವಿರೂಪಾಕ್ಷಸ್ವಾಮಿಯ ಸನ್ನಿಧಿಯಲ್ಲಿ ಕನ್ನಡ ಕಾವ್ಯಗಳನ್ನು ಬರೆ

ದರು. ಹಲವು ಶತಮಾನಗಳ ಕಾಲ ಹಂಪೆ ರಾಜಕಾರಣ, ಸಂಸ್ಕೃತಿ, ಸಾಹಿತ್ಯ, ಧರ್ಮ–ಇವುಗಳ ಸಂಗಮಕ್ಷೇತ್ರವಾಗಿತ್ತು. ಇಂದು ಹಾಳುಬಿದ್ದಿರುವ ಹಂಪೆಯ ಅವಶೇಷಗಳನ್ನು ನೋಡಿದರೆ ಕನ್ನಡಿಗರು ಕಣ್ಣೀರಿಡುತ್ತಾರೆ. ವಿಜಯನಗರದ ಅರಮನೆ, ವಿಜಯದಶಮಿಯ ದಿಬ್ಬ, ಓಲಗಸಾಲೆ, ಹಜಾರ ರಾಮಸ್ವಾಮಿಯ ಗುಡಿ, ಮಹಾರುದ್ರ ವೀರಭದ್ರನ ಗುಡಿ, ಮಹಾಸತಿ ಕಲ್ಲುಗಳು, ಉಗ್ರ ನರಸಿಂಹದೇವರ ಗುಡಿ, ಸಾಸಿವೆ ಗಣಪತಿ, ಕಡಲೆಕಾಳಿನ ಗಣಪತಿ–ಇವೇ ಮೊದಲಾದುವು ವಿಜಯನಗರದ ಗತವೈಭವದ ಸ್ಮಾರಕಗಳಂತಿವೆ. ಇಲ್ಲಿರುವ ಹೇಮಕೂಟಪರ್ವತದ ಉತ್ತರಭಾಗದಲ್ಲಿಯೇ ಶ್ರೀ ವಿರೂಪಾಕ್ಷದೇವಾಲಯವಿದೆ.

ಈ ಮಹಾ ಪುಣ್ಯಕ್ಷೇತ್ರವೇ ವಿದ್ಯಾರಣ್ಯರ ಜೀವನರಂಗವಾಯಿತು. ಇದೇ ಅವರ ಜನ್ಮಭೂಮಿ, ತಪೋಭೂಮಿ ಮತ್ತು ಕೈವಲ್ಯ ಭೂಮಿ. ಕರ್ಣಾಟಕ ಜನಜೀವನದಲ್ಲಿ ಶ್ರೀ ವಿದ್ಯಾರಣ್ಯರು ಚಿರಸ್ಮರಣೀಯರಾಗಿದ್ದಾರೆ.

ಓಂ ಶಾಂತಿಶ್ಶಾಂತಿಶ್ಶಾಂತಿಃ

ಓ. ಎಲ್. ಲಿಂಗಣ್ಣಯ್ಯ, ಬಿ.ಎ. (ಆನರ್ಸ್)
ನಂ. ೨೦೬, ಶ್ರೀಗೌರೀವಿಹಾರ
ಶಂಕರಪುರಂ, ಬೆಂಗಳೂರು ನಗರ.